University of Mysore

Oriental Library Publications

KANNADA SERIES N.

ಗೋವಿಂದವೈದ್ಯ ಕವಿ ವಿರಚಿತ

# ಕಂಠೀರವನರಸರಾಜ ವಿಜಯಂ

# KANTIRAVANARASARAJA VIJAYAM

BY

GOVINDA VAIDYA

EDIT

...SASTHRA-V... ...KARA

DR. R. SHAMA S... ...F.R.A.S.

...rator, Government Oriental

Researches in M...

Classes of ...

...RE

PRINTED AT THE ...MENT BR...

1926



Price Rs. 2-8-0.

**University of Mysore**

Oriental Library Publications

**KANNADA SERIES No. 15**

ಗೋವಿಂದವೈದ್ಯ ಕವಿ ವಿರಚಿತವಾದ

# ಕಂಠೀರವನರಸರಾಜ ವಿಜಯಂ

# KANTIRAVANARASARAJA VIJAYAM

BY

GOVINDA VAIDYA

EDITED BY

ARTHASASTHRA-VISARADA, VIDYALANKARA

DR. R. SHAMA SASTRY, B.A., PH.D., M.R.A.S.,

*Curator, Government Oriental Library, Mysore; Director of Archæological Researches in Mysore; Periodical Lecturer to the Post-Graduates' Classes of the Calcutta University, and B.B.R.A.S. Campbell Memorial Medalist*

MYSORE

PRINTED AT THE GOVERNMENT BRANCH PRESS

1926

# ಪೀಠಿಕೆ.

ಕಂಠೀರವ ನರಸ ರಾಜ ವಿಜಯವೆಂಬ ಕಾವ್ಯವು ಗೋವಿಂದ ವೈದ್ಯನೆಂಬ ಕವಿಯಿಂದ ರಚಿಸಲ್ಪಟ್ಟಿರುವುದು. ಈ ಕವಿಯ ತಂದೆ ಶ್ರೀನಿವಾಸ ಪಂಡಿತರು. ಕವಿಯು ತನ್ನ ಸ್ಥಲವನ್ನು ಹೇಳಿಲ್ಲ ; ಆದರೂ ಗ್ರಂಥಾರಂಭದಲ್ಲಿಯೂ ಗ್ರಂಥಾಂತ್ಯದಲ್ಲಿಯೂ ಶ್ರೀರಂಗ ಪತ್ತನದ ರಂಗನಾಥನನ್ನು ಸ್ತುತಿಸಿರುವುದರಿಂದಲೂ, ತಾನು ರಾಜಾಸ್ಥಾನ ಕವಿಯಾಗಿ ಆ ರಾಜಧಾನಿಯಲ್ಲಿಯೇ ಇದ್ದವನಾದುದರಿಂದಲೇ ತನ್ನ ಸ್ಥಲವನ್ನು ಬೇರೆ ಹೇಳದೆ ಬಿಟ್ಟಿರುವನೆಂದೂಹಿಸಬಹುದಾಗಿರುವುದರಿಂದಲೂ, ಶ್ರೀರಂಗ ಪತ್ತನವೇ ಈತನ ಸ್ಥಲವಾಗಿರಬಹುದೆಂದು ತೋರುತ್ತದೆ. ಈತನು ಶಿವ ವಿಷ್ಣ್ವಾದಿ ಸಮಸ್ತ ದೇವತೆಗಳನ್ನೂ ಸಮವಾಗಿ ವರ್ಣಿಸಿರುವುದರಿಂದ ಸ್ಮಾರ್ತ ಬ್ರಾಹ್ಮಣನೆಂದು ತೋರುತ್ತದೆ. ಕವಿಯು ತಾನು ಚೆನ್ನಾಗಿ ವೇದಾಧ್ಯಯನವನ್ನು ಮಾಡಿ ಮಂತ್ರ ಶಾಸ್ತ್ರವನ್ನು ಪರಿಶೀಲಿಸಿದ್ದಂತೆ (ಪೀಠಿಕಾ ಸಂಧಿಯ ೧೧ನೆಯ ಪದ್ಯದಲ್ಲಿ) ಸೂಚಿಸಿರುತ್ತಾನೆ. ಈತನು ಕಾವ್ಯ ನಾಟಕಾಲಂಕಾರ ಗ್ರಂಥಗಳನ್ನು ಸಾಮಾನ್ಯವಾಗಿ ಅಭ್ಯಸಿಸಿ ವಿಷಯ ವರ್ಣನಾ ಕ್ರಮವನ್ನು ಚೆನ್ನಾಗಿ ತಿಳಿದಿದ್ದನೆಂಬುದು ಈ ಕಾವ್ಯದಲ್ಲಿರುವ ವರ್ಣನೆಗಳಿಂದಲೇ ತಿಳಿಯುತ್ತದೆ. ಈತನಿಗೆ ಸಂಸ್ಕೃತ, ಕರ್ಣಾಟ ಭಾಷೆಗಳೆರಡರಲ್ಲಿಯೂ ಸಮವಾದ ತಿಳವಳಿಕೆಯಿತ್ತೆಂದು ತೋರುತ್ತದೆ. ಈತನು ಇನ್ನಾವ ಗ್ರಂಥಗಳನ್ನು ರಚಿಸಿರುವನೋ ಗೊತ್ತಿಲ್ಲ. ಈ ಕಂಠೀರವ ನರಸ ರಾಜ ವಿಜಯ ಕಾವ್ಯವನ್ನು ಮಾತ್ರ ಕಂಠೀರವ ನರಸ ರಾಜೊಡೆಯರ ದಳವಾಯಿ ನಂಜರಾಜೇಂದ್ರರ ಪ್ರೇರಣೆಯಿಂದ ರಚಿಸಿದಂತೆ (ಪೀಠಿಕಾ ಸಂಧಿಯ ೭೮ನೆಯ ಪದ್ಯದಲ್ಲಿ) ಹೇಳಿರುತ್ತಾನೆ. ಇದು ಶಾಲಿವಾಹನ ಶಕ ೧೫೭೦ಕ್ಕೆ ಸಂದ ಸರ್ವಧಾರಿ ಸಂವತ್ಸರದಲ್ಲಿ ಎಂದರೆ ಕ್ರಿಸ್ತ ಶಕ ೧೬೪೮ರಲ್ಲಿ ರಚಿಸಲ್ಪಟ್ಟಿತೆಂದು

ಗ್ರಂಥದ ಕೊನೆಯಲ್ಲಿರುವ ವಾಕ್ಯದಿಂದ ತಿಳಿಯುತ್ತದೆ. ಅದೇ ವಾಕ್ಯದಿಂದಲೇ ಕವಿಯು ಕಂಠೀರವ ನರಸ ರಾಜ ವಿಜಯವೆಂಬೀ ಗ್ರಂಥವನ್ನು ತಾನು ರಚಿಸಿ ಭಾರತಿ ನಂಜನೆಂಬವನಿಂದ ರಾಜಾಸ್ಥಾನದಲ್ಲಿ ಓದಿಸಿದನೆಂಬುದೂ ತಿಳಿಯುತ್ತದೆ. ಈ ವಿಷಯವನ್ನು ಪೀಠಿಕಾ ಸಂಧಿಯಲ್ಲಿಯೂ * ಸೂಚಿಸಿರುತ್ತಾನೆ. ಕವಿಯು ಪೀಠಿಕಾ ಸಂಧಿಯ ೧೪ನೆಯ ಪದ್ಯದಲ್ಲಿ ವ್ಯಾಜ ಸ್ತುತಿಯಿಂದ ದುರ್ಜನರನ್ನು ನಿಂದಿಸಿದ್ದರೂ ಕನ್ನಡದ ಕವಿಗಳಲ್ಲಿ ವಿಶೇಷವಾಗಿ ಕಂಡು ಬರುವ ಆತ್ಮ ಸ್ತುತಿ, ಪರ ನಿಂದೆಗಳು ಈತನಲ್ಲಿ ಕಂಡು ಬರುವುದಿಲ್ಲ. ಈತನು ಅಹಂಕಾರಿಯಲ್ಲದೆ ಬಹು ವಿನೀತನಾಗಿದ್ದನೆಂಬ ವಿಷಯವು ಪೀಠಿಕಾ ಸಂಧಿಯ ೧೫ನೆಯ ಪದ್ಯದಿಂದಲೂ ಗ್ರಂಥಾಂತ್ಯದಲ್ಲಿರುವ ಪದ್ಯದಿಂದಲೂ ಚೆನ್ನಾಗಿ ತಿಳಿಯುತ್ತದೆ.

ಕವಿಯು ಈ ಕಾವ್ಯವನ್ನು ಮೊದಲಿಂದ ಕೊನೆಯವರೆಗೂ ಓದುವುದಕ್ಕೆ ಸುಲಭವಾಗಿಯೂ, ಕೇಳುವುದಕ್ಕೆ ಇಂಪಾಗಿಯೂ, ಇರುವ ಮಾತ್ರಾ ವೃತ್ತಗಳಲ್ಲೊಂದಾದ ಸಾಂಗತ್ಯ ವೃತ್ತದಿಂದ ರಚಿಸಿರುತ್ತಾನೆ. ಪೀಠಿಕಾ ಸಂಧಿಯ ೧೩ನೆಯ ಪದ್ಯದಲ್ಲಿ ಹೇಳಿರುವಂತೆ ವೃತ್ತಗಳು ಲಕ್ಷಣ ಬದ್ಧಗಳಾಗಿವೆ. ಇದರಲ್ಲಿ ಉಪಯೋಗಿಸಿರುವ ಭಾಷೆಯು ಶುದ್ಧವಾಗಿಯೂ, ಲಲಿತವಾಗಿಯೂ, ಇರುವ ಹೊಸಗನ್ನಡವು. ಇದು ಹೊಸಗನ್ನಡದ ವ್ಯಾಕರಣಕ್ಕೆ ಸರಿಯಾಗಿದ್ದರೂ ವ್ಯಾಕರಣ ಸೂತ್ರದಲ್ಲಿ ಹೇಳಿರುವ 'ಬಹುಳವಾಗಿ ಬರುವುದು' ಎಂಬ ಮಾತಿನ ಬಲದಿಂದ ಚೆಲುವಾಂತುವೊಪ್ಪುವ (೭ ಸಂ ೧೦ ಪ), ಹರನಂತೆಯಾರಾಮ (ಸಂ. ೭, ಪ ೪೭) ಮುಂತಾದ ಕೆಲವು ಕಡೆಗಳಲ್ಲಿ ಉಚಿತವಾದ ಲೋಪ ಸಂಧಿಯನ್ನು ಬಿಟ್ಟು ಆಗಮಸಂಧಿಯನ್ನೂ ಕಾದಿರಲಿಸಿ (ಸಂ. ೩ ಪ ೮೧), ಗುಣಾವಲಂಬನನವಧಾನ (ಸಂ. ೪ ಪ ೭೯) ಮುಂತಾದ ಕೆಲವು ಕಡೆಗಳಲ್ಲಿ

---

* ಪೀಠಿಕಾ ಸಂಧಿಯ ೨೦, ೨೧, ೨೨, ೨೩, ೨೪ನೆಯ ಪದ್ಯಗಳಲ್ಲಿ ಹೇಳಿರುವ ಕ್ರಿಯಾಪದಗಳ ಉತ್ತಮ ಪುರುಷ ಪ್ರಯೋಗವೂ ೨೫ನೆಯ ಪದ್ಯದಲ್ಲಿ ಹೇಳಿರುವ ಕ್ರಿಯಾಪದದ ಪ್ರಥಮ ಪುರುಷ ಪ್ರಯೋಗವೂ ಕೃತಿ ಶಬ್ದದ ಭಾವಾಭಾವಗಳೂ ಸೂಚಿಸುತ್ತವೆ.

ಉಚಿತವಾದ ಆಗಮ ಸಂಧಿಯನ್ನು ಬಿಟ್ಟು ಲೋಪ ಸಂಧಿಯನ್ನೂ ಉಪಯೋಗಿಸಿರುವುದು ಕವಿಮಾರ್ಗಕ್ಕೂ 'ಮಾರ್ಗದೊಳುಳ್ಳ ಸಂಧಿಯುಂ ಕಿಡಿಪುದುಮಾಗದು ತಾಂ ಯಥೇಷ್ಟಮುಂದಱಿವಳ್ಳರ್' ಎಂಬ ಮಾತಿಗೂ ವಿರುದ್ಧವಾಗಿರುತ್ತದೆ ಇದರಲ್ಲಿ ವ್ಯವಹಾರದಲ್ಲಿರುವ ಸುಲಭವಾದ ಸಂಸ್ಕೃತ ಪದಗಳು ಬಹುವಾಗಿ ಸೇರಿವೆ. ಇದರ ಶೈಲಿಯು ಷಟ್ಪದಿ ಗ್ರಂಥಗಳ ಶೈಲಿಯನ್ನು ಅನುಸರಿಸುತ್ತದೆ ಇದರಲ್ಲಿ ೨೬ ಸಂಧಿಗಳಿವೆ. ವೀರರಸವು ಪ್ರಧಾನ ರಸವಾಗಿದೆ. ಇತರ ರಸಗಳೆಲ್ಲವೂ ಅಲ್ಲಲ್ಲಿ ಪ್ರಕರಣಾನುಸಾರವಾಗಿ ಹೇಳಲ್ಪಟ್ಟಿವೆ. ಶೃಂಗಾರ ರಸವು ಪ್ರಧಾನ ರಸವೆಂಬ ಸಂದೇಹವುಂಟಾಗುವಂತೆ ವಿಸ್ತಾರವಾಗಿ ವರ್ಣಿತವಾಗಿದೆ. ನಾನಾ ವಿಧವಾದ ಅಲಂಕಾರಗಳೂ ಚಮತ್ಕಾರವಾಗಿ ವರ್ಣಿಸಲ್ಪಟ್ಟಿವೆ. ಈ ಕಾವ್ಯವು ದ್ರಾಕ್ಷಾಪಾಕದಿಂದ ಕೂಡಿದ ಸಾಮಾನ್ಯವಾದೊಂದು ಮಹಾಕಾವ್ಯವೆಂದೇ ಹೇಳಬಹುದು ಮಹಾ ಕಾವ್ಯ ಲಕ್ಷಣವನ್ನು ಅನುಸರಿಸುವುದಕ್ಕಾಗಿ ಈ ಕವಿಯು ವಿಸ್ತರಿಸಿರುವ ಕೆಲವು ಭಾಗವನ್ನು ಅನುಚಿತವೆಂದು ಈಗಿನವರು ಒಪ್ಪುವುದಿಲ್ಲ. ಪ್ರಧಾನಗಳಾದ ವರ್ಣ್ಯ ವಿಷಯಗಳನ್ನು ಹೇಳುವ ಪ್ರತಿಯೊಂದು ಸಂಧಿಯ ಆದಿ ಭಾಗದಲ್ಲೂ ಕೃಷ್ಣ ವಿಷಯಕವಾದ ಅಥವಾ ರಾಮ ವಿಷಯಕವಾದ ಒಂದೊಂದು ಪ್ರಹೇಳಿಕೆಯನ್ನು ಹೇಳುತ್ತಾನೆ ಈ ಕಾವ್ಯದಲ್ಲಿ ಈ ಮೈಸೂರಿನ ನಮ್ಮ ಶ್ರೀಮನ್ಮಹಾರಾಜರವರ ವಂಶದಲ್ಲ ರಣಧೀರರೆಂದು ಸುಪ್ರಸಿದ್ಧರಾದ ಶ್ರೀಮತ್ಕಂಠೀರವ ನರಸ ಮಹಾರಾಜರವರ ಚರಿತ್ರೆಯು ಪ್ರಧಾನವಾಗಿ ವರ್ಣಿಸಲ್ಪಟ್ಟಿವೆ. (ಕವಿಯು ಪ್ರತಿ ಸಂಧಿಯ ಅಂತ್ಯದಲ್ಲೂ—

"ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದ ಸು ಧರ್ಮಾನುಬಂಧಿ ॥"

ಎಂಬ ಪದ್ಯವನ್ನು ಹೇಳಿದ್ದಾನೆ.) ಆದುದರಿಂದಲೇ ಈ ಗ್ರಂಥಕ್ಕೆ ಕಂಠೀರವ ನರಸ ರಾಜ ವಿಜಯವೆಂದು ಹೆಸರಿಟ್ಟಿರುತ್ತಾನೆ. ಕವಿಯು

ಆ ಮಹಾ ರಾಜರವರು ನಡಿಸಿದುದನ್ನು ಸಾಕ್ಷಾತ್ತಾಗಿ ನೋಡಿಯೂ, ನೋಡಿದವರಿಂದ ಕೇಳಿಯೂ, ವಿಷಯಗಳನ್ನು ವರ್ಣಿಸಿರುವುದರಿಂದ ಕಾವ್ಯ ಲಕ್ಷಣಕ್ಕಾಗಿ ಮಾಡಿರುವ ವರ್ಣನೆಗಳನ್ನು ಬಿಟ್ಟರೆ ಉಳಿದ ಚರಿತ್ರೆಯೆಲ್ಲಾ ನಿಜವಾದುದೆಂದು ಖಂಡಿತವಾಗಿ ಹೇಳಬಹುದು.

ಶ್ರೀಮತ್ಕಂಠೀರವ ನರಸ ರಾಜೊಡೆಯರ ವಂಶ ಕ್ರಮವನ್ನು ಕವಿಯು "ಆದಿ ಪುರುಷನಿಂದ ಬ್ರಹ್ಮನೂ, ಅವನಿಂದ ಅತ್ರಿಯೂ, ಅವನಿಂದ ಚಂದ್ರನೂ, ಅವನಿಂದ ಬುಧನೂ, ಅವನಿಂದ ಪುರೂರವನೂ, ಅವನಿಂದ ನಹುಷನೂ, ಅವನಿಂದ ಯಯಾತಿಯೂ, ಅವನಿಂದ ಯದುವೂ, ಹುಟ್ಟಿದನೆಂದು ಹೇಳಿ, ಬಳಿಕ ಈ ಯದು ವಂಶದಲ್ಲಿ ಹುಟ್ಟಿದ ಮಹಾ ರಾಜರು ಕ್ರಮವಾಗಿ ದ್ವಾರಾವತಿಯಲ್ಲಿ ಆಳುತ್ತಿದ್ದರೆಂದೂ ಅವರ ಪರಂಪರೆಯವರಲ್ಲಿ ಕಲಿಯುಗದಲ್ಲಿ ದ್ವಾರಾವತಿಯಿಂದ ಮಯಿಸೂರಿಗೆ ಬಂದು ರಾಜ್ಯವನ್ನಾಳುತ್ತಿದ್ದ ರಾಜರ ವಂಶದಲ್ಲಿ ಹುಟ್ಟಿದ ಆತ್ರೇಯ ಗೋತ್ರದ ಬೆಟ್ಟದ ರಾಜರೆಂಬ ಮಹಾ ರಾಜರು ಪ್ರಸಿದ್ಧಿವಡೆದರು. ಇವರ ಮಕ್ಕಳು ಚಾಮ ರಾಜರು, ಇವರಿಗೆ ರಾಜ ನೃಪರೆಂದೂ ಬೆಟ್ಟದ ಚಾಮ ರಾಜರೆಂದೂ ಇಬ್ಬರು ಮಕ್ಕಳು. ಇವರಲ್ಲಿ ರಾಜ ನೃಪರಿಗೆ ಬೊಮ್ಮನ ಹಳ್ಳಿಯ ಚೆನ್ನ ರಾಜರ ತಂಗಿಯರಾದ ವೀರಾಂಬೆಯವರನ್ನೂ, ಬೆಟ್ಟದ ಚಾಮ ರಾಜರಿಗೆ ಹುರ ಪುರದ ತಿಮ್ಮ ರಾಜರ ಪುತ್ರಿಯರಾದ ಗುರುವಂಬೆಯವರನ್ನೂ, ತಂದು ಪಾಣಿ ಗ್ರಹಣ ಮಾಡಿಸಿದ್ದರು. ಈ ಬೆಟ್ಟದ ಚಾಮ ರಾಜರಿಂದ ಗುರುವಂಬೆಯವರ ಗರ್ಭದಲ್ಲಿ ಶ್ರೀಮತ್ಕಂಠೀರವ ನರಸ ರಾಜ ಮಹಾ ರಾಜರವರು ಅವತರಿಸಿದರು' ಎಂದು ಹೇಳುತ್ತಾನೆ. ಶ್ರೀಮತ್ಕಂಠೀರವ ನರಸ ರಾಜೊಡೆಯರು ದೃಢಕಾಯರಾಗಿ ಬೆಳದಿದ್ದುದಲ್ಲದೆ ತಾವು ಹುಟ್ಟಿದ ಹನ್ನೆರಡನೆಯ ವರುಷದಿಂದಲೇ ಕುದುರೆ ಸವಾರಿ, ಆನೆ ಸವಾರಿಗಳನ್ನೂ, ಕತ್ತಿ, ಭಲ್ಲೆಯ, ಬಾಕು, ಕಠಾರಿ, ಚಕ್ರಾಯುಧ ಮುಂತಾದುವುಗಳ ಸಾಧನೆಗಳನ್ನೂ ನಾನಾ ವಿಧಗಳಾದ ಗರುಡಿಯ ಸಾಧನೆಗಳನ್ನೂ, ಧನುರ್ವೇದವನ್ನೂ ಚೆನ್ನಾಗಿ ಕಲಿತುಕೊಂಡರು. ಇವರು ರಾಜ್ಯದಲ್ಲಿ ಪಟ್ಟಾಭಿಷಿಕ್ತ

ರಾದ ಕೂಡಲೆ ತಮ್ಮ ಜೊತೆಯಲ್ಲಿಯೇ ಬಳೆದು ತಮ್ಮ ಜೊತೆಯಲ್ಲಿಯೇ ಸಕಲ ವಿದ್ಯೆಗಳನ್ನೂ ಕಲಿತುಕೊಂಡಿದ್ದ, ತಮ್ಮ ಸೋದರ ಮಾವಂದಿರಾದ ಹುರ ಪುರದ ಕೆಂಪರಾಜರ ಮಕ್ಕಳು ನಂಜರಾಜೊಡೆಯರಿಗೆ ತಮ್ಮ ಮಂತ್ರಿಗಳ ಇಷ್ಟಾನುಸಾರವಾಗಿ ದಳವಾಯಿ ತನವನ್ನು ಕೊಟ್ಟು ಶ್ರೀ ರಂಗ ಪಟ್ಟಣದಲ್ಲಿ ರಾಜ್ಯ ಮಾಡುತ್ತಾ ಸಕಲ ಸಾಮನ್ತರನ್ನೂ ಸ್ವಾಧೀನ ಪಡಿಸಿಕೊಂಡಿದ್ದರು. ಆ ಕಾಲದಲ್ಲಿ ಸುಲ್ತಾನ್ ಮಹಮೂದ್ ಪಾದುಷಾಹನೆಂಬ ಬಿಜಾಪುರದ ತುರುಷ್ಕ ರಾಜನು ಕರ್ಣಾಟ ದೇಶವೆಲ್ಲವನ್ನೂ ತನ್ನ ಸ್ವಾಧೀನ ಪಡಿಸಿಕೊಳ್ಳಬೇಕೆಂದು ರಣದುಲ್ಲಾಖಾನನೆಂಬ ಸೇನಾ ಪತಿಯನ್ನು ಬಹು ಸೈನ್ಯದೊಡನೆ ಕಳುಹಲು ಅವನು ಹಲವು ಪಾಳೆಯಗಾರರನ್ನು ಗೆದ್ದು ಪ್ರಧಾನ ರಾಜರಾದ ಶ್ರೀರಂಗ ಪಟ್ಟಣದ ರಾಜರನ್ನು ಜಯಿಸಿ, ಆ ಪಟ್ಟಣವನ್ನು ಸ್ವಾಧೀನ ಪಡಿಸಿ ಕೊಂಡರೆ ಮಿಕ್ಕುವೆಲ್ಲವೂ ಸುಲಭವಾಗಿ ತಮ್ಮ ವಶವಾಗುವುವೆಂದು ಯೋಚಿಸಿ ಶ್ರೀ ರಂಗ ಪಟ್ಟಣಕ್ಕೆ ಸಕಲ ಸನ್ನಾಹದೊಡನೆ ಮುತ್ತಿಗೆ ಹಾಕಲು, ನಮ್ಮ ರಣ ಧೀರ ಕಂಠೀರವ ನರಸ ಮಹಾ ರಾಜರು ತಮ್ಮ ಸಾಹಸದಿಂದ ತುರುಕರನ್ನು ಸುಲಭವಾಗಿ ಜಯಿಸಿದುದಲ್ಲದೆ ಬಹು ಜನಗಳಿಗೆ ಮೂಗುಗಳನ್ನು ಕತ್ತರಿಸಿ ಅಪಮಾನ ಪಡಿಸಿ ಓಡಿಸಿದರು. ಬಹು ಕಡೆಗಳಲ್ಲಿ ಜಯವನ್ನು ಹೊಂದಿ ಪ್ರಖ್ಯಾತನಾಗಿದ್ದ ರಣದುಲ್ಲಾಖಾನನು ಇಲ್ಲಿ ಭಂಗಿತನಾಗಿ ಹೋದುದರಿಂದ ತುರುಕರ ಅಹಂಕಾರವು ತಗ್ಗಿ ಹೋಯಿತು. ಇದರಿಂದ ಕರ್ಣಾಟ ದೇಶವು ಸು ರಕ್ಷಿತವಾದುದು.

ಬಳಿಕ ಶ್ರೀಮತ್ಕಂಠೀರವ ನರಸ ರಾಜೊಡೆಯರು ದಿಗ್ವಿಜಯಕ್ಕಾಗಿ ಹೊರಟು, ಪ್ರತಿಭಟಿಸಿದ ಸಾಮಂತರನ್ನು ಶಿಕ್ಷಿಸಿ, ಸ್ವಾಧೀನ ಪಡಿಸಿಕೊಂಡುದಲ್ಲದೆ ಹೊಸದಾಗಿ ರಾಮಗಿರಿ, ತುರುಗೆರೆ, ಬಾಗೂರು, ಕಲಿಯೂರು, ಕಡಬ, ಮಾಯಿಸಮುದ್ರ, ಗ್ರಾಮ, ಪಿರಿಯಪಟ್ಟಣ, ಪಾಲುಪರೆ, ಸಾಂಬಳ್ಳಿ, ಮಾರಟಹಳ್ಳಿ, ನಲ್ಲೂರು, ಬಂಟುಹಳ್ಳಿ, ಚಂಗಪಾಡಿಯ, ತೋಳಯ, ಆಲಂಬಾಡಿ, ಮೊದಲಾದುವನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರು. ಮತ್ತು ಮಧುರೆ, ಚೆಂಜಿ, ತಂಜಾವೂರು, ಸತ್ಯಮಂ

ಗಲ, ನರಸಿಂಹಪುರ, ಬೇಲೂರು, ಬಸವಪಟ್ಟಣ, ತೆಂಜೆ, ಇಕ್ಕೇರಿ, ವಿಜಯನಗರ, ಕೊಡಗು, ಕೊಂಕಣ, ಮಲೆಯಾಳ, ಕೊಂಗು, ಮಾಗಡಿ, ಕುಣಿಗಲು, ರಾಜರುಗಳನ್ನು ಜಯಿಸಿ ಅವರಿಂದ ಕಪ್ಪವನ್ನು ತೆಗೆದು ಕೊಳ್ಳುವುದಕ್ಕಾರಂಭಿಸಿದರು. ಇವರು ಸಾಂಬಳ್ಳಿಯನ್ನು ಸ್ವಾಧೀನ ಪಡಿಸಿ ಕೊಂಡು ತಿರುಣಾಮಲೆ, ತಿರುಚಂಗೂಡು ಮೊದಲುಗೊಂಡು ತಿರುಚನಪುರಿಯ ವರೆಗೂ ಹೋಗಿ ದಾಳಿ ಮಾಡಿ ಕೊಂಡು ಬಂದರೆಂದೂ ಈ ದಿಗ್ವಿಜಯ ಕಾಲದಲ್ಲಿ ದಳವಾಯಿ ನಂಜರಾಜರು ಬಹು ಸಾಹಸವನ್ನು ತೋರಿಸಿದರೆಂದೂ ಈ ಗ್ರಂಥದಲ್ಲಿ ಹೇಳಿದೆ. ಇವರ ಕಾಲದಲ್ಲಿ ಶ್ರೀ ರಂಗ ಪಟ್ಟಣದರಾಜರ ಶಾಸನವು ಪೂರ್ವದಿಕ್ಕಿನಲ್ಲಿ ಮುಳವಳ್ಳಿ, ಕಾನಕಾನ ಹಳ್ಳಿ, ಡೆಂಕಣಿ ಕೋಟೆ, ತಿರವಣ್ಣಾ ಮಲೆ, ಜಿಂಜಿಯ ವರೆಗೂ ಆಗ್ನೇಯಕ್ಕೆ ರಂಗ ಸಮುದ್ರ, ಸೋಸಲೆ, ತಲಕಾಡು, ಸತ್ತೆಗಾಲಂ, ಆಲಂಬಾಡಿ, ಕಲಿಯೂರು, ನಿಲುಸೋಗೆ, ಉಮ್ಮತ್ತೂರು, ಎಳಂದೂರು, ಹರದನ ಹಳ್ಳಿ, ಸತ್ಯಮಂಗಲ, ಮಾರಟಹಳ್ಳಿ, ನಲ್ಲೂರು, ಬಂಟುಹಳ್ಳಿ, ಚಂಗ ಪಾಡಿಯ, ತೋಳೆಯ, ಸಾಂಬಳ್ಳಿ, ತಿರುಚಂಗೂಡು, ತಿರುಚನಪಳ್ಳಿ, ತಂಜಾವೂರು, ಮಧುರೆಗಳ ವರೆಗೂ; ದಕ್ಷಿಣಕ್ಕೆ ಮೈಸೂರು, ಹುಲ್ಲ ಹಳ್ಳಿ, ಹೆಮ್ಮರಗಾಲ, ತೆರಕಣಾಂಬಿಗಳ ವರೆಗೂ; ನೈರುತ್ಯಕ್ಕೆ ಬಿಳಿ ಕೆರೆ, ಮುಳಲವಾಡಿ, ಮಲೆಯಾಳಗಳ ವರೆಗೂ; ಪಶ್ಚಿಮಕ್ಕೆ ಕನ್ನಂಬಾಡಿ, ತಿಪ್ಪೂರು, ಹಂಪಾಪುರ, ಪಿರಿಯಪಟ್ಟಣ, ಚಟ್ಟದಪುರ, ಪಾಲುಪರೆ, ಕೊಡಗು, ವೀರರಾಜ ಪೇಟೆ (ನಂಜರಾಯ ಪಟ್ಟಣ)ಗಳ ವರೆಗೂ; ವಾಯುವ್ಯಕ್ಕೆ ಬೂಕನ ಕೆರೆ, ಹೊಸ ಹೊಳಲು, ಕಿಕ್ಕೇರಿ, ಹೊಳೆನರಸೀಪುರ, ಚೆನ್ನರಾಯ ಪಟ್ಟಣ, ಗ್ರಾಮ, ಬೇಲೂರು, ಬಾಗೂರು, ಬಸವ ಪಟ್ಟಣ, ಇಕ್ಕೇರಿ, ತುಳುವ, ಕೊಂಕಣಗಳ ವರೆಗೂ; ಉತ್ತರಕ್ಕೆ ಮೇಲು ಕೋಟೆ, ನಾಗಮಂಗಲ, ಬೆಳ್ಳೂರು, ಮಾಯಿ ಸಮುದ್ರ, ತುರುವೇ ಕೆರೆ, ಕಡಬ, ರಾಮ ಗಿರಿಗಳ ವರೆಗೂ; ಈಶಾನ್ಯಕ್ಕೆ ಮದ್ದೂರು, ಚೆನ್ನಪಟ್ಟಣ, ಮಾಗಡಿ, ಕುಣಿಗಲು, ಕೋಟೆಗೆರೆಗಳ ವರೆಗೂ; ಹೀಗೆ ಯೆಂಟು ದಿಕ್ಕುಗಳಲ್ಲಿಯೂ ನಿರರ್ಗಳವಾಗಿ ನಡೆಯು

ತ್ತಿತ್ತೆಂದು ಈ ಗ್ರಂಥದಿಂದ ಸ್ಫುಟವಾಗಿ ತೋರುತ್ತದೆ. ಹೀಗೆ ಸರ್ವತೋಮುಖವಾಗಿ ಜಯವನ್ನು ಹೊಂದಿದ್ದುದರಿಂದಲೆ ಶ್ರೀಮತ್ಕಂಠೀರವ ನರಸ ರಾಜೊಡೆಯರಿಗೆ ರಣ ಧೀರ, ಏಕಾಂಗ ವೀರ, ಕರ್ಣಾಟಕ ಚಕ್ರೇಶ, ಪರ ಬಲ ಮೇಘಾನಿಲ, ಕೋಟೆ ಕೋಲಾಹಲ, ಆಂಧ್ರ ಬಲ ಸಂಘ ಕರಿ ಕುಲ ಕಂಠೀರವೇಂದ್ರ, ಪಾಂಡ್ಯ ಭೂಭೃದ್ಗಿರಿ ವಜ್ರ ದಂಡ, ಕೊಂಕಣ ಮಲೆಯಾಳ ಕೊಡಗು ಭೂಪಾಲರ ಬಿಂಕವ ಮರ್ದಿಪ ಶೂರ ಎಂಬ ಬಿರುದುಗಳು ಹೇಳಲ್ಪಟ್ಟಿವೆ. ಮತ್ತು ಪೂರ್ವದಲ್ಲಿಯೇ ಇವರ ವಂಶಸ್ಥರಿಂದ ಸಂಪಾದಿತವಾಗಿದ್ದ ಬಿರುದಂತೆಂಬರ ಗಂಡ ಮೊದಲಾದ ಬಿರುದುಗಳೂ ಹೇಳಲ್ಪಟ್ಟಿವೆ. ಈ ಮಹಾ ರಾಜರ ಪ್ರಸಾದವನ್ನು ಸಂಪಾದಿಸುವ ಅಪೇಕ್ಷೆಯಿಂದ ಕೆಲವರು ಪಾಳೆಯಗಾರರೇ ಅವರ ಊಳಿಗದಲ್ಲಿ ಸೇರಿದ್ದಂತೆ "ಶ್ರೀಮತ್ಕಂಠೀರವ ನರಸ ರಾಜೊಡೆಯರ ಹಡಪದವನು ನಾಗ ಮಂಗಲದ ಪ್ರಭುವಾದ ಮುದ್ದಯ್ಯನು: ಸಂಚಿಯವನು ಮಳವಳ್ಳಿಯ ಪ್ರಭು ನಂಜಣ್ಣನು; ಕಾಳಾಂಜಿಯವನು ತೆರಕಣಾಂಬಿಯ ನಾಳ್ವ ರಾಜಯ್ಯನು; ಚಂಬಿನವನು ಕನ್ನಂಬಾಡಿಯ ಪ್ರಭು ಗುರುವಣ್ಣನು; ಪಾಪಡೆಯವನು ಕಿಕ್ಕೇರಿಯ ಪ್ರಭು ಕೋಟ್ಟೂರಯ್ಯನು; ಎಂಬ ಹೇಳಿಕೆಗಳಿಂದ ತಿಳಿಯುತ್ತದೆ. ಈ ಮಹಾ ರಾಜರ ಪರಿವಾರದಲ್ಲಿ ದಳವಾಯಿ ನಂಜ ರಾಜೇಂದ್ರರ ತಮ್ಮಂದಿರು ಲಿಂಗರಾಜರು ದಳಪತಿಗಳಾಗಿಯೂ, ಲಿಂಗೆಯಗೌಡನು ಪಟ್ಟಣದಧಿಕಾರಿಯಾಗಿಯೂ, ಲಪ್ಪವರಸ, ತಿಮ್ಮರಸರು ಮುಖ್ಯ ಮಂತ್ರಿಗಳಾಗಿಯೂ, ಬಸವಯ್ಯನು ಕೋಶಾಧ್ಯಕ್ಷನಾಗಿಯೂ, ನರಸಿಂಹೋಪಾಧ್ಯಾಯನು ರಾಯಸದವನಾಗಿಯೂ, ವೀರಣ್ಣನು ಅವಸರದವನಾಗಿಯೂ, ಬಸವಯ್ಯನು ಅಸಿ ಧಾರಕನಾಗಿಯೂ, ವೆಂಕಟ ಪತಿ ಜಟ್ಟಿಯು ಚರಣ ಸೇವಕನಾಗಿಯೂ, ಧನ್ವೋಜಯ್ಯನು ಆಭರಣವನ್ನು ತಂದು ಕೊಡುವವನಾಗಿಯೂ, ಕೃಷ್ಣಯ್ಯನು ವೀಣೆಯವನಾಗಿಯೂ, ಸಂಗಯ್ಯನು ಹಾಸ್ಯಗಾರನಾಗಿಯೂ ಸೇರಿದ್ದರೆಂದು ಹೇಳಿದೆ.

ಈ ಮಹಾರಾಜರು ದೇಶ ವಿಸ್ತಾರ, ಕೋಶ ವಿಸ್ತಾರಗಳನ್ನು

ಮಾಡುವುದರಲ್ಲಿ ಮಾತ್ರವೇ ಆಸಕ್ತರಾಗದೆ, ಆರ್ಜಿತವಾದುವುಗಳಿಗೆ ಸದುಪಯೋಗವುಂಟಾಗುವಂತೆ ಬಹು ವಿಧವಾದ ಧರ್ಮಕಾರ್ಯವನ್ನು ಮಾಡುತ್ತಾ, ದೇವತಾರಾಧನೆಯಲ್ಲಿಯೂ, ಪ್ರಜಾರಾಧನೆಯಲ್ಲಿಯೂ ತತ್ಪರ ರಾಗಿದ್ದರು. ಶ್ರೀರಂಗಪಟ್ಟನದಲ್ಲಿ ಗಜೇಂದ್ರ ಮೋಕ್ಷ ಮಹೋತ್ಸವ ಕ್ಕಾಗಿ ವಿಚಿತ್ರವಾದೊಂದು ಮಂಟಪವನ್ನೂ ಮನೋಹರವಾದೊಂದು ಸರೋವರವನ್ನೂ ಕಟ್ಟಿಸಿದುದಲ್ಲದೆ ಅದರ ಸುತ್ತಲೂ ಸೊಗಸಾದ ಉದ್ಯಾನವನ್ನೂ ಮಾಡಿಸಿ ತಮ್ಮ ದೇಶದಲ್ಲಿ ಹಲವೆಡೆಗಳಲ್ಲಿ ದೇವಸ್ಥಾನ, ಅಗ್ರಹಾರ, ಉದ್ಯಾನ, ತಟಾಕಗಳನ್ನು ಕಲ್ಪಿಸಿದ್ದರು. ಕಾಶೀಕ್ಷೇತ್ರ ದಲ್ಲಿಯೂ, ಶ್ರೀರಂಗ ಕ್ಷೇತ್ರದಲ್ಲಿಯೂ, ಶ್ರೀರಂಗಪಟ್ಟಣದಲ್ಲಿಯೂ ಪ್ರಸಿದ್ಧಗಳಾದ ಅನ್ನ ಸತ್ರಗಳನ್ನೂ ತಾವಾಳುವ ರಾಜ್ಯದ ಪುಣ್ಯ ಸ್ಥಳ ಗಳಲ್ಲೆಲ್ಲಾ ಸಾಮಾನ್ಯವಾಗಿ ಅನ್ನಸತ್ರಗಳನ್ನೂ ಏರ್ಪಡಿಸಿದ್ದರು. ಕಾಶಿ ಯಲ್ಲಿ ಬಿಂಧು ಮಾಧವ ವಿಶ್ವೇಶ್ವರರಿಗೆ ಬಹುವಿಧವಾಗಿ ಪೂಜೆಯು ನಡೆ ಯುವಂತೆ ಏರ್ಪಡಿಸಿದ್ದರು. ಅಲ್ಲದೆ ತಮ್ಮ ಪ್ರಜೆಗಳೆಲ್ಲರೂ ತಮ್ಮ ಆಚರಣೆಯನ್ನು ನೋಡುವುದರಿಂದಲೆ ವ್ರತ ಧರ್ಮ ಪರರಾಗುವಂತೆ ಏಕಾ ದಶೀ ವ್ರತವೇ ಮೊದಲಾದ ಅನೇಕ ವ್ರತಗಳನ್ನು ತಾವೂ ಆಚರಿಸುತ್ತಾ ವ್ರತ, ಧರ್ಮ ತತ್ಪರರಾಗಿದ್ದರು. ಎಂಬ ವಿಷಯಗಳು ಈ ಗ್ರಂಥದಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ಈ ಮಹಾ ರಾಜರು ಮಹಾ ಪರಾಕ್ರಮ ಶಾಲಿಗಳಾಗಿಯೂ ಮಹಾ ಧರ್ಮ ಪರರಾಗಿಯೂ, ಕೀರ್ತಿಸಂಪನ್ನ ರಾಗಿಯೂ ಇದ್ದುದರಿಂದಲೇ ಈಗಲೂ ಅನೇಕ ಪ್ರಸ್ತಾವಗಳಲ್ಲಿ 'ಇವ ರೇನು ವೀರ ಕಂಠೀರವ ನರಸ ರಾಜೊಡೆಯರೊ ?' ಎಂದು ಆಬಾಲ ವೃದ್ಧರೂ ಆಡುವುದನ್ನು ಕೇಳುತ್ತಿದೇವೆ.

ಇಂತಹ ಮಹಾ ರಾಜರ ಚರಿತ್ರವನ್ನು ಸರಸವಾಗಿಯೂ, ನಿಜ ವಾಗಿಯೂ, ತಿಳಿಸುವ ಈ ಗ್ರಂಥವನ್ನು ಮುದ್ರಿಸಿ ಪ್ರಚುರ ಪಡಿಸುವುದು ಅತ್ಯಾವಶ್ಯಕವಾದುದೆಂದು ಯೋಚಿಸಿ, ಮೈಸೂರು ಪ್ರಾಚ್ಯ ಕೋಶಾಗಾ ರಾಧಿಕಾರಿಗಳು ಮಾಡಿದ ಆಜ್ಞೆಯಿಂದ ಈ ಗ್ರಂಥವು ಯಥೋಚಿತವಾಗಿ ಶೋಧಿಸಿ ಮುದ್ರಿಸಲ್ಪಟ್ಟಿದೆ.

ಇದನ್ನು ಮುದ್ರಿಸುವಾಗ ಈ ಕೋಶಾಗಾರದಲ್ಲಿದ್ದ ಕೈ ಬರಹದ ಒಂದು ಪುಸ್ತಕ ಮಾತ್ರವೇ ಆದರ್ಶವಾಗಿ ಉಪಯೋಗಿಸಲ್ಪಟ್ಟಿತು. ಆ ಪುಸ್ತಕದಲ್ಲಿ ಹಲವು ಕಡೆಗಳಲ್ಲಿ ಮಾತ್ರಾ ಚ್ಯುತಿ, ವರ್ಣ ಚ್ಯುತಿ, ಪದ ಚ್ಯುತಿ, ಪಾದ ಚ್ಯುತಿ ತದ್ವಿಪರ್ಯಯಾದಿ ದೋಷಗಳು ಇರುವುದರಿಂದಲೂ, ಶುದ್ಧವಾದ ಮತ್ತೊಂದು ಪುಸ್ತಕವು ದೊರೆಯದೇ ಹೋದುದರಿಂದಲೂ, ಶುದ್ಧವಾಗಿ ಮುದ್ರಣಗೊಳಿಸುವುದು ಸ್ವಲ್ಪ ಕಷ್ಟವಾಯಿತು. ಆದರೂ ಯಥೋಚಿತವಾಗಿಯೂ, ಯಥಾ ಮತಿಯಾಗಿಯೂ ವಿಪರ್ಯಯಗಳನ್ನು ಸಮ ಪಡಿಸಿ ಚ್ಯುತವಾದುವನ್ನು, ಸೇರಿಸಿ ಸೇರಿಸಿದುವುಗಳನ್ನು [ ] ಇಂತಹ ಕುಂಡಲಿಕೆಗಳಲ್ಲಿ ಗರ್ಭೀಕರಿಸಿ ವಿಪರ್ಯಯ ಪಡಿಸುವಾಗಲೂ, ಸಂದೇಹಾಸ್ಪದಗಳಾದ ಕಡೆಗಳಲ್ಲಿ ಉಚಿತವಾಗಿ ತೋರಿದ ಪಾಠವನ್ನು ಮೇಲೆ ಬರೆದು ಆದರ್ಶ ಪುಸ್ತಕದಲ್ಲಿರುವುದನ್ನು ಆಯಾ ಪುಟದ ಕೆಳಗಡೆಯಲ್ಲಿ *, †, ಇತ್ಯಾದಿ ತತ್ಸೂಚಕ ಚಿಹ್ನೆಗಳೊಡನೆ ತೋರಿಸಿ ಅಚ್ಚು ಹಾಕಿಸಲ್ಪಟ್ಟಿದೆ. ಪ್ರಮಾದದಿಂದುಂಟಾಗಿರುವ ತಪ್ಪುಗಳನ್ನು ಸರಿ ಪಡಿಸಿ ಕೊಳ್ಳುವುದಕ್ಕಾಗಿ ಶುದ್ಧಿ ಪತ್ರಿಕೆಯೂ ಸಂಧಿ ವಿಷಯಗಳನ್ನು ಸೂಚಿಸುವುದಕ್ಕಾಗಿ ಸೂಚೀ ಪತ್ರವೂ ಮೊದಲ್ಲಿ ಸೇರಿಸಲ್ಪಟ್ಟಿವೆ. ಸಂಧಿಗಳ ಆದಿ ಭಾಗಗಳಲ್ಲಿ ಹೇಳಿರುವ ಪ್ರಹೇಳಿಕೆಗಳ ಅರ್ಥವನ್ನು ತಿಳಿಸುವುದಕ್ಕಾಗಿ ಪ್ರಹೇಳಿಕಾರ್ಥ ದೀಪಿಕೆ ಯೆಂಬುದು ಕೊನೆಯಲ್ಲಿ ಸೇರಿಸಲ್ಪಟ್ಟಿದೆ.

ಟಿ. ಎನ್. ಸುಬ್ಬರಾಯ ಶಾಸ್ತ್ರಿ,
ರೆಸಿಡೆಂಟ್ ಪಂಡಿತ.

# ಸಂಧಿ ವಿಷಯ ಸೂಚಿ

# ಶೋಧನ ಪತ್ರಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 1 | 4 | ತ್ರಿಜಗವ | ತ್ರೈಜಗವ |
| 4 | 17 | ಗಂಡಭೀಮಪರಾಕ್ರಮಿ | ಗಂಡಪರಾಕ್ರಮಿ |
| 7 | 3 | ದಿವ್ಯಸಳದೊಳು | ದಿವ್ಯಸ್ಥಲದೊಳು |
| 8 | 3 | ದಾವೋಹದ | ದಾಸೋಹದ |
| ,, | 6 | ಧೇನುಗಳಿ | ಧೇನುಗಳೀ |
| 9 | 13 | ಎಸೆವಾಕಾವೇರಿಯು | ಎಸೆವಕಾವೇರಿಯು |
| 10 | 5 | ಆ ಪಟ್ಟಣದಾ | ಆ ಪಟ್ಟಣದ |
| 11 | 10 | ಪಲಸ | ಪಲಸು |
| 12 | 3 | ಮಹಾಬಲ | ಮಹಬಲ (ಮಾಬಲ) |
| 16 | 5 | ನಂದನನಾ | ನಂದನ |
| ,, | 9 | ಅಷ್ಟದಿಕ್ಪಾಳರು | ಅಟ್ಟದಿಗ್ಪಾಳರು |
| ,, | 14 | ಕೊಂಬೆವೆಂದೆನುತ | ಕೊಳ್ವೆವೆಂದೆನುತ |
| 23 | 19 | ಸಂತಸವನು ಪುಟ್ಟಿಸಿ ಹಣವನು ಹೇರಾಳೊ | ಸಂತಸಬುಟ್ಟಿಸಿ ಹಣವ ಹೇರಾಳೋ |
| 25 | 15 | ಪರಂಪರೆಯಲಿ | ಪಾರಂಪರಿಯಲಿ |
| 26 | 16 | ಯೋಳಿಯಲಿ | ಯೋಳ್ಗಿಯಲಿ |
| 27 | 1 | ಶುಕ್ಲಪಕ್ಷ | ಶುಕ್ಲಪಕ್ಷದ |
| ,, | 7 | ಹರುಷದಲ್ಲಿ | ಹರ್ಷದಲ್ಲಿ |
| 32 | 6 | ದುಂಪದೂಳೀ | ದುಂಪಾದೂಳಿ |
| 33 | 5 | ಗರುಡನರವಟ್ಟಿಗೆ | ಗರುಡನಿಹರವಟ್ಟಿಗೆ |
| ,, | 6 | ಫಣಿಗಳೊಂದಿರವಂತೆ | ಫಣಿಯಿರವಂತೆ |
| ,, | 13 | ಮೋ ಲತಿಖತಿ | ಮೋಲತಿ ಖತಿಯನು |
| 34 | 2 | ಮನದಲ್ಲಿ | ಮನದಲಿ |
| ,, | 11 | ಮುತ್ತಿದರಿತಂತ್ರವ | ಮುತ್ತಿದರಿತಳತಂತ್ರವ |
| 37 | 13 | ತೂಳಿಸಿ | ತುಳಿಸಿ |
| 40 | 13 | ಕೋಳಾಲ ದಿಳಿ | ಕೊಳಾಲಗ ಳಿಳಿ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 40 | 24 | ನರೆ | ನೆರೆ |
| 42 | 5 | ಎಂದು | ಖಂದು |
| ,, | 6 | ತ್ರಿಕಾಲ | ತ್ರೈಕಾಲ |
| ,, | 20 | ಸನಿ | ಸನ್ಧಿ |
| 43 | 6 | ತ್ರಿಜಗವ | ತ್ರೈಜಗವ |
| 44 | 2 | ಸ್ವಾಮಿ | ಸ್ವಾಮಿಯು |
| 45 | 22 | ಬೋಧಗಳ್ | ಬೋಧೆಗಳೇ |
| 46 | 8 | ಧರನೆ | ಧರನೇ |
| 47 | 13 | ಕಿಂಪುರುಷ | ಕಿಂಪುರುಷರು |
| ,, | 14 | ಸುರಸಿದ | ಸುರಸಿದ್ಧ |
| 49 | 22 | ಬಾಧಿಪರೆ | ಬಾಧಿಪರೇ |
| 53 | 7 | ನರಸಿಂಹನ | ನೃಸಿಂಹನ |
| ,, | 23 | ಕರಸಿ | ಕರಿಸಿ |
| 54 | 20 | ಕರಣವನು | ಕರಣವ |
| 55 | 3 | ಶೋಭನದೆ | ಶೋಭಾನದೆ |
| 57 | 13 | ಕತಾರಿ | ಕಾತಾರಿ |
| ,, | 14 | ಮಂಗಳಕರ | ಮಂಗಳ |
| 63 | 9 | ಹೃಕ್ಕಮುಲದ | ಹೃತ್ಕಮಲ |
| ,, | 16 | ಕರಿಘಟ್ಟವೇಮು | ಕರಿಘಟ್ಟವೆನೆ |
| 64 | 11 | ಧಾನ್ಯದಂಡೆ | ಧಾನ್ಯದದಂಡಿ |
| 66 | 5 | ಬೋಧಾಯನಾರಿಷ್ಟ | ಬೋಧಾಯನಾರಿಷ್ಟ |
| ,, | 6 | ಪಾರಾಶರ | ಪರಾಶರ |
| 69 | 1 | ಸರ್ಪತೀರ್ಥ | ಸರ್ಪಸುತೀರ್ಥ |
| 73 | 22 | ಬೈರಾವಳಿಯು | ದಾವಳಿಯು |
| 74 | 12 | ತೂಗುವವ್ರೋ | ತೂಗುವವ್ರೊ |
| 78 | 21 | ಬಕುಳ | ಬಕುಳದ |
| 83 | 17 | ನುಸಿಗ್ಗಿರ್ಚಿ | ನುಸಿಗಿರ್ಚಿ |
| 84 | 12 | ಪಟದ | ಪಾಟದ |
| 96 | 2 | ಬಳುಕುತಿಂಲಾಗ | ಬಳುಕುತ್ತಿರಾಗ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 100 | 17 | ತಪಿಪೊಡೆ | ತವಿಪೊಡೆ |
| 103 | 22 | ಕುರಳ | ಕುರುಳ |
| 106 | 8 | ಪುರಷನ | ಪುರುಷನ |
| ,, | 9 | ಬದ್ದ | ಬದ್ಧ |
| 107 | 1 | ಪ್ರಾಯುದಲಿ ಹಣವ | ಪ್ರಾಯುದಲಿನಾ ಹಣವ |
| 125 | 7 | ವರಬುದಿ | ವರಬುದ್ಧಿ |
| 137 | 20 | ನಗತ್ತೈತಂದ | ನಗುತ್ತೈತಂದ |
| 157 | 15 | ರದನಛದ | ರದನಚ್ಛದ |
| 158 | 6 | ಕದಪು | ಪದಪು |
| 226 | 21 | ಮರದೆ | ಮೇರುವೆ |
| 242 | 14 | ಮೇಲಕ್ಕೇಳೆ | ಮೇಲಕೇಳೆ |
| 245 | 17 | ತುರುಗಗಳುರವಣೆ | ತುರಗಗಳುರವಣೆ |
| 277 | 4 | ನಿಂದು | ನಿಂದನು |
| 294 | 3 | ಮುಚಿ | ಮುಚ್ಚಿ |
| 314 | 23 | ಕೊಂಡ | ಕೊಂಡು |
| 337 | 10 | ಬಿರುದೆಂತೆಂಬರ | ಬಿರುದಂತೆಂಬರ |
| 350 | 6 | ಕೃತಿಗಳನೆನಿಸುತ | ಕೃತಿಗಳನೆಣಿಸುತ |
| 379 | 1 | ಪಾರರ | ಪೌರರ |
| 382 | 11 | ಕಟೌಟ್ಟಣಿ | ಕಟ್ಟಾಣಿ |
| 396 | 9 | ಕೈವಾರಿಕ | ಕೈವಾರಿಪ |
| 491 | 3 | ವ್ರತನಿಷೆಯುಲಿ | ವ್ರತನಿಷ್ಠೆಯಲಿ |
| 492 | 5 | ಪಚೆಯು | ಪಚ್ಚೆಯು |
| 494 | 12 | ಪರಸಿದ | ಪರಪಿದ |

ಷರಾ—2, 3, 4, 5 ನೆಯ ಸಂಧಿಗಳ ಅಂತ್ಯದಲ್ಲಿಯೂ

ಇದು ಸೋಮವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದ ಸು ಧರ್ಮಾನುಬಂಧಿ ॥

ಎಂಬ ಪದ್ಯವನ್ನು ಸೇರಿಸಿಕೊಳ್ಳಬೇಕು.

K.N.V.

# ಪ್ರಹೇಳಿಕಾರ್ಥದೀಪಿಕೆ.

---

ಸಂಧಿ ೨ ಪದ್ಯ ೨— ಸ್ವರ್ಗಕ್ಕೆ ಅಧಿಪತಿಯಾದ ಇಂದ್ರನ, ಮಗನಾದ ವಾಲಿಯ, ತಮ್ಮನಾದ ಸುಗ್ರೀವನ, ತಂದೆಯಾದ ಸೂರ್ಯನ ಕಾಂತಿಗೆ ಅರಳುವ ಕಮಲವನ್ನು, ಒಲಿದು ಬಾಣವನ್ನಾಗಿ ಮಾಡಿದ ಮನ್ಮಥನ, ತಂದೆಯಾದ ಶ್ರೀಕೃಷ್ಣನೇ ಸತ್ಪುರುಷರನ್ನು ಕಾಪಾಡು.

ಸಂಧಿ ೪ ಪದ್ಯ ೧— ಗಿಳಿದೇರನಾದ ಮನ್ಮಥನ, ತಾಯಿಯಾದ ಲಕ್ಷ್ಮಿಯ, ತಮ್ಮನಾದ ಚನ್ದ್ರನಿಗೆ, ಶತ್ರುವಾದ ಹಾವನ್ನು (ರಾಹು), ನುಂಗಿದ ಗರುಡನ, ಅಣ್ಣನಾದ ಅರುಣನಿಂದ, ಮಾರ್ಗವನ್ನು ಪಡೆದ ಸೂರ್ಯನ, ಮಗನಾದ ಸುಗ್ರೀವನಿಗೆ, ರಾಜನಾದ ಶ್ರೀರಾಮನೇ, ಮೂರುಲೋಕವನ್ನೂ ಕಾಪಾಡು.

ಸಂಧಿ ೫ ಪದ್ಯ ೧— ಮೃಗಧರನಾದ ಚನ್ದ್ರನನ್ನು, ಕಂಡು ಅತಿ ಸಂಭ್ರಮದಿಂದುಬ್ಬಿದ ಸಮುದ್ರನ, ದೌಹಿತ್ರನಾದ ಮನ್ಮಥನನ್ನು, ರೀತಿಗೆಡಿಸಿದ ಶಿವನಿಗೆ, ಭಕ್ತನಾದ ಬಾಣಾಸುರನನ್ನು, ಯುದ್ಧದಲ್ಲಿ ಜಯಿಸಿದ ಲಕ್ಷ್ಮೀಪತಿಯಾದ ಶ್ರೀಕೃಷ್ಣನೇ, ಪ್ರಸನ್ನನಾಗಿ ಕಾಪಾಡು.

ಸಂಧಿ ೬ ಪದ್ಯ ೧— ವಾಯುವಿಗೆ, ಪುತ್ರನಾದ ಹನುಮಂತನನ್ನು, ಯುದ್ಧದಲ್ಲಿ ಬ್ರಹ್ಮಾಸ್ತ್ರದಿಂದ ಕಟ್ಟಿದ ಇಂದ್ರಜಿತುವಿಗೆ, ತಂದೆಯಾದ ರಾವಣನ, ತಮ್ಮನಾದ ವಿಭೀಷಣನಿಗೆ, ಲಂಕಾ ರಾಜ್ಯವನ್ನು ಕೊಟ್ಟ ಶ್ರೀರಾಮನ, ಶ್ರೀ ಪಾದಯುಗ್ಮವನ್ನು ಸಂತೋಷದಿಂದ ಸೇವಿಸುವೆನು.

ಸಂಧಿ ೮ ಪದ್ಯ ೧— ಮಹಾಪುರುಷನ ಮನಸ್ಸಿನಿಂದ ಹುಟ್ಟಿದವನಾದ ಚನ್ದ್ರನ, ಅಳಿಯನಾದ (ಭಾಗಿನೇಯ) ಮನ್ಮಥನ, ತಾಯಿಯಾದ ರುಕ್ಮಿಣಿಯ, ಭಾವನಾದ (ದೇವರ) ಬಲರಾಮನ, ಸಹೋದರಿಯಾದ ಸುಭದ್ರೆಯ, ಪ್ರಿಯನಾದ ಅರ್ಜುನನನ್ನು, ಅತಿ ಹರ್ಷದಿಂದ ಕಾಪಾಡಿದ ಸ್ವಾಮಿಯಾದ ಶ್ರೀಕೃಷ್ಣನ, ಪಾದಕಮಲಗಳಿಗೆ ವಂದಿಸುವೆನು.

ಸಂಧಿ ೧೨ ಪದ್ಯ ೧— ಕಮಲದ, ಪುತ್ರನಾದ ಬ್ರಹ್ಮನಿಗೆ, ತಾಯಿಯಾದ ಲಕ್ಷ್ಮೀದೇವಿಗೆ, ತಮ್ಮನಾದ ಚನ್ದ್ರನನ್ನು, ತಲೆಯಲ್ಲಿಟ್ಟುಕೊಂಡ

ರುವ ಈಶ್ವರನ, ಹೆಂಡತಿಯಾದ ಪಾರ್ವತಿಗೆ, ತವರ್ಮನಾದ ವೈನಾಕನ, ಸಂಭಾವನೆಯನ್ನಂಗೀಕರಿಸಿದ ಆಂಜನೇಯನಿಗೆ, ಒಡೆಯನಾದ ಶ್ರೀರಾಮನೇ, ಪ್ರಸನ್ನನಾಗಿ ಕಾಪಾಡು.

ಸಂಧಿ ೧೬ ಪದ್ಯ ೧— ಗಿಳಿಯನ್ನು ವಾಹನವಮಾಡಿಕೊಂಡಿರುವ ಮನ್ಮಥನಿಗೆ, ಮಗನಾದ ಅನಿರುದ್ಧನಿಗೆ, ಮಾವನಾದ ಬಾಣಾಸುರನಿಗೆ, ಮೆಚ್ಚಿರುವ ಈಶ್ವರನೊಡನೆ, ಯುದ್ಧಾಂಗಣದಲ್ಲಿ ಹೋರಾಡಿದ ಅರ್ಜುನನಿಗೆ, ತಂಗಿಯಾದ ಸುಭದ್ರೆಯನ್ನು ಕೊಟ್ಟು ವಿವಾಹವನ್ನು ಮಾಡಿಸಿದ, ಸಂಸಾರಚ್ಛೇದಕನಾದ ಶ್ರೀಕೃಷ್ಣನೇ ದಯೆಯಿಂದ ಬುದ್ಧಿಯನ್ನುಂಟುಮಾಡು.

ಸಂಧಿ ೧೭ ಪದ್ಯ ೧— ಜಿಂಕೆಯನ್ನು ಧರಿಸಿರುವ ಚನ್ದ್ರಸಿಗೆ, ವೈರಿಯಾದ ರಾಹುವಿಗೆ ಎಂದರೆ ಹಾವಿಗೆ, ಆಹಾರವಾದ ವಾಯುವಿನ, ಗಮನಕ್ಕೆ ಒಡಿಹೋಗುವ ಮೇಘಕ್ಕೆ, ಒಡೆಯನಾದ ಇನ್ದ್ರನ, ಮಗನಾದ ವಾಲಿಯನ್ನು, ಕೊಂದಂಥಾ ಶ್ರೀರಾಮನೇ, ಪ್ರಸನ್ನನಾಗಿ ಕಾಪಾಡು.

ಸಂಧಿ ೧೮ ಪದ್ಯ ೧— ಇನ್ದ್ರನ, ಮಗನಾದ ವಾಲಿಯ, ತಮ್ಮನಾದ ಸುಗ್ರೀವನ, ತಂದೆಯಾದ ಸೂರ್ಯನ, ಮಗನಾದ ಯಮುನನ್ನು, ಕೋಪದಿಂದ ಕೊಂದು ಹಾಕಿದ ಈಶ್ವರನ, ಧನುಸ್ಸನ್ನು (ದ್ರೌಪದಿಯ ಸ್ವಯಂವರಕಾಲದಲ್ಲಿ) ತಿರಸ್ಕರಿಸಿದ ಅರ್ಜುನನ, ಪತ್ನಿಯಾದ ದ್ರೌಪದಿಯನ್ನು, ಕಾಪಾಡಿದ ಲಕ್ಷ್ಮೀಶನಾದ ಕೃಷ್ಣನೆ, ಸಜ್ಜನರನ್ನು ಕಾಪಾಡು.

ಅಥವಾ— ಇನ್ದ್ರನ, ಮಗನಾದ ವಾಲಿಯ, ತಮ್ಮನಾದ ಸುಗ್ರೀವನ, ತಂದೆಯಾದ ಸೂರ್ಯನ, ಮಗನಾದ ಕರ್ಣನನ್ನು, ಕೋಪದಿಂದ ಕೊಂದ ಅರ್ಜುನನ, ಧನುಸ್ಸನ್ನು ತಿರಸ್ಕರಿಸಿದ ಯುಧಿಷ್ಠಿರನ, ರಾಣಿಯಾದ ದ್ರೌಪತಿಯನ್ನು, ಕಾಪಾಡಿದ ಲಕ್ಷ್ಮೀಶನಾದ ಕೃಷ್ಣನೇ, ಸಜ್ಜನರನ್ನು ಕಾಪಾಡು.

ಸಂಧಿ ೨೪ ಪದ್ಯ ೧— ಕಮಲಗಳಿಗೆ ಸ್ನೇಹಿತನಾದ ಸೂರ್ಯನ, ವೈರಿಯಾದ ಕತ್ತಲೆಯ, ಹೆಸರುಳ್ಳ ತಮಾಸುರನನ್ನು, ಜಲ ಚರವಾದ ಮತ್ಸ್ಯದ, ರೂಪವನ್ನು ಹೊಂದಿ ಜಲದಲ್ಲಿ ಪ್ರವೇಶಿಸಿ ಕೊಂದು ಹಾಕಿದ ಸ್ವಾಮಿಯಾದ ನಾರಾಯಣನ, ಪಾದಕಮಲಗಳಿಗೆ ವಂದಿಸುವೆನು.

---

# ಕಂಠೀರವ ನರಸ ರಾಜೇಂದ್ರ ವಿಜಯ

## ಪೀಠಿಕಾ ಸಂಧಿ

ಶ್ರೀಮದಮರ ಗಣ ಮಕುಟ ರಂಜಿತ ದಿವ್ಯ
ರಾಮಣೀಯಕ ಶುಭ ಚರಣ ।
ಕಾಮ ಜನಕ ಕಾರುಣ್ಯ ಮೂರುತಿ ರಂಗ
ಧಾಮ ರಕ್ಷಿಸು ತ್ರಿಜಗವ ॥ ೧

ತ್ರಿಭುವನದೊಳಗಿಹ ಬಕುತರಿಗನುದಿನ
ಶುಭಗಳನಿತ್ತು ರಕ್ಷಿಸುತ ।
ಉಭಯ ಕಾವೇರಿಯ ಮಧ್ಯದೆ ನೆಲಸಿಹ
ವಿಭು ಕೊಡು ಮತಿಗೆ ಮಂಗಳವ ॥ ೨

ಶರಣಾಗತ ರಕ್ಷಾಮಣಿ ಯೆನಿಸಿ ಕೊಂ
ಡುರಗ ತಲ್ಪದೊಳೊಪ್ಪಿ ಮೆರೆವ ।
ಪರಮ ಮಂಗಳ ಮೂರ್ತಿ ಪಶ್ಚಿಮ ರಂಗೇಶ
ಕರುಣಿಸು ಸಕಲ ಸಜ್ಜನರ ॥ ೩

ಸರಸಿಜ ದಳ ನೇತ್ರ ಸರ್ವಮೋಹನ ಗಾತ್ರ
ಸುರ ಮುನಿ ಸನ್ನುತಿ ಪಾತ್ರ ।
ಕರುಣಾಕರ ಕಮಲಜ ಪಿತ ಲಕ್ಷ್ಮೀ
ನರಸಿಂಹ ಪಾಲಿಸು ವರವ ॥ ೪

ಕಂತು ಜನಕ ಕಮಲಜ ಮುಖ್ಯ ಸುರ ನುತ
ಸಂತತಾನಂದ ಸ್ವರೂಪ ।
ಶಾಂತ ಮೂರುತಿ ಸರ್ವೇಶ್ವರ ಲಕ್ಷ್ಮೀ
ಕಾಂತ ಕೊಡೆನಗೆ ಸನ್ಮತಿಯ ॥ ೫

ಫಣಿ ಭೂಷಣ ಪಾವನ ರೂಪ ಸುಮನೋ
ಗಣ ಪೂಜಿತ ಧವಳಾಂಗ ।
ಗುಣ ಮಣಿ ಗುಹ ಗಣಪತಿ ಪಿತ ಮೈಸೂರ
ತ್ರಿಣಯನನೆ ಸಲಹು ಸಜ್ಜನರ ॥ ೬

ಕಡು ಹರುಷದೆ ಜಡೆ ಯೆಡೆಯೊಳು ಗಂಗೆಯ
ಮುಡಿದಂಡೆಯಾಗಿ ಧರಿಸಿದ ।
ಬಿಡದೆ ಭಕ್ತರ ಸಲಹುವ ಚೆನ್ನ ನಂಜುಂಡ
ನಡಿ ದಾವರೆಗೆರಗುವೆನು ॥ ೭

ಆಖು ವಾಹನನಜ ಮುನಿ ಗಣ ಸೇವಿತ
ಪಾಕ ಶಾಸನ ಪೂಜಿತಾಂಗ ।
ಶ್ರೀ ಕಂಠನ ವರ ಸುತ ವಿಘ್ನೇಶ್ವರ
ಸಾಕಾರವಾಗೀಕೃತಿಗೆ ॥ ೮

ಕಮಲ ಸಂಭವನ ಪಟ್ಟದ ರಾಣಿ ಕಲ್ಯಾಣಿ
ಕಮನೀಯ ವೀಣಾ ಪಾಣಿ ।
ಅಮರ ವಂದಿತೆ ಯೆನ್ನ ಜಿಹ್ವಾಗ್ರ ರಂಗದೆ
ಕ್ರಮದಿಂದ ನಟಿಸು ಲೀಲೆಯಲಿ ॥ ೯

ರಾಮಣೀಯಕ ಶುಭ ಗಾತ್ರೆ ಕಮಲ ನೇತ್ರೆ
ಸಾಮಜ ಗಮನೆ ಶರ್ವಾಣಿ ।
ಪ್ರೇಮದೆ ಭಜಿಪರಿಷ್ಟವನೀವ ಬೆಟ್ಟದ
ಚಾಮುಂಡಿ ಸಲಹು ತ್ರಿಜಗವ ॥ ೧೦

ಅಧ್ಯಯನಾದಿ ಸಕಲ ಮಂತ್ರ ಶಾಸ್ತ್ರವ
ವೇದ್ಯವೆನಿಸಿ ಯೆನ್ನ ಮನಕೆ ।
ಸದ್ಯದಿಂದಲಿ ಕರುಣದಿ ರಾಜಿಸುತಿಹ
ವಿದ್ಯಾಗುರುವಿಗೆರಗುವೆನು ॥ ೧೧

ಆದಿ ಕವೀಂದ್ರ ವಾಲ್ಮೀಕಿ ವ್ಯಾಸರು ಮೊದ
ಲಾದ ಸಕಲ ಸೂರಿಗಳ ।
ಪಾದಾರವಿಂದವ ನೆನೆದೀಕೃತಿಯನು
ಮೇದಿನಿ ನಲಿಯೆ ಪೇಳುವೆನು ॥ ೧೨

ಛಂದಸ್ಸು ಗಣ ಲಕ್ಷ್ಯ ಲಕ್ಷಣಗಳ ಮೊದ
ದಿಂದ ತಿಳಿದು ಶುಭದೊಳಗೆ ।
ಇಂದು ಧರನ ಕೃಪೆಯಲಿ ಪೇಳ್ವ ಕೃತಿಯಿಂದ
ಚೆಂದದೆ ಬುಧರು ಲಾಲಿಪುದು ॥ ೧೩

ಉರಗಗಳುಕಿ ಪೂಜಿಸುವರಲ್ಲದೆ ಮತ್ತೆ
ಗರುಡನಿಗಂಜುವರುಂಟೆ ।
ಸರಸ ಸಜ್ಜನರಂತಿರಲಿ ದುರ್ಜನರಿಗಾ
ನೆರಗುವೆನತಿ ಭೀತಿಯಿಂದ ॥ ೧೪

ಹಸಿವು ವೆಸನ ತೃಷೆ ಯಾಲಸ್ಯ ಮೋಹವೆಂ
ಬೆಸಕವುಳ್ಳುದು ನರ ದೇಹ ।
ಉಸಿರಿದ ಕೃತಿಯೊಳು ಮರೆದೆಡಹಿರೆ ತಿದ್ದಿ
ಜಸವ ಮೆರೆವುದು ಕೋವಿದರು ॥ ೧೫

ಸೊಕ್ಕು ಜವ್ವನೆಯು ತಕ್ಕೆಯು ಸವಿಯಂದದೆ
ಸಕ್ಕರೆ ಚೆಲು ಪಾಲಿನಂತೆ ।
ಅಕ್ಕರಿಂದಲಿ ಕೇಳುವರಿಗತಿ ಹರುಷವ
ಮಿಕ್ಕೆಸಗುವುದೀಕಾವ್ಯ ॥ ೧೬

ದೇವತಾ ಸ್ತುತಿ ಯಲ್ಲ ಕೇಳ್ವೊಡೆ ನರ ಸ್ತುತಿ
ಯಾವ ವೆಗ್ಗಳವೆನಬೇಡ |
ನಾವಿಷ್ಣುಃ ಪೃಥಿವೀ ಪತಿ ಯೆಂದು ವೇ
ದಾವಳಿಗಳು ಸಾರುತಿವೆ ಕೊ || ೧೭

ಇನಿತಲ್ಲದಂದಿನ ನರ ಸಿಂಹ ಕಲಿ ಯುಗ
ದನುಜರ ಸಂಹರಿಸುವೊಡೆ |
ಮನುಜಾವತಾರದೆ ಬಂದರಸನ ಕಥೆ
ವಿನುತ ವಿಜಯ ಕೇಳ್ದರಿಗೆ || ೧೮

ಇದಕೆ ತಾರ್ಕಣೆ ಯಾವುದೆನೆ ನರ ಹರಿ ಯುಂ
ದುದುಭವಿಸಿದ ಮಾಸ ತಿಥಿಯು |
ಪುದಿದತಿ ಶುಭ ವಾರ ಸಂಜೆಯೊಳುದಿಸಿದ
ಪದುಮಾಕ್ಷನೀತ ತಾನೈಸೆ || ೧೯

ಈ ಮಹಿಮನ ಸು ಚರಿತ್ರ ಶೌರ್ಯಗಳ ಸು
ತ್ರಾಮ ಭೋಗವ ಧರ್ಮದಿರವ ||
ನೇಮದೆ ಮಾಂಗಲ್ಯ ಕೃತಿ ಯಾಗೆ ಪೇಳ್ವೆನು
ಪ್ರೇಮದೆ ಕೇಳ್ವುದುತ್ತಮರು || ೨೦

ಬಿರುದಂತೆಂಬರ ಗಂಡ ಭೀಮ ಪರಾಕ್ರಮಿ
ಧುರ ಧೀರನೇಕಾಂಗ ವೀರ |
ನೆರೆ ಕರ್ಣಾಟಕ ಚಕ್ರೇಶ ನರಸ ಭೂ
ವರನ ಚರಿತೆಯ ಪೇಳುವೆನು || ೨೧

ಪರ ಬಲ ಮೋಘಾನಿಲನಾಂಧ್ರ ಬಲ ಸಂಘ
ಕರಿ ಕುಲ ಕಂಠೀರವೇಂದ್ರ |
ಅರಿ ಪಾಂಡ್ಯ ಭೂಭೃದ್ಗಿರಿ ವಜ್ರ ದಂಡನ
ಚರಿತೆಯನುಸಿರುವೆನೊಲಿದು || ೨೨

ಕೊಂಕಣ ಮಲೆಯಾಳ ಕೊಡಗು ಭೂ ಪಾಲರ
ಬಿಂಕವ ಮರ್ದಿಪ ಶೂರ ।
ಪಂಕಜ ನೇತ್ರ ಸದೃಶ ಕಂಠೀರವ
ನಂಕಿತ ಕೃತಿಯು ಪೇಳುವೆನು ॥ ೨೩

ದೇವ ಭೂ ದೇವ ಪಾಲನ ಧರ್ಮ ಶೀಲನ
ಪಾವನ ಚರಿತೋನ್ನತನ ।
ಭೂ ವರ ಕಂಠೀರವನೆನಿಸಿದ ನರ
ದೇವನ ಕೃತಿಯು ಪೇಳುವೆನು ॥ ೨೪

ತರುಣೀ ಜನ ನೇತ್ರೋತ್ಪಲ ಚಂದ್ರನ
ಸರಸ ವಿದ್ಯಾ ವಿಶಾರದನ ।
ದೊರೆ ರಾಯ ನರಸ ರಾಜೇಂದ್ರನ ಚರಿತೆಯು
ನೊರೆದ ಭಾರತಿನಂಜನೊಲಿದು ॥ ೨೫

ಕೋಟೆ ಕೋಳಾಹಳ ಸಂಗರ ವಿಜಯ ವ
ಧೂಟೀಶ ಕಂಠೀರವನ ।
ಮಾಟವೆನಿಸುವ ಚರಿತೆಯುಲಿ ರಾಜಿಸುತಿಹ
ಪೀಠಿಕಾ ಸಂಧಿ ಸಂಬಂಧಿ ॥ ೨೬

ಅರಿ ನೃಪ ಗಜ ಕಂಠೀರವ ಮೈಸೂರ
ನರಸ ರಾಜೇಂದ್ರ ಚಂದ್ರಮನ ।
ಚರಿತೆಯ ಲಾಲಿಸಿದರಿಗೆ ಶ್ರೀರಂಗೇಶ
ಕರುಣಿಸುತಿಹ ವರಗಳನು ॥ ೨೭

ಪೊಡವಿಪ ದಳವಾಯಿ ನಂಜ ರಾಜೇಂದ್ರ ತ
ನ್ನೊಡೆಯನ ಕಾರ್ಯದೇಳಿಗೆಯ ।
ಗಡಣವ ಚರಿತೆಯಾಗೊಲಿದು ಪೇಳಿಸಿದನು
ಕಡು ಗಲಿಗಳು ಲಾಲಿಪುದು ॥ ೨೮

ಪೀಠಿಕಾ ಸಂಧಿ ಸಮಾಪ್ತಂ.

# ಎರಡನೆಯ ಸಂಧಿ

## ಭೂ ಭಾಗ ವರ್ಣನೆ

**ಸೂಚನೆ** || ವನಧಿ ಕನಕ ಗಿರಿ ಭೂ ಭಾಗ ಮೊದಲಾದ
ಘನ ವರ್ಣನೆಯ ಪೇಳುವೆನು || ೧

ಗೋಪತಿ ಸುತನ ತಮ್ಮನ ತಂದೆಯು ದಿವ್ಯ
ರೂಪಿಗೆ ನಲಿದುದನೊಲಿದು |
ಚಾಪಕೆ ಶರನ ಮಾಡಿದನಯ್ಯ ಶ್ರೀಲ
ಕ್ಷ್ಮೀಪತಿ ಸಲಹು ಸಜ್ಜನರ || ೨

ಧಾರಿಣಿಯೆಂದೆಂಬ ವನಿತೆಯು ಮಧ್ಯದಿ
ಸೇರಿದ ರತ್ನ ಮೇಖಲೆಯು |
ಚಾರು ಶೃಂಗಾರದಂದದಲಿ ಪರಿಧಿಗೊಂಡು
ಪಾರಾವಾರ ರಂಜಿಸಿತು || ೩

ಇಂತೊಪ್ಪುತಿಹ ವಾರಿಧಿಯು ಮಧ್ಯದ ಭೂ
ಕಾಂತೆಗಾಧಾರ ತಾನಾಗಿ |
ಸಂತತ ಕನಕಾದ್ರಿ ಸಕಲ ವಸ್ತುವ ದೇವ
ಸಂತತಿಗೀಯುತೊಪ್ಪಿದುದು || ೪

ಪಶು ಪತಿಗಾಯುಧವಾದೆನಂಬುಜ ಭವ
ನೆಸೆವ ಸಿರಿಗೆ ಸಂತಸದ |
ವಸತಿ ತಾನಾದೆನೆಂದಾ ಕನಕಾದ್ರಿ ರಾ
ಜಿಸುವುದುನ್ನತ ಗರ್ವದಿಂದ || ೫

ಖಚರ ಕಿನ್ನರ ಕಿಂಪುರುಷ ಗಂಧರ್ವರ
ನಿಚಯವೈತಂದಾ ಗಿರಿಯು ।
ಶುಚಿಯಹ ದಿವ್ಯ ಸ್ಥಳದೊಳು ಕ್ರೀಡಿಸು
ತಚಲ ಸಂಪದದೊಳೊಪ್ಪಿಹುದು ॥ ೬

ಆ ಕನಕಾದ್ರಿಯು ತೆಂಕಣ ದೆಸೆಯೊಳು
ಶ್ರೀ ಕರವಾಗಿ ರಂಜಿಸುತ ।
ಪ್ರಾಕಟ ಚಪ್ಪನ್ನ ದೇಶ ಸಂತತ ಪುಣ್ಯ
ದಾಕರವಾಗಿ ರಂಜಿಸಿತು ॥ ೭

ಕಾಶಿ ಕೇದಾರ ಪ್ರಯಾಗೆ ಗಯಾ ಕ್ಷೇತ್ರ
ಶ್ರೀಶೈಲ ಗೋವರ್ಧನಾದ್ರಿ ।
ಭಾಸುರವೆನಿಪ ಪುಣ್ಯಸ್ಥಳ ಚಪ್ಪನ್ನ
ದೇಶದೊಳಗೆ ರಾಜಿಪುದು ॥ ೮

ಗಂಗೆ ಯಮುನೆ ಕೃಷ್ಣ ವೇಣಿ ಗೋದಾವರಿ
ತುಂಗಭದ್ರೆಯು ಮೊದಲಾದ ।
ಮಂಗಳ ಮಯ ಪುಣ್ಯ ನದಿಗಳು ದೇಶ ದೇ
ಶಂಗಳೊಳಗೆ ಮೆರೆದಿಹುವು ॥ ೯

ಚಪ್ಪನ್ನ ದೇಶ ರಾಜಿತಮಾ ಸ್ತ್ರೀ ಮುಖ
ದರ್ಪಣದಂತೆ ಮೋಹನದೆ ।
ಇಪ್ಪುದು ಕರ್ಣಾಟಕ ರಾಜ್ಯ ಚಲುವಾಂತು
ವೊಪ್ಪುವ ಸಕಲ ಸಂಭ್ರಮದೆ ॥ ೧೦

ತೊರೆಗೂಡಿದ ನದಿ ನದಿಯು ಕಾಲುವೆಗಳು
ಪರಿದು ಕೂಡಿದ ಕೆರೆಯಿಂದ ।
ಕೆರೆ ತೊರೆ ನದಿಯಾರಾಮ ರಂಜಿಸುತಿಹ
ಪುರವಿಹುವಾ ದೇಶದೊಳಗೆ ॥ ೧೧

ಶಾಲಿಯ ಗದ್ದೆ ಕರ್ಪೂರದೋಟ ನಾನಾ ಪುಷ್ಪ
ಜಾಲದ ಕನದನ್ನ ಸತ್ರ ।
ದಾಲಯದಾ ಮೋಹದ ಗೃಹವೆಸೆವುವು
ಮೇಲಾಗಿ ಯಾ ದೇಶದೊಳಗೆ ॥ ೧೨

ಆ ನಾಡೊಳಗೊಪ್ಪುವ ತರು ಸುರ ತರು
ಧೇನುಗಳ ಕಾಮ ಧೇನು ।
ಮಾನವರೆಲ್ಲರು ಸುಮನಸರೆನಿಸಿ ಸು
ಜ್ಞಾನಿಗಳಾಗಿಹರಲ್ಲಿ ॥ ೧೩

ಪೊಡೆಯೆಂಬ ನುಡಿ ಶಾಲಿಯ ಬೆಳಯೊಳು ಕೊಂಕು
ಬಡಕೆಂಬ ನುಡಿ ಯಾ ನಾಡ ।
ಮಡದಿಯರವಯವಗಳೊಳಲ್ಲದೆ ಬಿರು
ನುಡಿ ಯಿಲ್ಲವೇನ ಬಣ್ಣಿಸುವೆ ॥ ೧೪

ಕಟ್ಟೆಂಬ ನುಡಿ ಮಾಲೆಗಾರ್ತಿಯರೊಳು ನೆರೆ
ಪೆಟ್ಟೆಂಬ ನುಡಿ ಟಂಕದೊಳಗೆ ।
ಕುಟ್ಟೆಂಬ ನುಡಿ ವ್ರೀಹಿಯೊಳಲ್ಲದೆ ಬೇರೆ
ದಿಟ್ಟಿಸಲಾ ನಾಡೊಳಿಲ್ಲ ॥ ೧೫

ಜಾತಿ ಸಂಕರವಿಲ್ಲ ಜಡ ದೇಹಿಗಳಿಲ್ಲ
ನೀತಿ ಹೀನರು ಚೋರರಿಲ್ಲ ।
ಘಾತುಕರಿಲ್ಲ ದುರ್ಜನರಿಲ್ಲ ಕರ್ಣಾಟ
ರೀತಿಯನೆಂತು ಬಣ್ಣಿಪೆನು ॥ ೧೬

ಆ ಕರ್ಣಾಟ ದೇಶದಲಿ ಪ್ರವಹಿಸಿ
ಲೋಕ ಪಾವನೆ ಯೆಂದೆನಿಸಿ ।
ಸೋಕಿದವರ ದುರಿತವ ಪರಿ ಹರಿಸುತ
ಶ್ರೀ ಕಾವೇರಿ ಯೊಪ್ಪಿಹಳು ॥ ೧೭

ಬಿಂದು ಮಾತ್ರವು ಮೇಲೆ ಬೀಳಲು ಬಹು ಪಾಪ
ದಂದುಗಗಳ ಪರಿಹರಿಸಿ ।
ಮುಂದೆ ಸಾಲೋಕ್ಯ ಪದವನೀವ ಕಾವೇರಿ
ಬಂಧುವಾಗಿಹಳು ಭಕ್ತರಿಗೆ ॥ ೧೮

ಒಡನೆ ಕಪ್ಪಿನಿ ಕೌಂಡಿನಿ ಹೇಮಾವತಿ
ವಿಡಿದು ಸಮಸ್ತ ನದಿಗಳ ।
ಸಡಗರದೊಳಗೊಳಕೊಂಡು ಮುಕ್ತಿ ಸ್ಥಾನ
ಕೆಡೆಯಾಗಿಹಳು ಕಾವೇರಿ ॥ ೧೯

ಊರೂರುಗಳಿಗೆ ಕಾಲುವೆ ಕಟ್ಟೆಗಳನಿತ್ತು
ಚಾರುತರದ ಧಾನ್ಯಗಳನು ।
ಪೂರಿತ ಫಲವೀಯುತೆ ಸರ್ವ ಜನಕುಪ
ಕಾರಿ ಯಾಗಿಹಳು ಕಾವೇರಿ ॥ ೨೦

ಎಸೆವಾ ಕಾವೇರಿಯ ತಟದೊಳು ಬಹು ಪುಣ್ಯ
ದೆಸಕದ ದಿವ್ಯ ಸ್ಥಳಗಳು ।
ಜಸ ಪಡೆದಿಹುವಾ ಮಹಿಮೆಯು ಪೊಗಳ್ವಡೆ
ಬಿಸಜ ಸಂಭವಗಳವಲ್ಲಾ ॥ ೨೧

ಕಂಗೊಳಿಸುವ ಕಣ್ವ ಕ್ಷೇತ್ರ ಗೌತಮ ವಾಸ
ಮಂಗಳಮಯ ತ್ರಿಮಕೂಟ ।
ಪುಂಗವ ವಾಹನ ವೈದ್ಯೇಶ ಪರ ಮುಖ್ಯ
ಶೃಂಗರಾಶ್ರಮಗಳೊಪ್ಪುವುವು ॥ ೨೨

ದಕ್ಷಿಣ ಗಯೆ ಶಿವನಂಬುಧಿ ನೆರೆ ನಿಟ
ಲಾಕ್ಷ ಮಲ್ಲೇಶ ಭೂ ಧರವು ।
ಅಕ್ಷಯ ಮಾರುತಿ ಭೀಮೇಶನ ವರ
ಸು ಕ್ಷೇತ್ರವೆಸೆವುವೇನೆಂಬೆ ॥ ೨೩

ಭೂರಮಣಿಯ ಪೆರೆನೊಸಲ ರತ್ನದ ದಿವ್ಯ
ಚಾರುತರದ ಬಟ್ಟನಂತೆ ।
ಶ್ರೀರಂಗ ಪಟ್ಟಣವೆಸೆದಿಹುದುಭಯ ಕಾ
ವೇರಿಯ ಮಧ್ಯದೊಳಾಗ ॥ ೧೪

ಆ ಪಟ್ಟಣದಾ ದಕ್ಷಿಣ ದೆಸೆಯೊಳಗೆ ಶ
ಚೀ ಪತಿ ಪುರದ ಚೆಲ್ವಿಕೆಯ ।
ಏ ಪೊತ್ತು ನಗುವಂತೆ ಮೈಸೂರು ಕೀರ್ತಿ ಪ್ರ
ತಾಪದೆ ಮೆರೆವುದೊಲ್ಮೆಯಲಿ ॥ ೧೫

ಧರೆಯ ಮೇಲಣ ವೈರಿನೃಪರ ದಂಡಿಸಿ ತಂದ
ವರ ವಸ್ತು ಚಯವೆಸೆದಿರಲು ।
ಮೆರೆವುದು ಮೈಸೂರೆಂದೆಂಬ ನಾಮದೊಂ
ದುರುತರ ಧ್ವನ್ಯರ್ಥವಾಗಿ ॥ ೧೬

ಆ ಮಹಾ ಪುರದ ದಕ್ಷಿಣ ಬಹಿರ್ಭಾಗದ
ಸೀಮೆಯೊಳಗೆ ಸಂತಸದೆ ।
ಶ್ರೀಮನ್ಮಹಾಬಲಾಚಲವೊಪ್ಪುತಿಹುದು
ವ್ಯೋಮ ಮಂಡಲವ ಚುಂಬಿಸುತ ॥ ೧೭

ಕನಕಾದ್ರಿ ಬಾಗಿತು ಮಂದರ ಪರ್ವತ
ವನಧಿಗೆ ಕಡೆಗೋಲಾಯ್ತು ।
ತನಗಿನ್ನು ಸರಿಯಹ ಗಿರಿಗಳಿನ್ನಾರೆಂದು
ಘನ ಹರ್ಷದೊಳೊಪ್ಪುತಿಹುದು ॥ ೧೮

ಆವ ದಿಕ್ಕಿನಲಿ ನೋಡಿದೊಡೈದು ಮುಖವಾಗಿ
ತೀವಿ ಕೊಂಡಾಕಾಶವನು ।
ಭಾವಿಸೆ ಪರಶಿವನಾಕಾರದಿಂದಲಾ
ದೇವತಾ ಶೈಲವೊಪ್ಪುವುದು ॥ ೧೯

ಉರಗ ನಾರಿಯುರಂಬರ ಚರಿಯರ ಚೆಲ್ವ
ಜರೆದು ನಗುವೊಡ್ಯೈದಲಿಟ್ಟ ।
ಪಿರಿದೇಣಿ ಪಟ್ಟ್ಯನೆ ಶೈಲಾಗ್ರ ಪರಿಯನ್ತ
ಮೆರೆವುದಾ ಗಿರಿಯ ಸೋಪಾನ ॥ ೨೦

ಗಿರಿಯ ಶೃಂಗಾಗ್ರದೆ ಚಳಿ ಮಳೆ ಬಿಸಿಲೆನ್ನ
ದುರುತರ ಯೋಗ ಮಾರ್ಗದಲಿ ।
ಪರಮಾತ್ಮನ ಧ್ಯಾನದಿಂದ ಯೋಗೀಶ್ವರ
ರಿರುತಿಹರೇನ ಬಣ್ಣಿಸುವೆ ॥ ೨೧

ಕಪ್ಪುರ ವಾಳೆ ಕ್ರಮುಕ ಜಂಬೀರಗ
ಳೊಪ್ಪುವ ಪಲಸ ರಸಾಲ ।
ಹಿಪ್ಪೆ ಯಿಂಗುಳ ಮೊದಲಾದ ನಾನಾ ತರು
ತಪ್ಪಲೊಳಸೆವುವಾ ಗಿರಿಯು ॥ ೨೨

ಕಡವೆ ಕಾಡೆಮ್ಮೆ ಶರಭ ಶಾರ್ದೂಲಗ
ಳೊಡನೊಪ್ಪುತಿಹ ಹರಿಣಗಳು ।
ಖಡುಗ ಮೃಗದ ಗೊಂದಣ ಹರಿ ಹುಲ್ಲೆಗ
ಳ್ಬಡದೊಪ್ಪಿದುವು ಗಿರಿಯೊಳಗೆ ॥ ೨೩

ಸ್ವಾದೂದಕದ ಸರಸಿ ದಿವ್ಯ ಪರಿಮಳ
ವೈದಿದ ಪೊಂದಾವರೆಯು ।
ಭೂಧರದಗ್ರದೊಳಸೆದು ಜನರಿಗಾ
ಹ್ಲಾದವ ಪುಟ್ಟಿಸುತಿಹುದು ॥ ೨೪

ಕಾನೀನನಾಗಿ ಪಾಂಡವನಾಗಿ ತಪ ಪಿಡಿ
ದಾನಂದದ ಯೋಗಿ ಯಾಗಿ ।
ಏನೆಂಬೆ ಸುರ ಕುಲವಾಗಿ ಯಾ ಭೂ ಧರ
ನಾನಾ ರೂಪಿನೊಳಿಹುದು ॥ ೨೫

ಇಂತೊಪ್ಪುತಿಹ ಗಿರಿ ತುದಿಯೊಳುಮಾ ಕಾಂತ
ಕಂತು ಮರ್ದನ ಸರ್ವೇಶ ।
ಚಿಂತಿತ ದಾಯಕ ಮಹಾ ಬಲ ಭಕ್ತರ
ಸಂತತದಲಿ ಸಲಹುವನು ॥ ೩೬

ಪುಂಡರೀಕಾಕ್ಷಿ ಪೂರ್ಣೇಂದು ವದನೆ ವರ
ಖಂಡಪರಶುವಿನರ್ಧಾಂಗಿ ।
ಮಂಡಿಸಿ ಪದ್ಮಾಸನದೆ ಸಕಲ ಗುಣ
ಮಂಡನೆ ಚಾಮುಂಡಿ ಯಿಹಳು ॥ ೩೭

ಕೊಟ್ಟು ವರವ ಪ್ರತ್ಯಕ್ಷವ ತೋರುತ
ಸೃಷ್ಟಿಯೊಳಗೆ ಮೈಸೂರ ।
ಪಟ್ಟದ ನೃಪ ಕುಲ ದೇವತೆ ಯೆನಿಸುವ
ಬೆಟ್ಟದ ಚಾಮುಂಡಿ ಯಿಹಳು ॥ ೩೮

ಆ ಮೈಸೂರನು ಬಳಸಿದುದ್ಯಾನವು
ಸೋಸು ಸೂರ್ಯರ ಕಿರಣಗಳ ।
ತಾ ಮರೆಸುತ ಪತ್ರ ಚ್ಛಾಯೆಗಳಿಂದ
ರಾಮಣೀಯಕವಾಗಿಹುದು ॥ ೩೯

ಪುರ ಲಕ್ಷ್ಮಿ ತನ್ನೊಳಗಿರುವರಿಗಿಷ್ಟಾರ್ಥ
ಪರಕೆ ಕೈಗೂಡೆ ಸಂತಸದೆ ।
ಹಿರಿದುಟ್ಟ ಪಸುರುಡಿಗೆಯೊ ಯೆಂದೆನಲಾ
ವರ ವನ ಬಳಸಿ ಕೊಂಡಿಹುದು ॥ ೪೦

ಆಗಸದೊಳು ಚರಿಸುವ ಸುರ ಸತಿಯರ
ಸೋಗೆ ಮುಡಿಗೆ ಪೂಜ್ಯವಾಗಿ ।
ಆಗರಳಿದ ಕಸ್ತೂರಿ ಹೊಂಬಾಳೆಯ
ಪೂಗ ವೃಕ್ಷಗಳೊಪ್ಪುತಿಹುವು ॥ ೪೧

ಗಂಗೆಯು ಧರಿಸಿ ಭಸಿತವಿಟ್ಟು ಫಲದೊಳು
ಹಿಂಗದೆ ಮುಕ್ಕಂಣನಾಂತು ।
ಅಂಗಜ ಹರನಂತೆ ಯಾರಾಮದೊಳಗಾ
ತೆಂಗಿನ ಮರಗಳೊಪ್ಪಿದುವು ॥ ೪೦

ಶಶಿ ಬಿಂಬ ಹಲವು ರೂಪಾದಂತೆ ಫಲದೊಳ
ಗೆಸೆವ ಚಂದಿರ ವರ್ಣವಾಂತು ।
ರಸ ಪೂರಿತವಾದ ಕಿತ್ತಳ ವನ್ನನು
ಮುಸುಕಿ ಕೊಂಡಿಹುವೇನೆಂಬೆ ॥ ೪೩

ಅಂಬರ ಚರಿಯರ ತನು ಗಂಪಿಗೆರಗುವ
ತುಂಬಿಯು ಬಳಗದಂದದಲಿ ।
ಮುಂಬರಿದೆಸೆವ ಕಪ್ಪಿಡಿದ ಫಲಾಳಿಯಿಂ
ಜಂಬು ನೇರಿಲೆಗಳೊಪ್ಪಿದುವು ॥ ೪೪

ತವ್ಮೊಳಿರ್ದಮೃತದ ಸವಿಯು ದೇವರ್ಕಳ
ಗೊಮ್ಮ ತೋರುವ ತೆರದಂತೆ ।
ಹೊಮ್ಮಿ ಯಾಗಸಕಡರ್ದಿನಿ ಮಾವು ಫಲ ಸಹ
ಸುಮ್ಮಾನದಿಂದೊಪ್ಪಿಹುವು ॥ ೪೫

ಕಂಟಕಿ ಯೆಂದು ನುಡಿಪರೆಮ್ಮನೆಮ್ಮೊಳ
ಗುಂಟಾದ ಸವಿ ಯನಿಪಿಷರು ।
ಈಂಟುವ ಸುಧೆಯೊಳಿಲ್ಲೆಂದು ತೋರ್ಪುಲು ಫಲ
ವಂಟದ ಪಲಸುಗಳಿಹುವು ॥ ೪೬

ಬದರಿ ತಮಾಲ ಗುಗ್ಗುಳ ಬಿಲ್ವ ಸವಿ ರಸ
ಪುದಿದ ಕದಳಿ ಕರ್ಜೂರ ।
ಬದವಿದ ಫಲ ದಾಡಿಮದ ತಿಂತಿಣಿಗಳು
ಮುದದಿಂದ ಬನದೊಳೊಪ್ಪಿಹುವು ॥ ೪೭

ಕತ್ತುರಿ ಮರುಗ ಸೇವಂತಿಗೆ ಪರಿಮಳ
ವೆತ್ತ ಸಂಪಿಗೆ ಕೆಂಜಾಜಿ ।
ಉತ್ತಮವಾಗಿಹ ಮುಡಿವಾಳ ಲಾಮಂಚ
ಸುತ್ತಲೊಪ್ಪುಹುವಾ ವನದೊಳು ॥ ೪೮

ಚೆಂಗಣಿಗಿಲು ನೈದಿಲು ಹೊಂದಾವರೆ
ಪೊಂಗಿದ ಸರಸಿಗಳಿಂದ ।
ಮಂಗಳ ಮಯವೆನಿಪುದ್ಯಾನ ಕಣ್ಗೆ ಬೆ
ಡಂಗಾಗಿ ರಾಜಿಸುತಿಹುದು ॥ ೪೯

ಅರಸಂಚೆ ಕೋಗಿಲೆ ನವಿಲು ರಥಾಂಗಗ
ಳುರುತರ ಕೀರ ಪಾರಿವವು ।
ಪರಿ ಶೋಭಿಸಿರುವಾ ಉದ್ಯಾನದ ಸಿಂ
ಗರವವದೇನ ಬಣ್ಣಿಪೆನು ॥ ೫೦

ಶಶಿ ರವಿಗಳ ಸರೆ ಧರಿಸಿ ಸಂತೋಷದೆ
ಪಶು ಪತಿಯಂತೆ ರಾಜಿಸುತ ।
ಮುಸುಕಿಹ ಕರವೀರಕಾಶ್ರಯವಾಗಿ ರಂ
ಜಿಸಿದುದಾ ಬನ ದೊರೆಯಂತೆ ॥ ೫೧

ಕಿತ್ತಿಳೆ ಹಣ್ಣಿನ ಸವಿ ರಸದಂತಿರು
ವುತ್ತಮ ಜಲ ಪೂರ್ಣವಾಗಿ ।
ಮತ್ತಾ ಪುರದ ಬಹಿರ್ಭಾಗದೊಳಗಾ
ಕಿತ್ತಿಳಗೆರೆ ರಾಜಿಸಿತು ॥ ೫೨

ಕಳವೆಯು ಪಾಲ್ದೆನೆಗಳ ಸವಿಗೆರಗುವೊ
ಡುಲಿದೈತಹ ಗಿಳಿವಿಂಡ ।
ಎಳೆ ವೆಣ್ಣುಗಳು ನಸು ನಗುತಾಗ ಕೈ ಚ
ಪ್ಪಳೆ ಯಿಕ್ಕಿ ಪಾರಿಸುತಿಹರು ॥ ೫೩

ದಾರಿ ದಾರಿಯೊಳರವಟ್ಟಿಗೆಗಳೊಳಗೆ
ನೀರೆರೆವಬಲಾ ಜನದಾ ।
ತೋರ ಮೊಲೆಗಳಗೆರಗಿದ ಪಾಂಥರ ದಿಟ್ಟಿ
ತೋರಿದುವನಿಮಿಷತೆಯನು ॥ ೫೪

ತೊಳಪ ಬೆಳ್ಮುಗಿಲ ಮೊಗ್ಗರದಂತೆ ಸಾಲುಗೊಂ
ಡಳವಟ್ಟು ಪುರದಿಂದಲೈದಿ ।
ಸಲಿಲವನೀಂಟಿ ಮರಳಿ ಪೋಪ ತೇಜಿಯು
ಬಳಪೊಪ್ಪಿದುವೇನನೆಂಬೆ ॥ ೫೫

ಮುಂಗಾರ ಮುಗಿಲೊಡ್ಡಿನಂತೆ ಮದಂಗಳ
ಗಂಗೈಸುವ ತುಂಬಿ ವಿಂಡ ।
ಹಿಂಗದೆ ಕರ್ಣ ತಾಳದಲಿ ಸೋವುತ ಮಾ
ತಂಗ ನೀರ್ಗೈದುವುವಲ್ಲಿ ॥ ೫೬

ಹೊಳೆವ ದಿವ್ಯಾಂಬರವುಟ್ಟು ಭೂಷಣಗಳ
ನಲುಗಿಸುತಬುಜಾಕ್ಷಿಯರು ।
ಕಳಧೌತ ಘಟದೊಳು ನೀರಾಂತು ಪೋಪರು
ಪೊಳಲಧಿದೇವಿಯರಂತೆ ॥ ೫೭

ಧ್ರುವನಿಗಂಬುಜದಳ ನೇತ್ರನಂದೊಲಿದಿತ್ತ
ಸುವಿಲಾಸದ ಪುರದಂತೆ ।
ಅವನಿಯೊಳಧಿಕವೆಂದೆನಿಸಿ ಮೈಸೂರು
ತ್ಸವವ ಬೀರಿತು ಚೆಲ್ವಿನಿಂದ ॥ ೫೮

ಮೇರೆ ವಿಡಿದು ಪ್ರಾಕಾರದಿಂದಾಗ
ಸೂರ ಮಂಡಲವ ತುಡುಕುತ ।
ಚಾರು ತರವ ದಿವ್ಯ ನವ ರತ್ನದ ಕೋಟೆ
ತೋರಿತು ಕಣ್ಗೆ ಕೌತುಕವ ॥ ೫೯

ಪಾತಾಳದ ಫಣಿಪತಿ ಸಗ್ಗವ ನೋಡ
ಲಾತುರದಿಂ ಮೇಲಕೇಳ್ |
ಖ್ಯಾತಿಯು ಪೆಡೆಗಳ ಸಾಲೆನೆ ಕೋಟೆಯು
ನೂತನ ತೆನೆಗಳೊಪ್ಪಿದುವು ॥ ೬೦

ಬಲವೈರಿ ಸುತನ ನಂದನನಾ ಫಣಿಲೋಕಕೆ
ತಳತಂತ್ರ ಸಹಿತೈದಿ ಬಂದ |
ಬಿಲಮಾರ್ಗವೆಂದೆನಲಾ ಪುರದಗಳು ಕ
ಣ್ಗೊಳಿಸಿದುದಚ್ಚರಿಯೆನಿಸಿ ॥ ೬೧

ಅಷ್ಟದಿಕ್ಪಾಳರು ತಮ್ಮಯ ಪಟ್ಟಣಗಳ
ಗಟ್ಟುಳಿಯಾಗೆ ರಕ್ಕಸರ |
ನಟ್ಟನೆ ನಿಲುವ ತಾಣಗಳನೆ ಕೊತ್ತಳ
ಕಟ್ಟಸಕದೊಳೊಪ್ಪಿದುವು ॥ ೬೨

ಸಗ್ಗದ ಸುರರೆಡೆಯಾಡಿದ ಶ್ರಮಗಳ
ತಗ್ಗಿಸಿ ಕೊಂಬೆವೆಂದೆನುತ |
ಹಿಗ್ಗಿ ಮಾಡಿದ ಪದವೆನೆ ಮುಗಿಲಟ್ಟಣೆ
ಯುಗ್ಗಡಿಸುವುವೆಂಬರವ ॥ ೬೩

ಮಲೆತೀ ಪುರಕೈತಹ ರಿಪುನೃಪ ಪಶು
ಕುಲ ಸಮೂಹವನಗಿದುಗುಳ್ವ |
ಸಲೆ ಶಾರ್ದೂಲ ವದನವೆನೆ ಹುಲಿಮುಖ
ಬಲು ಭಯಾಂಕುರವ ಬೀರುವುವು ॥ ೬೪

ನರೆ ನಮ್ಮಾ ಪುರದರಸಿನಗ್ಗಳಿಕೆಗೆ
ಸರಿಯಿಲ್ಲ ಜಗದೊಳಗೆಂದು |
ಪುರಲಕ್ಷ್ಮಿ ಕೈಗಳೆತ್ತಿದವೋಲು ಡೆಂಕಣಿ
ಮೆರೆದುವೆಣ್ದೆಸೆಯೊಳೇನಂಬೆ ॥ ೬೫

ಶಾಲಾ ವೀಧಿಯು ಬಳಸಿ ರಂಜಿಸಿ ಮೆರೆ
ವಾಳುವೇರಿಗಳಂಬು ಗಂಡಿ ।
ಮೇಲೊಪ್ಪುತಿಹ ಪಂದಿ ದಳೆ ದಸಿ ಶೂಲಗ
ಳ್ಮಾಲೋಕಕತಿಶಯುವಾಯ್ತು ॥ ೬೬

ಅಂತರಾಂತರದ ಬಾಗಿಲ ಚಾವಡಿಯೊಳು
ತಿಂತಿಣಿಸುವ ಪಟು ಭಟರು ।
ಕುಂತ ಕಠಾರಿ ಭಲ್ಲೆಹ ಖಡುಗವನಾಂತು
ಸಂತಸದಲಿ ಕಾದಿಹರು ॥ ೬೭

ಆನೆಯು ಶಾಲೆ ಹಯಾವಳಿಗಳ ಲಾಯು
ಜೀನ ಶಾಲೆಗಳಲ್ಲಲ್ಲಿ ।
ಏನೆಂಬೆ ನೂತನವಡೆದಿಹುವುರೆ ನೋಳ್ಪ
ಮಾನಿಸರುಗಳ ಕಣ್ಮನಕೆ ॥ ೬೮

ಶಶಿ ರವಿ ವೀಧಿಗಳೊಳು ಸಾಲ್ಗೊಂಡು ಸಂ
ತಸದೊಳೊಪ್ಪುವ ಸರ್ವ ಜನರ ।
ವಸತಿಗಳೆಸೆವುವು ನವರತ್ನ ಹೇಮ
ಪ್ರಸರದುಪ್ಪರಿಕೆಗಳಿಂದ ॥ ೬೯

ಕ್ಷೀರಾಂಬುನಿಧಿ ತನ್ನ ಮಗಳೀ ಪುರದೊಳು
ಸೇರಿಹಳ್ನೋಡ ಬೇಕೆಂದು ।
ಕಾರುಣ್ಯದಿಂ ಬಂದಂತಿರೆ ಧವಳಿಮ
ಚಾರು ಮಂದಿರಗಳೊಪ್ಪುವುವು ॥ ೭೦

ಮನೆ ಮನೆಗಳ ಬಾಗಿಲು ಬಾಗಿಲ ಮುಂದೆ
ಕನಕ ದೋರಣದ ಸಾಲಿಂದ ।
ಘನತರವಹ ನವಿಲುಯ್ಯಾಲೆಗಳಿಂದ
ಲನಿಮಿಷ ಪುರವ ಪೋಲ್ತಿಹುದು ॥ ೭೧

ವೇದ ವಿದರ ಬಹು ಶಾಸ್ತ್ರ ಸಂಪನ್ನರ
ವಾದಿಸುತಿಹ ತಾರ್ಕಿಕರ ।
ನಾದ ವಿದರ ಲಕ್ಷಣ ಕವಿ ನಿಕರ ವಿ
ನೋದದ ಕೇರಿ ಯೊಪ್ಪುವುವು ॥ ೨೦

ವಿಟ ವಿ ದೂಷಕ ನಾಗರಿಕ ಪೀಠ ಮರ್ದನ
ನಟುವಿಗ ತಾಳ ಧಾರಿಗಳಾ ।
ಪಟುವಾಂತ ವೈಣಿಕ ಮಲ್ಲ ಗಾಯಕರ ವಿ
ಸ್ಫುಟ ವೀಧಿಗಳೊಪ್ಪುವುವು ॥ ೨೩

ಸುಲಲಿತವಪ ನಾನಾ ವರ್ಣಜ್ಞರ
ಪಲ ವಿಧವಾಂತ ಕೇರಿಗಳು ।
ನಲವಿಂದ ಮೆರೆದಿಹುವಾ ಪಟ್ಟಣದತಿ
ಚೆಲುವನದೇನ ಬಣ್ಣಿಸುವೆ ॥ ೨೪

ದೊರೆ ದೊರೆಗಳ ಮಂದಿರದೊಳು ರಾಜಿಪ
ಕರುವಾಡದ ಕಳಸಗಳು ।
ತರಣಿಯ ಕಿರಣದಂದದಲಿ ಕಂಗೊಳಿಪುದ
ನೊರೆಯಲೇನದನಚ್ಚರಿಯನು ॥ ೨೫

ತಗರ ಕಾದಿಸುವ ಮಲ್ಲರ ಹೋರಿಸುತ್ತಿಹ
ಪಗಡೆ ನೆತ್ತಗಳಾಡಿ ನಲಿವ ।
ಮಿಗೆ ತುರಗವ ಕುಣಿಸುವ ರಾಜ ಪುತ್ರರು
ಸೊಗಸಿದರಾ ಬೀದಿಯೊಳಗೆ ॥ ೨೬

ಸಿಪಿಲೆ ಗಚ್ಚಿಸುವರು ಚರಣಾಯುಧಗಳ
ಕುಪಿತ ಮುಖದೆ ಕಾದಿಸುವರು ।
ಚಪಲತ್ವದೆ ಜೂಜನಾಡಿ ಗೆಲುವ ಬಲು
ನಿಪುಣರೊಪ್ಪಿದರು ಬೀದಿಯಲಿ ॥ ೨೭

ಅವರೆಡೆಯೊಳಗಾ ಪುರಕಧಿಪತಿ ಯಾದ
ಭುವನೇಶನ ದಿವ್ಯ ಭವನ ।
ನವ ರತ್ನ ಪಾದ ಪರ್ವತಗಳ ಮಧ್ಯದ
ದಿವಿಜಾದ್ರಿಯಂತೆ ರಾಜಿಸಿತು ॥ ೭೮

ಹಿರಿಯ ಹಜಾರ ಚಿತ್ರದ ಚಾಪಡಿ ಮಿಗೆ
ಸುರುಚಿರದೋಲಗ ಶಾಲೆ ।
ವರ ಲಕ್ಷ್ಮೀ ವಿಲಾಸದ ಚೆಲ್ವಿಕೆಯಿಂದ
ಅರಮನೆ ಮೆರೆವುದರ್ತಿಯಲಿ ॥ ೭೯

ಭೋಜನ ಶಾಲೆ ಮಂತಣ ಗೃಹ ಚೆಲ್ವಿಂದ
ರಾಜಿಪ ಸಜ್ಜೆಯ ಸದನ ।
ರಾಜೀವ ಮುಖಿಯರಾಡುವ ನಾಟಕ ಶಾಲೆ
ಸೋಜಿಗದಿಂದಲೊಪ್ಪಿಹುವು ॥ ೮೦

ನೆಲ ಮಾಡದ ಚಂದ್ರ ಶಾಲೆಯ ಮೇಲೆ ಕಂ
ಗೊಳಿಸುವ ಮೋಹನಾಂಗಿಯರ ।
ಬೆಳಕಿಗೆ ಕಣ್ಮೀನ್ಗಳು ಚರಿಸುವ ಜನ
ಜಲಧಿಯೊಳೆಡೆಯಾಡುತಿಹುವು ॥ ೮೧

ಸುತ್ತಣ ಬೀದಿಯೊಳಗೆ ರಾಜಿಸುತಿಹ
ಮೊತ್ತದಂಗಡಿ ಗೇರಿಯೊಳಗೆ ।
ಮುತ್ತು ಮಾಣಿಕ ನಾನಾ ವಸ್ತು ಮೆರೆವ ಸಂ
ಪತ್ತನದೇನ ಬಣ್ಣಿಪೆನು ॥ ೮೨

ಪರಿಮಳ ಮೆರೆದಿಂಪಿನ ದಿವ್ಯ ಪುಷ್ಪವ
ಪರಿಕೊಂಡತಿ ಹರುಷದಲಿ ।
ಸರ ಗಟ್ಟಿ ಬೆಲೆಗೆ ಮಾರುವ ಮಾಲೆ ಗಾತಿಯ
ರಿರವ ನಾನೇನ ಬಣ್ಣಿಪೆನು ॥ ೮೩

ಮತ್ತೊರ್ವಳು ವಿಟನಿಗೆ ಸನ್ನೆಯ ಮಾಡು
ವರ್ತಿಯೊಳ್ಮಲ್ಲಿಗೆಯರಳ ।
ಕತ್ತುರಿಯೊಳಗದ್ದಿ ಕೈ ತುಂಬಿ ಕೊಡಲದ
ಮತ್ತವ ನಗುತ್ತೈದಿದನು ॥ ೮೪

ಬಂದೆಡೆಯೊಳಗೊರ್ವ ಗಟ್ಟಿವಳತಿ ಸಿರಿ
ಗಂದವ ವಿಟನುರದೆಡೆಗೆ ।
ಪೊಂದಿಸಿ ತನ್ನಿಂದಹ ವಿರಹಾಗ್ನಿಯ
ನಂದಿಸುವವೊಲೊಪ್ಪಿದಳು ॥ ೮೫

ಬಿಡದೆ ವೃತ್ತಾಕಾರವಿಡಿದ ಸಾಣೆಯೊಳೊರ್ವ
ಮಡದಿ ಗಂಧವ ತೇವ ಭರಕೆ ।
ಒಡನಲುಗುವ ಮೊಲೆಗಳು ಚಂದ್ರಮನ ಕಂಡು
ನಡುಗುವ ಕೋಕದಂತಿಹುವು ॥ ೮೬

ಹದಿರು ಚದುರಿನಾಗರ ತೌಳಿಯ ಪೇಟೆ
ಯೊದವಿದ ಮೋಹನ ಶಾಲೆ ।
ಮದನನ ಬೆಳ್ಪಾರವಲೆಯಂತೆ ರಾಜಿಸಿ
ಸದನಗಳಿಹುವು ಸೂಳೆಯರ ॥ ೮೭

ಮಿಗೆ ಚರಿಸುವ ವಿಟರುಗಳ ಕರಣವೆಂಬ
ಮಿಗವಿಂಡನುರೆ ಬಂಧಿಸುವ ॥
ಮುಗುಳಂಬ ಬೇಡನ ಜಾಲದೊಲ್ ಸೂಳೆಯ
ರಗಣಿತ ಗೃಹಗಳೊಪ್ಪಿಹುವು ॥ ೮೮

ಸಾಲುಗೊಂಡೆಸೆವ ಬಾಗಿಲ ಪಟ್ಟಸಾಲೆಯ .
ನೀಲ ಕುಟ್ಟಿಮದೊತ್ತಿನೊಳಗೆ ।
ಮೇಲೆ ಸಿಂಗರಗೈದೊಲೊತ್ತಿಗೆ ನಿಂದಿಹ
ಬಾಲೆಯರುಗಳೊಪ್ಪಿಹರು ॥ ೮೯

ಜಡೆಗಳೊಳಗೆ ಮಲ್ಲಿಗೆಯು ಪೂವಿನ ಸರ
ಬಿಡದುಟ್ಟ ಸಾಲಿಯು ಸೀರೆ ।
ಕಡು ಪರಿಮಳವಾಂತ ದಿವ್ಯಾಂಗದ ಚೆಲ್ವ
ಮಡದಿ ರನ್ನ ಯುರೊಪ್ಪಿದರು ॥ ೯೦

ಹರಳೋಲೆ ಹಸ್ತ ಕಟಕ ಮುತ್ತಿನ ಹತ್ತು
ಸರ ಬೆರಳುಂಗುರದಿಂದ ।
ಸಿರಿ ಯುಡಿ ದಾರ ನೇವುರದ ಸೊಬಗಿನಿಂದ
ಸರಸಿಜಾಕ್ಷಿಯರೊಪ್ಪಿದರು ॥ ೯೧

ಪಟ ಸಾಲೆಯು ಮೇಲೆ ಕುಟಿಲ ಕುಂತಳ ನೆರೆ
ಪುಟ ಚಂಡನಾಡುವ ಭರಕೆ ।
ನಟಿಸಲು ನೆಲೆ ಮೊಲೆಗಳು ನೋಡಿ ನಗುತಾಗ
ವಿಟರು ಕೈ ತಾಳ ಪೊತ್ತುವರು ॥ ೯೨

ಬಾನೆಡೆಯೊಳಗಿಹ ಚಂದ್ರನೆನ್ನಯು ಮೊಗ
ಕಾನಲಾಪನೆ ಯೆಂದು ಜರೆದು ।
ತಾನೊದೆವಪೊಲು ನವಿಲುಯ್ಯಾಲನಾಡುವ
ಮಾನಿನಿ ಯೊರ್ವಳೊಪ್ಪಿದಳು ॥ ೯೩

ಹೊರೆಯ ಕೆಳದಿಯು ಕಂದದ ಮೇಲೆ ಕರಗಳ
ನಿರಿಸುತ ಸನ್ನೆ ನೋಟಗಳ ।
ತಿರುಹು ಮುರುಹಿನಿಂದ ವಿಟನೆದೆ ಗರಗಿಪ
ತರುಣಿ ಯೊರ್ವಳು ರಾಜಿಪಳು ॥ ೯೪

ಕಾಲಂದುಗೆ ಕಟಿ ಸೂತ್ರ ಕಂಕಣ ಸಣ್ಣ
ಸಾಲಿಯು ಸೀರೆಯ ನೆರಿಯಾ ।
ಬಾಲಕಿ ಯೊರ್ವಳು ಬಹು ಸಿಂಗಾರದ
ಜಾಲವ ಬೀಸಿದಳ್ವಿಟಗೆ ॥ ೯೫

ಪಗಡೆಯಾಡುವ ನೆವದಿಂದೊರ್ವ ವಿಟನನು
ನಗುತ ಕರವ ಪಿಡಿದೈದಿ ।
ಸೊಗಸುವ ಮೋಹರಸವ ಬೀರಿ ಪೊನ್ಗಳ
ತೆಗೆವಳದೇನ ಬಣ್ಣಿಪೆನು ॥ ೯೬

ಚದುರಂಗವಾಡುವ ಬಾರೆಂದೊರ್ವನ
ಪದುಮಾಕ್ಷಿ ಪಿಡಿದೆಳೆದೊಯ್ದು ।
ಮದನಾಗಮದೊಳು ಮಗ್ಗಿಸಿ ಹಣಗಳ
ನುದಿರದೆಗೆದಳವನಿಂದ ॥ ೯೭

ಹಾರ ಪದಕ ಚೌಕುಳಿಯನಿಟ್ಟವ ತಮ್ಮ
ಕೇರಿಯೊಳಗೆ ಸುಳಿದಾಡೆ ।
ಸೇರಿಸಿ ಕೊಂಡವನೊಡವೆಯ ನಗುತ ಪ
ಕೀರನ ಮಾಡಿ ಬಿಡುವರು ॥ ೯೮

ತಾಲಿ ಹೊನ್ನುಂಗುರದವನಿಗೆ ಮೋಹದ
ಬೇಳುವೆಯನು ತಳೆದಾಗ ।
ಮೇಲೊಡವೆಯ ಸೆಳೆ ಕೊಂಡಾ ವಿಟನನು
ಜಾಳಿಸಿ ಬಿಡುವರೇನೆಂಬೆ ॥ ೯೯

ಗಳರವವೆಂಬ ಮಂತ್ರದೆ ಮಂತ್ರಿಸಿ ಜಡೆ
ಸೆಳೆ ಬೆತ್ತದಲಿ ಮಿಗೆ ಬಡಿದು ।
ಬಳವಿರ್ದ ವಿಟರ ಸೋಕಿದ ಕಾಮ ಗ್ರಹವನು
ತೊಲಗಿಸುತಿಹರಂಗನೆಯರು ॥ ೧೦೦

ಉಂಗುಟ ವಿಡಿದು ಮಸ್ತಕ ಪರಿಯಂತ ಮ
ನಂಗೊಳಿಸುವ ಭೂಷಣಗಳ ।
ಹಿಂಗದಿತ್ತವನ ವಂಚಿಸಿ ಕಾಣಿಯಿತ್ತಗೆ
ಸಂಗ ಸುಖವ ಕೊಡುತಿಹರು ॥ ೧೦೧

ಬಂದೆಡೆಯೊಳಗೊರ್ವ ಮುದಿ ವಿಟನಬಲೆಯ
ಸಂದಿಸಿ ಯೊತ್ತೆಗೊಳ್ಳನಲು ।
ತಂದೆ ನೀನೆನಗೆನೆ ನಿನಗೀಗ ಹಣಗಳ
ತಂದೆ ಯೆಂದುರೆ ನಗಿಸಿದನು ॥ ೧೦೨

ಬಳಿಕಲೊಂದೆಡೆಯುಳಿ ಹಣವ ಕೊಡದೆ ವಿಟ
ತೊಲಗಿದ ಭಾವವ ಕಂಡು ।
ನಳಿನಾಕ್ಷಿ ಯುವನಿದ್ದೆಡೆಗೆ ಪೋಗಿ ಮಾಡಿದ
ಬಲು ಕೃತಕವನೇನನೆಂಬೆ ॥ ೧೦೩

ನಿನ್ನೆ ಮೊದಲು ನಿನ್ನಾಣೆ ನಿನ್ನನು ಕಾಣ
ದನ್ನ ಪಾನಂಗಳಳಿಯುದೆ ।
ಬನ್ನದೊಳಾಳಿದೆ ನಾನೆಂದು ಕಣ್ಣೀರ
ನುನ್ನತವಾಗಿ ಸೂಸಿದಳು ॥ ೧೦೪

ಚಿಕ್ಕಂದು ಮೊದಲಾಗೆ ನೀನಲ್ಲದೊರ್ವರ
ಲೆಕ್ಕಿಸಿದವಳು ತಾನಲ್ಲ ।
ರೊಕ್ಕದಾಸೆಗಳಿಲ್ಲ ಮೋಹಕ್ಕೆ ನಾ ಸಿಕ್ಕಿ
ದಕ್ಕಿದೆ ನಿನಗೆಂದಳಾಗ ॥ ೧೦೫

ಇಂತೆಂದು ಬಲು ದೈನ್ಯದಿಂದಲೊಳಗು ಮಾಡಿ
ಕಂತು ಕೇಳಿಯ ನೊಲಿದಿತ್ತು ।
ಸಂತಸವನು ಪುಟ್ಟಿಸಿ ಹಣವನು ಹೇರಾಳೊ
ರಂತೆ ತೆಗೆದಳವನಿಂದ ॥ ೧೦೬

ಇಂತೊಪ್ಪುತಿಹ ಮೈಸೂರ ವೇಶ್ಯಾವಾಟ
ಕಂತು ನೃಪನ ಬೀಡಿನಂತೆ ।
ಸಂತತ ಸಕಲ ವೈಭವದೆ ರಾಜಿಸುತ
ತ್ಯಂತ ಮೋಹವ ಬೀರುತಿಹುದು ॥ ೧೦೭

ಶಶಿ ರವಿ ಹುತವಹ ನೇತ್ರ ಧವಳ ಗಾತ್ರ
ಪಶು ಪತಿ ಪಾವನ ರೂಪ ।
ವಿಷ ಕಂಠ ಸುರ ಗಣ ನಮಿತ ತ್ರಿಣೇಶ್ವರ
ನೆಸೆದಿಹನಾ ಪುರದೊಳಗೆ ॥ ೧೦೮

ಆ ಪುರದರಸುಗಳಿಗೆ ಜಯ ಸಿರಿಯು ಕೃ
ಪಾ ಪರಿಪೂರ್ಣದೇಳಗೆಗೆ ।
ಕಾಪಾಲಿ ತ್ರಿಣಯನ ತೀರ್ಥ ಗೊಳದೆ ಪಂಚ
ರೂಪಿನಾವಲುಗಳೊಪ್ಪುವುವು ॥ ೧೦೯

ಪಕ್ಷಿ ವಾಹನ ಪಾವನ ಮೂರ್ತಿ ಸುಮನೋ
ರಕ್ಷ ರಾಜೀವ ದಳಾಕ್ಷ ।
ಅಕ್ಷಯಾತ್ಮಕನಾ ಪುರ ವರದಲಿ ಶ್ರೀ
ಲಕ್ಷ್ಮೀ ಕಾಂತನೊಪ್ಪುವನು ॥ ೧೧೦

ಬಾಗಿಲ ಹನುಮ ಭಕ್ತರ ಪಾಲಿಪ ಬಲ
ವಾಗಿ ತಟಾಕದೇರಿಯಲಿ ।
ಭೋಗಿ ಭೂಷಣ ಕಾಲ ಭೈರವರಿರ್ವರು
ರಾಗದೆ ಪುರವ ಕಾದಿಹರು ॥ ೧೧೧

ಪೊಗಳಲಳವೆ ಭೂಮಂಡಲದೊಳಗಿಹ
ನಗರ ಗಿಗರ ದುರ್ಗ ಗಿರ್ಗ ।
ಅಗಣಿತವಿಹ ಪುರ ಗಿರ ಮೈಸೂರಿಗೆ
ಮಿಗೆ ಸರಿಯೆಂದೆನ ಬಹುದೇ ॥ ೧೧೨

ಲೋಲಾಕ್ಷಿ ಚಾಮುಂಡಿ ದೇವಿಯ ಕೃಪೆಯು ವಿ
ಶಾಲದೊಳಾ ಪುರ ವರದ ।
ಬಾಲರೆ ಬಟರಾಗಿಹರೆಂಬಲ್ಲಿಗೆ
ಮೇಲಾಯ್ತು ಸಂಧಿ ಸಂಬಂಧಿ ॥ ೧೧೩

೨ನೆಯ ಸಂಧಿ ಸಮಾಪ್ತಂ.

# ಮೂರನೆಯ ಸಂಧಿ.

## ವಂಶ ವಿಸ್ತಾರ ವರ್ಣನೆ.

ಸೂಚನೆ ॥ ಧರೆಯೊಳು ಮೈಸೂರ ದೊರೆಗಳ ವಂಶ ವಿ
ಸ್ತಾರದೇಳಿಗೆಯು ವರ್ಣಿಪೆನು ॥

ಇಂತೊಪ್ಪುತಿಹ ಮೈಸೂರ ಭೂಪಾಲರ
ಸಂತತಿಗಳ ಕ್ರಮಗಳನು ।
ಸಂತೋಷದೊಳುಸಿರುವೆ ಕೇಳ್ವ ಜನರ
ತ್ಯಂತ ಸೌಖ್ಯದೆ ಲಾಲಿಪುದು ॥ ೧

ಆದಿ ಪುರುಷನಿಂದಜನಾತನಿಂದತ್ರಿ
ಯಾದನಾತನ ನೇತ್ರದಿಂದ ।
ಮೇದಿನಿಯೊಳು ಚಂದ್ರ ಚಂದ್ರನಿಂ ಬುಧ ಪುಟ್ಟ
ಲಾದುದೆ ನೆರೆ ಶಶಿವಂಶ ॥ ೨

ಆ ವಂಶದಲಿ ಪುರೂರವನವನಿಂದ
ಪಾವನ ನಹುಷ ಹುಟ್ಟಿದನು ।
ಆ ವೀರನಿಂದ ಯಯಾತಿ ಯಯಾತಿಗೆ
ಭಾವಿಸೆ ಯದು ಜನಿಸಿದನು ॥ ೩

ಆ ರಾಯರುಗಳ ಪರಂಪರೆಯುಳಿ
ಧಾರಿಣಿಯನು ಧರ್ಮದಿಂದ ।
ಚಾರುತರದೊಳಾಳಿದ ಭೂಪಾಲರ
ನಾರು ಲೆಕ್ಕಿಸಲಳವಲ್ಲ ॥ ೪

ಯುಗ ಯುಗದೊಳು ಧರ್ಮ ಕೀರ್ತಿ ಪ್ರತಾಪವ
ಜಗದೊಳು ನೆರೆ ಪಸರಿಸುತ ।
ಮಿಗೆ ಕಲಿ ಯುಗ ವಿಡಿದಾಳ್ದ ಭೂಮಿಶ್ವರ
ರಗಣಿತವೇನ ಬಣ್ಣಿಸುವೆ ॥ ೫

ದ್ವಾರಾವತಿಯಿಂದಲೈತಂದು ಮೈಸೂರ
ಧಾರಿಣಿಯನು ನೆರೆ ಯಾಳ್ದ ।
ಆ ರೂಢಿಯ ಭೂಮಿಶರ ಮಹಿಮೆಯ
ನಾರು ಬಣ್ಣಿಸಲಳವಲ್ಲ ॥ ೬

ಆತ್ರೇಯ ಗೋತ್ರ ಸಂಭೂತ ಧಾರಿಣಿಗೆ ಪ
ವಿತ್ರ ಸು ಧರ್ಮ ಚರಿತ್ರ ।
ಶತ್ರು ಸಂಹಾರ ಬೆಟ್ಟೇಂದ್ರ ಮೈಸೂರ ಧ
ರಿತ್ರಿಯ ಪಾಲಿಸಿ ಮೆರೆದ ॥ ೭

ಅವನ ಗರ್ಭಾಬ್ಧಿಯೊಳಗೆ ಪೂರ್ಣ ಚಂದ್ರನಂ
ತವತರಿಸಿಯೆ ಮೈಸೂರ ।
ತವೆ ಹರುಷದೊಳಾಳಿದ ಚಾಮರಾಜ ಭೂ
ಧವ ಧರ್ಮ ಕೀರ್ತಿ ಯೋಳ್ ಯಲಿ ॥ ೮

ಆ ಮಹಿಮೆನ ಗರ್ಭದಲಿ ರಾಜೇಂದ್ರ ಸ
ನಾಮ ಸು ಕೀರ್ತಿ ಲಲಾಮ ।
ಭೂಮಿಪ ಬೆಟ್ಟದ ಚಾಮರಸೇಂದ್ರ ನಿ
ಸ್ಸೀಮರಿರ್ವರು ಜನಿಸಿದರು ॥ ೯

ಹೆಚ್ಚಿತು ಧರ್ಮ ಧರೆಯೊಳು ದುರ್ಮಾರ್ಗದ
ಕಿಚ್ಚಿನೇಳಿಗೆ ನಂದಿತಾಗ ।
ಅಚ್ಚರಿಯಿಂದಲಾ ಜಯ ಲಕ್ಷ್ಮಿ ಭೂಪರ
ಮೆಚ್ಚಿದಳೇನ ಬಣ್ಣಿಸುವೆ ॥ ೧೦

ಬಾಲಾರ್ಕ ಶುಕ್ಲ ಪಕ್ಷ ಚಂದ್ರರಂದದೆ
ಮೇಲೆ ವರ್ಧಿಸಿ ಸುತರಿರಲು ।
ಭೂ ಲೋಲ ಚಾಮರಸೇಂದ್ರ ವಿವಾಹವ
ಲೀಲೆಯೊಳಗೆ ಮಾಡಿಸಿದ ॥ ೧೧

ವಿನುತ ಬೊಮ್ಮನ ಹಳ್ಳಿಯ ಚೆನ್ನ ರಾಜೇಂದ್ರ
ನನುಜಾತೆ ವೀರಾಂಬೆಯನು ।
ಘನ ಹರುಷದಲ್ಲಿ ವೈವಾಹವಾಗೊಪ್ಪಿದ
ಜನ ಪತಿ ರಾಜ ಭೂಪಾಲ ... ... ... ॥ ೧೨

ಹುರ ಪುರದಧಿಪತಿ ತಿಮ್ಮ ರಾಜೇಂದ್ರನ
ವರ ಸುತೆ ಗುರುವಂಬೆಯನು ।
ಪರಿಣಯವಾಗಿ ಬೆಟ್ಟದ ಚಾಮ ಭೂವರ
ಸಿರಿ ಧರನೊಲು ರಂಜಿಸಿದ ॥ ೧೩

ಬೆಟ್ಟದ ಚಾಮುಂಡಿ ತನ್ನ ಸಾಹಸವನು
ಕೊಟ್ಟಾ ನೃವರ ಕೈಯಿಂದ ।
ಪೆಟ್ಟನಿಕ್ಕಿಸಿದಳಧರ್ಮದೆ ಹೆಚ್ಚಿದ
ದುಷ್ಟ ಭೂಮಿಪರಿಗೇನೆಂಬೆ ॥ ೧೪

ಬಳಿಕಿರ್ವರು ಪೆರ್ಚಿದಗ್ಗಳಿಕೆಯೊಳಂ
ದಿಳೆಯ ಸು ಧರ್ಮ ಮಾರ್ಗದಲಿ ।
ನಲವಿಂದ ಪಾಲಿಸುತಿರ್ದರು ಹರಿ ಭಕ್ತಿ
ಬಳ ವಿಗೆಯೊಳು ನಲಿದಾಗ ॥ ೧೫

ಇರುತಿರೆ ಕಾರುಗ ಹಳ್ಳಿಯ ನೃಪರಾ
ಗರುವೆ ಚಾಮುಂಡಿಯ ಗಿರಿಯ ।
ಪಿರಿದೆಲ್ಲಗಟ್ಟಗೋಸ್ಕರ ನೆರೆ ವೈರವ
ಬೆರಸಿದರೀ ಭೂಪರೊಡನೆ ॥ ೧೬

ತರಣಿಯು ಕಿರಣದ ಧಾಳಿಗೆ ಕತ್ತಲೆ
ಯುರವಣೆ ಮುರಿವುದೆ ಬಳಿಕಾ ।
ಅರಿನೃಪರನು ಕೊಂದು ಪುರವ ಪೊಳ್ಲ್ಗದಾಗ
ಹರಳ ಬಿತ್ತಿಸಿದರೇನೆಂಬೆ ॥ ೧೭

ಬಳಸಿಹ ರಿಪುನೃಪ ಮನ್ನೆಯರಿವರ
ಗ್ಗಳಿಕೆಗೆ ಕಂಗೆಟ್ಟಾಗ ।
ಇಳೆಯಾಣ್ಮ ತಿರುಮಲರಾಜನ ಮರೆಹೊಕ್ಕು
ಮುಳಿಸ ಬಲಿದನಾತನಿಗೆ ॥ ೧೮

ಬಿತನೆ ಮೈಸೂರ ಭೂಪಾಲರು ತನಗೀಗ
ಕಡುಹಿತರೆಂಬುದ ಮರೆದು ।
ಬಿಡದೆ ಕೊಂಡೆಗರಿಂದ ಕೋಪವ ತಾಳಿದ
ಪೊಡವಿಪ ತಿರುಮಲರಾಜ ॥ ೧೯

ಅರಿಪುರದೆಡಬಲ ಗಡಿದುರ್ಗಗಳಸೀಗ
ಭರದೆ ಮುತ್ತಿಗೆಯಿಕ್ಕಿ ಸೆಳೆಯೆ ।
ನೆರೆ ಕೀಳ ತಪುದು ಕಟ್ಟೆಯು ಗ್ರಾಮವೆಂದಾ
ಗಿರದಾಳೋಚನೆಗೈದು ॥ ೨೦

ಬಳಿಕ ಮೈಸೂರಿಗೆ ಗಡಿಯು ತಾಣೆಯುವಾಗಿ
ನೆಲೆಗೊಂಡಿಹ ಕೆಸರೆಯನು ।
ತಳುವದೆ ಸೆಳೆಯಬೇಕೆಂದು ತಿರುಮಲೇಂದ್ರ
ಬಲವ ಕೂಡಿದನೇನೆಂಬ ॥ ೨೧

ಬಿಡದಾಗ ಸಕಲರಾಜ್ಯದ ಪ್ರಭು ಮನ್ನೆಯ
ಪೊಡವಿಪಾಲರಿಗೋಲೆಗಳನು ।
ಕಡುತವಕದೊಳಟ್ಟಿ ಸಕಲಬಲವ ತ
ನ್ನೆಡೆಗೆ ಬರಿಸಿಕೊಂಡಾಗ ॥ ೨೨

ಹತ್ತು ಸಾವಿರ ಕಾಲಾಳು ಗಜಗಳೈ
ವತ್ತು ತುರಗ ಸಾವಿರದ ।
ವೊತ್ತದೆ ಪದಿನಾಡ ರಾಮ ರಾಜೇಂದ್ರ ಸಂ
ಪತ್ತಿನೊಳೈತಂದನಾಗ ॥ ೨೩

ಬಳಿಕಲಿಪ್ಪತ್ತು ಸಾವಿರ ಪಾಯ್ದಳ ಮದ
ವೆಳಸಿದ ಕರಿಗಳೈವತ್ತು ।
ಸಲೆ ಕುದುರೆಗಳ ಮೇಳದೆ ರುದ್ರಗಣ ಭೂಪ
ತಳುವದೆ ಬಂದನೇನೆಂಬೆ ॥ ೨೪

ಕುದುರೆಗಳೊಂದು ಸಾಸಿರ ಮತ್ತ ದಂತಿಗ
ಳೊದಗೆ ಮೂವತ್ತರೊಗ್ಗಿನಲಿ ।
ಹದಿನಾರು ಸಾವಿರ ಸುಭಟರಿಂ ತಳಕಾಡ
ಚದುರ ನಂಜೇಂದ್ರನೈತಂದ ॥ ೨೫

ತುರಗವೈನೂರು ಕರಿಗಳಿಪ್ಪತ್ತು ಸಂ
ಗರ ಧೀರರೆನಿಪ ಕಾಲಾಳು ।
ಇರದೆಂಟು ಸಾವಿರ ಸಹಿತೈದಿದನಾಗ
ಕೆರೆಯೂರ ತಿಮ್ಮ ನಾಯಕನು ॥ ೨೬

ಕಾಲಾಳು ಹತ್ತು ಸಾವಿರ ಗಜವಿಪ್ಪತ್ತು
ಮೇಲಾದ ತುರಗವೈನೂರು ।
ಮೇಳದೆ ತಿರುಮಲೇಶ್ವರನ ಕೂಟಕೆ ಬಂದ
ಸಾಲ ನಾಯಕನ ಬೈರೇಂದ್ರ ॥ ೨೭

ನರಸಿಂಹ ಪುರ ಬೇಲೂರ ದೊರೆಗಳಾಗ
ಹರುಷದೆ ತಳತಂತ್ರ ಗೂಡಿ ।
ತಿರುಮಲ ರಾಜ ಚಕ್ರೇಶನ ಕೂಟಕ್ಕೆ
ಭರದಲಿ ಬಂದರೇನೆಂಬೆ ॥ ೨೮

ನುಗ್ಗೆ ಹಳ್ಳಿಯ ದಾಸನಾಯಕ ಕೆಂಗೇಂದ್ರ
ರೊಗಾಗಿ ಬಹು ಬಲ ಗೂಡಿ ।
ಹಿಗ್ಗುತೆ ತಿರುಮಲ ರಾಜನ ಕೂಟಕೆ
ಯುಗ್ಗಳಿಕೆಯೊಳೈದಿದರು ॥ ೨೯

ಕೋಳಾಲ ಬಳ್ಲಾಪುರ ಬೆಂಗಳೂರ ಭೂ
ಪಾಲರು ಮಾರ್ಬಲ ಸಹಿತ ।
ಮೇಳದಿ ತಿರುಮಲೇಶ್ವರನ ಕೂಟಕೆ ಬಂ
ದಾಳಾಪವನೇನನೆಂಬೆ ॥ ೩೦

ಸುತ್ತಣ ಪ್ರಭುಗಳು ಸಕಲ ಬಲವ ಕೂಡಿ
ಮೊತ್ತ ಮೊತ್ತದಲೈತಂದು ।
ಮತ್ತಾಗ ತಿರುಮಲೇಶ್ವರನ ಕಾಣಿಸಿ ಕೊಂ
ಡರ್ತಿಯನೇನ ಬಣ್ಣಿಸುವೆ ॥ ೩೧

ತಿಮ್ಮಪ್ಪ ರಾಜ ಪ್ರಧಾನಪ್ಪಿ ಶಟ್ಟಿಗ
ಳಮ್ಮಡಿ ಜಕ್ಕ ಮನ್ನೆಯನು ।
ಪುಮ್ಮಾನಿ ಪಾಮಿ ನಾಯಕ ಗುಂಡಿ ನಾಯಕರ್
ಹಮ್ಮಿನಿಂದೈತಂದರಾಗ ॥ ೩೨

ತೇಜಿಯ ಸಾಲೋ ಶಂಧಿಯ ತೆರೆಗಳ
ರಾಜಿಯೊ ಮದದಂತಿಗಳ ।
ಪಾಜೊ ಕಾಳ್ಮೇಘದೊಬ್ಬುಳಿ ಯೆನೆ ತಿರುಮಲ
ರಾಜನೈತಂದನುಬ್ಬಿನಲಿ ॥ ೩೩

ನೆರೆದಿಹ ದೊರೆಗಳ ನೆರವಿ ನೋಡುತ ತಾನು
ವುರುತರ ಸಂತೋಷದಿಂದ ।
ಪರಿ ಪರಿ ಮೆರಿಯಾದೆಯಿಂದ ಮನ್ನಣೆಗೈಯೆ
ಸರಿ ಮಂಡಲಿಕರಿಗೆಲ್ಲ ॥ ೩೪

ಕುದುರೆಗಳೇಳೆಂಟು ಸಾವಿರ ಹೆಚ್ಚಿನ
ಮದ ಸಾಮಜಗಳಿನ್ನೂರು ।
ಒದವಿದ ಬಲ ಲಕ್ಷ ಸಹ ತಿರುಮಲ ರಾಜ
ಕದನಕ್ಕೈದಿದನೇನೆಂಬೆ । ೩೫

ನೆಗಹಿದ ಸಾಲ ಸಬಳ ಝಳಪಿಸ ಖಡ್ಗ
ಮಿಗೆ ನಾನಾಯುಧ ಪಿಡಿದ ।
ಅಗಣಿತ ಬಲ ಸಹ ತಿರುಮಲ ರಾಜೇಂದ್ರ
ನಗುತ ದಂಡೆತ್ತಿ ನಡೆದನು ॥ ೩೬

ಬಿರುದಿನ ಡಾಳು ಪಮೂಮಿ ಮಕರ ಟೆಕ್ಕೆ
ಯುರುತರ ರಾಜ ಚಿಹ್ನಗಳ ।
ಪರಿಯು ತೋರುತ ತಿರುಮಲ ರಾಜೇಂದ್ರನಂ
ದಿರದೆ ದಂಡೆತ್ತಿ .ನಡೆದನು ॥ ೩೭

ಕೊಂಬು ಕಹಳೆ ರಾಯ ಭೇರಿ ತಂಬಟೆ ಹರೆ
ಚಂಬಕ ಮುವ್ವರಿ ತುತ್ತೂರಿ ।
ಮುಂಬರಿದೆಸೆವ ನಾನಾ ವಾದ್ಯಗಳಾ
ಡಂಬರದೊಳಗೈತಂದ ॥ ೩೮

ಬಿರುದಿನ ಕಂಡೆಯ ರಾಯ ಗಜಾಂಕುಶ
ವುರುತರ ಗಂಗನ ಗೋಲು ।
ಮೆರೆವ ಮುತ್ತಿನ ಚಂಡು ವರ ಪಚ್ಚೆಯಲಸು
ಕರಿಯೆಂಬ ಗಜಗಳೈದಿದುವು ॥ ೩೯

ಮೀಸರ ಗಂಡ ಬೊಯಲ ಪ್ರೋತರಾಜ ಕ
ಟ್ಟಾಸುರ ಮದನ ಗೋಪಾಲ ।
ಕೇಸುರಿ ಗಣ್ಣಾಳ ನರಸಿಂಹನೆನಿಸುವ
ಭೂಸುರ ಗಜಗಳೈದಿದುವು ॥ ೪೦

ತಿರುಮಲರಾಯ ತೇಜಿಯ ಬೊಕ್ಕಣಿಗನು
ಪುರಾತರ ಹನುಮ ಹಾವೇರಿ ।
ನೆರೆ ಝಣ ಕರ ಜಗ ಜಟ್ಟಿಯೆಂದೆನಿಸುವ
ಕರಿಗಳೈದಿದುವೊಗ್ಗಿನಲಿ ॥ ೪೧

ತಿರು ವೇಂಕಟನಾಥ ವೊರಸರ ಗಂಡನು
ಪರಬಲ ದುಂಪ ದೂಳೀ ।
ಕರಿಗಳರಸ ಕಸ್ತೂರಿರಂಗ ವೊದಲಾದ
ಬಿರುದಿನಾನೆಗಳೈದಿದುವು ॥ ೪೨

ಕಟ್ಟಿದ ಕೊಂಬು ಗತ್ತಿಯ ಸುಂಡಿಲೊಳಗಳ
ಪಟ್ಟಿಹ ಬೀಸುಗಂಡೆಯದ ।
ಕಟ್ಟಿರಕದ ಚಿತ್ರ ಪಟಗಳಿಂ ರಾಯನ
ಪಟ್ಟದಾನೆಗಳೈದಿದುವು ॥ ೪೩

ಹರಿಗಳ ವೊತ್ತ ನಾಗಂಗಳ ಸಂದಣಿ
ಬಿರುದಿನ ಪುಂಡರೀಕಗಳ ।
ನೆರವಿಯೊಡನೆ ಬಳಿ ಕಾಂತಾರ ಕೆಸರೆಯ
ಪುರಪ ಮುತ್ತಿದರೇನೆಂಬೆ ॥ ೪೪

ಸುರ ಗಿರಿಯನು ಮುತ್ತಿದ ಮಿಂಚು ಬುಳುವಿನ
ಸಿರಿಯೊಲು ಬಳಸಿ ಕೊಂಡೊಡನೆ ।
ಪಿರಿದಾದ ಮುಳುವೇಲಿ ತಳಿ ಪೋಲುವೆಯಿಂದ
ಪುರವ ಬಾಧಿಸಿದರುಬ್ಬಿನಲಿ ॥ ೪೫

ಮತಿತ್ತಾಗಲುಮ್ಮತ್ತೂರ ಮೂಗೂರ ಭೂ
ಪೋತ್ತಮರೆನಿಪ ಮನ್ನೆಯರು ।
ವೊತ್ತದ ಬಲ ಸಹ ಕೆರೆ ಹಟ್ಟಿಯ ನೆರೆ
ಮುತ್ತಿ ಮುಸುಕಿದರಾ ಕ್ಷಣದೆ ॥ ೪೬

ಕರಿವಿಂಡುಗಳು ಸಿಂಹದ ಹೊಲದಲಿ ಬಂದು
ನೆರೆ ಮೇವ ಕೊಂಡು ಜೀವಿಪ್ಪವೆ ।
ಧರೆಯೊಳು ಮೈಸೂರವರ ಕೂಡೆ ವೈರವ
ಬೆರಸಿದವರು ಹುರುಳಹರೆ ॥ ೪೭

ಗರುಡನರವಟ್ಟಿಗೆಯೊಳು ತೃಷೆಯಿಂದ
ಲೆರಗಿದ ಫಣಿಗಳುಳಿದಿರವೆಂತೆ ।
ಧುರಧೀರ ಮೈಸೂರ ರಾಜೇಂದ್ರ ದೊರೆಯೊಳು
ಮೆರೆವುದೆ ಇವರ ಪ್ರತಾಪ ॥ ೪೮

ಬಿಡದಾಗ ಗಡಿಯ ದುರ್ಗಗಳ ಮುತ್ತಿದ ಹಗೆ
ಪಡೆಯ ಸನ್ನಾಹವ ಕೇಳಿ ।
ಕಡುಗಲಿ ಬೆಟ್ಟದ ಚಾಮೇಂದ್ರ ಕೋಪದೆ
ನುಡಿದನಗ್ರಜನೊಳಿಂತೆಂದು ॥ ೪೯

ಹಿತವರೆಂಬುವನರಿಯದೆ ನಮ್ಮ ಮೋ
ಲತಿ ಖತಿ ಹಿಡಿದು ಕೊಂಡೆಗರ ।
ವಿತಥ ವಾಕ್ಯವ ಕೇಳಿ ತಿರುಮಲರಾಜ ದು
ರ್ಮತಿಯಾದನೆಂದನಾ ಭೂಪ ॥ ೫೦

ತನಗೆ ಮಲೆತ ನರಸಿಂಹಪುರ ಬೇಲೂರ
ಜನಪತಿಗಳ ಮುರಿದವರಿಂ ।
ವಿನಮಿತನನು ಮಾಡಿ ಕೊಟ್ಟುದ ಮರೆದೀತ
ಮುನಿದನೆ ನಮ್ಮ ಮೇಲೀಗ ॥ ೫೧

ಸುತ್ತಣ ಪ್ರಭುಗಳ ಬಲವ ಮುರಿದು ತನ
ಗೆತ್ತಿಸಿ ಕೊಟ್ಟು ಕಪ್ಪಗಳ ।
ಮತ್ತವರನು ಪಾದಾಕ್ರಾಂತರ ಮಾಡಿ
ದುತ್ತಮ ಹಿತವ ಮರೆದನೆ ॥ ೫೨

ಇನ್ನು ನಮ್ಮಲ್ಲಿ ತಪ್ಪಿಲ್ಲವೆನುತ ಕೋ
ಪೋನ್ನತನಾಗಿ ಮನದಲ್ಲಿ ।
ಮನ್ನೆಯ ಬೆಟ್ಟದ ಚಾಮೇಂದ್ರ ಬಲ ಗೂಡಿ
ಸನ್ನದ್ಧನಾದನಾಹವಕೆ ॥ ೫೩

ಬಳಿಕಗ್ರಜನ ಪುರ ರಕ್ಷೆಗಿಂಬಿಟ್ಟಾಗ
ತಳತಂತ್ರವ ಕೂಡಿಕೊಂಡು ।
ಘಳಿಲನೆ ಕೋಟೆಯ ನೃಪನ ಸಂಧಿಸಿ ನೇಮ
ದಳೆದು ಶೀಘ್ರದೆ ತಿರುಗಿದನು ॥ ೫೪

ಗರಳ ಪುರದ ನದಿಯನು ದಾಂಟಿ ಬಲ ಸಹ
ನೆರೆ ಯರ್ಧ ರಾತ್ರೆಯೊಳಾಗ ।
ಕೆರೆ ಹಟ್ಟಿಯ ಮುತ್ತಿದರಿ ತಂತ್ರವ
ತರಿದೊಟ್ಟಿದನೇನನೆಂಬೆ ॥ ೫೫

ಅಲ್ಲಿ ಸಾವಿರ ಕೋಳ ಹಿಡಿದು ವೈರಿಗಳನು
ಚೆಲ್ಲ ಬಡಿದು ದೆಸೆಗಟ್ಟಿ ।
ನಿಲ್ಲದೈತಂದು ಸತ್ಯಾಗಾಲದ ಪಾಳ್ಯ
ವೆಲ್ಲವ ಸೂರೆ ಯಾಡಿದನು ॥ ೫೬

ಸೆರೆ ತುರು ಸಹಿತ ಸೋಸಲೆಯ ಕಡುವ ದಾಟಿ
ಪಿರಿದು ಮಾರ್ಬಲ ಗೂಡಿ ಬಂದು ।
ಕಿರವಂಗೂರು ಪಾಳಯವನಿರಿದು ಬೇಗ
ಮೊರೆ ಯಿಡಿಸಿದ ವೈರಿ ಭಟರ ॥ ೫೭

ಒಡನೆ ಮೈಸೂರಿಗೈತಂದಾಗಲಗ್ರಜ
ನಡಿಗೆರಗಲು ಸಂತಸದೆ ।
ಬಿಡದಾಗಲನುಜನ ಬಿಗಿಯಪ್ಪಿ ಸಂತಸ
ಗಡಲೊಳಗೋಲಾಡಿದನು ॥ ೫೮

ಮೂರು ದಿವಸದೊಳಗಿನಿತು ಕಾರ್ಯವ ಮಾಡಿ
ವೀರನಾದನು ಜಯಾಂಗನೆಗೆ ।
ವೀರಾಗ್ರಗಣ್ಯ ತನ್ನನುಜನೆಂದವನಿಪ
ಮೀರಿದ ಹರುಷದೊಳ್ಸೆದ ॥ ೨೯

ಬಳಿಕಲೀವಾರ್ತೆ ರಾಯಗೆ ಮುಟ್ಟೆ ಕೋಪವ
ತಳೆದಾಗ ಕೆಸರೆಯ ಪುರಪ ।
ಘಳಿಲನೆ ಲಗ್ಗೆಗೆ ಬಿಡಲಾ ಪುರದವ
ರಿಳಿಯ ಕೆಡಹಿದರೇನೆಂಬೆ ॥ ೩೦

ಲಗ್ಗೆಯೊಳಗೆ ನೊಂದು ರಿಪು ಭೂಪರ ಸೇನೆ
ಯೊಗ್ಗೊಡೆದೋಡಿ ಹಿಂಸೆಲೆಗೆ ।
ಹಿಗ್ಗು ದೆಗೆದು ದೂರ ಚೌದಿಕ್ಕಿನೊಳಾಗ
ಬೊಗ್ಗನೆ ಪಾಳ್ಯವಿಳಿದರು ॥ ೩೧

ಒಂದು ದಿನದೆ ಜಕ್ಕಮನ್ನೆಯ ಬಲ ಗೂಡಿ
ಬಂದಾಗ ಹಂಚೆಯದೊಳಗೆ ।
ನಿಂದಾಗ ಸೂರೆಗೈಸುತಲಿರೆ ಬಲ ಬೇಹು
ಸಂದುದು ನೃಪನಿಗಾ ಕ್ಷಣದೆ ॥ ೩೨

ಬಳಿಕ ರಾಜೇಂದ್ರನಿಗೊಂದು ಬಲವ ಮಾಡಿ
ಕಳುಹಿ ವೈರಿಗಳ ಪಾಳೆಯಕೆ ।
ತಳುವದೆ ಬೆಟ್ಟದ ಚಾಮೇಂದ್ರ ಬಲ ಸಹ
ದಳ ದುಳಿಸಿದನು ಪಂಚೆಯಕೆ ॥ ೩೩

ಸೂರೆಗೆ ತಳತಂತ್ರ ಗೂಡಿ ಯಲ್ಲಿಗೆ ಬಂದು
ಮೀರಿದ ಜಕ್ಕಮನ್ನೆಯನ ।
ಮೇರೆ ಯಿಲ್ಲದ ಬಲ ವಾರಿಧಿಯನು ಮೋದಿ
ದಾರುಭಟೆಯನೇ ಪೇಳ್ವ ॥ ೩೪

ಇಡುವ ಪೆಟ್ಟಲು ಕೂಡಬ್ಬರಿಸುವ ಬಾಣ
ಜಡಿವ ಖಂಡೆಯ ಹರಿಗೆಗಳ ।
ಕಡು ಗಲಿ ಭಟರು ಭೋ ಯೆಂದಾರ್ದು ರಿಪುಗಳ
ತುಡುಕಿದರೇನ ಬಣ್ಣಿಸುವೆ ॥ ೬೫

ಕಡಿಯಿರಿ ಮೈಸೂರ ಕಳ್ಳರುಗಾರರ
ಪಡೆಯನೆನುತ ಬೊಬ್ಬಿರಿದು ।
ಪೊಡವಿಪ ಜಕ್ಕ ಮನ್ನೆಯನು ಪಾರ್ಬಲ ಗೂಡಿ
ಯೊಡನೆ ಬಂದಿದಿರಾಗಲಾಗ ॥ ೬೬

ಸೃಷ್ಟಿಗೆ ಮೈಸೂರ ಬಟ್ಟದ ಚಾಮನ
ಪಟ್ಟದಾನೆಗಳ ಕೈ ಗುಣಾಪ ।
ನಿಟ್ಟಿಸಿ ನೀವೆಂದು ಮುಟ್ಟಿ ಮುಂದಲೆಗಳ
ಕುಟ್ಟಿದರರಿ ಶಿರಗಳನು ॥ ೬೭

ಇರಿದರು ತರಿದರು ಕೊರೆದರು ಮೂಗನು
ಜರಿ ಟೋಪಿ ಜೋಡು ದಗಲೆಯ ।
ಪರಿ ಪಟ್ಟ ಮಾಡಿ ರಾವುತರ ಮೈಯ್ಯಲಿ ಬಲು
ಸುರಗಿಗಳನು ಸೆಕ್ಕಿದರು ॥ ೬೮

ನೇಜೆಯುದಿರಿತಕೆ ಚಿಗಿದು ಕುದುರೆಯಿಂದ
ಮಾಜದೆ ಬೀಳ್ವ ರಾವುತರ ।
ವಾಜಿಯ ಪಿಡಿದು ಮೂಗರಂದವರನು ಯಮ
ರಾಜನಾಲಯಕಟ್ಟಿದರು ॥ ೬೯

ಬೆಟ್ಟದ ಚಾಂಡಿಗೆ ಗಡಿಯ ಭೈರವನಿಗೆ
ಕೊಟ್ಟೆವು ನರ ಬಲಿಯೆನುತ ।
ಕುಟ್ಟಿ ಕೆಡಹಿ ಕಾಲಾಳ್ಗಳನುರೆ ಬೆ
ನ್ನಟ್ಟಿ ತಿವಿದರುರವಣಿಸಿ ॥ ೭೦

ತುಡುಕುತ ಜಕ್ಕ ಮಸ್ನಿಯುತ ಮಂದಲೆಯನು
ಪಿಡಿದು ಕೆಡಹಿ ಶಿರ ಪರಿದು ।
ಬಿಡದೆ ಸಾವಿರ ಕೋಲ ಹಿಡಿದಾ ಬಲವ ಮ
ತ್ತೊಡನೆ ಕೂಡಿದರು ಪಾಳೆಯವ ॥ ೨೧

ಹುಲ್ಲ ಹೇರುವೊಡೆ ಬಂದಿರುವ ಕನಾಡದ
ಝಲ್ಲಿಯ ಕೊಂಬಿಸೆತ್ತುಗಳ ।
ನಿಲ್ಲದೆ ತಿರುಹಿ ಕೊಂಡವರ ಮಾರ್ಬಲವನು
ಚಲ್ಲ ಒಡಿದರೇ ವೇಳ್ವ ॥ ೨೨

ಬೊಬ್ಬೆ ಯಾರ್ಭಟೆ ಬಾಣ ಬಿಡುವ ಕೋವಿಯೊ
ಳುಬ್ಬಿ ತೀವಿದ ಬಲು ಧೂಮ ।
ಉಬ್ಬಲಾಗಸಕಾಗ ಕೆಸರೆಯ ಮುತ್ತಿದ
ಹೆಬ್ಬಲವನು ತುಡುಕಿದರು ॥ ೨೩

ಬಾಣದ ಹೊಗೆಯಲಿ ರಿಪುಗಳ ತೂಳಿಸಿ ಕೊಂ
ಡೇಣಾಂಕ ವಂಶ ಸಂಭವನು ।
ಕ್ಷೋಣೀಶ ಬೆಟ್ಟದ ಚಾಮೇಂದ್ರನೊಳ ಹೊಕ್ಕು
ಮಾಣದಿರಿದ ರಿಪು ಬಲವ ॥ ೨೪

ದಳವನೆರಡು ಫೌಜು ಮಾಡಿ ಯುಗ್ರಜ ಗೂಡಿ
ತುಳಿಲಾಳುಗಳ ಬೊಬ್ಬೆಯಲಿ ।
ಚಲದಂಕ ಬೆಟ್ಟದ ಚಾಮೇಂದ್ರ ಮುತ್ತಿದ
ಬಲ ಜಲಧಿಯ ಕಲಕಿದನು ॥ ೨೫

ಎಡೆ ಬಿಡದಿಡುವ ತುಪಾಕಿಯ ಗುಂಡಿನ
ಕಡುಹಿಂದ ನಡುವ ಬಾಣಗಳ ।
ಗಡಣದಬ್ಬರದಿಂದ ಕೂಡಿದ ರಿಪು ಬಲ
ಕಡಿ ಖಂಡ ವಡೆದುದೇ ವೇಳ್ವ ॥ ೨೬

ಇರಿವ ಬಲ್ಲೆಹದಿಂದ ತರಿವ ಖಂಡೆಯ ಮೊಗ
ಕೊರೆವ ಕರದ ಚೂರಿಯಿಂದ ।
ತಿರುಮಲ ರಾಜೇಂದ್ರನ ಬಲ ನೊಂದಾಗ
ಮುರಿದೋಡಲುಜ್ಜುಗಿಸಿದುದು ॥ ೭೭

ಕುದುರೆಗಳರಿದು ರಾವುತರ ಮುಂದಲೆಗಳ
ನೊದಗಿ ಪಿಡಿದು ಬೀಳಗೆಡಹಿ ।
ಮದದಂತಿಗಳ ಸೊಂಡಿಲ ಹೊಯ್ದು ಸುಭಟರ
ಸದೆದರೇ ವೇಳ್ವನದ್ಭುತವ ॥ ೭೮

ತಳುವದೆ ಬೆಟ್ಟದ ಚಾಮೇಂದ್ರ ಸಾಕಿದ
ಹಳೆಯ ಪೈಕದ ನಾಯಕರು ।
ಬಳ ಹೊಕ್ಕು ವೈರಿ ಮಾರ್ಬಲವನು ಸದೆದಾಗ
ಕಳ ಕೊಳವನು ಮಾಡಿದರು ॥ ೭೯

ಕರದ ಖಂಡೆಯದಿಂದ ರಿಪುಗಳ ಶಿರವನು
ತರಿದು ನೇಜಯದಿಂದಲಿರಿದು ।
ತುರಗಗಳನು ಬೀಳಗೆಡಹಿ ಬೆಟ್ಟದ ಚಾಮ
ದುರಗಲಿ ಮೆರೆದ ಸಾಹಸವ ॥ ೮೦

ಆನೆಯನರೆಯಟ್ಟಿ ದೊರೆ ದೊರೆಗಳ ಪೌಜಿ
ನಾನಿಕೆಯನು ಕಾದಗಲಿಸಿ ।
ಭೂನಾಥ ಬೆಟ್ಟದ ಚಾಮೇಂದ್ರ ಬಹುದು
ಮ್ಮಾನವಿತ್ತನು ರಿಪುಗಳಿಗೆ ॥ ೮೧

ಕಾಲಾಳು ಪವುಜು ಮುರಿದು ವಾರುವಗಳ
ಸಾಲೊಳು ಮರೆಗೊಂಡುವಾಗ ।
ಮೇಲೆ ತುರಂಗ ಪದಾತಿ ಭೀತಿಯೊಳು ಕಂ
ಡಾಲ ಮೋಹರವ ಸೇರಿದುವು ॥ ೮೨

ದುರಗಲಿ ಬೆಟ್ಟದ ಚಾಮೇಂದ್ರನುರುಬೆಗೆ
ಕರಿ ವಿಂಡು ತುರಗ ಕಾಲಾಳು ।
ಮುರಿದೋಡಿದುದು ದೆಸೆ ದೆಸೆಗಾ ಬಲಕ್ಕೆ ಬಂ
ದುರು ಭಂಗವನೇ ವೇಳ್ವೆ ॥ ೮೩

ಸಿಡಿದುವು ತಲೆ ಕೊರಳ್ಖಂಡಿಸಿ ಯುರದೆಲು
ಪುಡಿಯಾಗಿ ತೊಡೆಗಳು ಮುರಿದು ।
ಬಿಡದೆ ಕೈ ಕಾಲು ಮುಂಡಿಸಿ ರಿಪು ಬಲ ನೆರೆ
ಮಡಿದುದು ರಣ ಭೂಮಿಯೊಳಗೆ ॥ ೮೪

ಬಿರುದನೀಡಾಡಿದವರು ಬಾಯೊಳಗಂದು
ಬೆರಳಿಟ್ಟು ಸಲಹೆಂದೆನುತ ।
ಕರವ ಮುಗಿದು ವಲ್ಮೀಕವೇರಿದ ರಿಪು
ಪರಿವಾರವೆಸೆದುದಾ ಕ್ಷಣಕೆ ॥ ೮೫

ಸಲೆ ಬ್ರಹ್ಮಪುರ ಪರಿಯಂತ ಕೂಡಿದ ರಿಪು
ತಳತಂತ್ರವ ಮುರಿದಿರಿದು ।
ತಲೆಗಳ ಹೊಯ್ದು ನಾಲ್ಕೆಂಟು ಸಾವಿರವನು
ಹೊಳೆಯು ಕೂಡಿದನುಳಿದವರ ॥ ೮೬

ಪಟ್ಟದ ಮದ ಕರಿ ವಾರುವಗಳ ಪಿಡಿ
ದಟ್ಟಿ ವೈರಿಗಳ ಮಾರ್ಬಲವ ।
ತೊಟ್ಟನೆ ಧರ್ಮ ಗಾಳಿಯ ಹಿಡಿಸಿದನಾ
ಬೆಟ್ಟದ ಚಾಮ ಭೂಪಾಲ ॥ ೮೭

ದೊರೆ ರಾಯ ಬೆಟ್ಟದ ಚಾಮೇಂದ್ರನ ಕೂಡೆ
ದುರವನೆಸಗಲಮ್ಮನೆನುತ ।
ಪಿರಿಯ ಪಟ್ಟಣದೀಶ ರುದ್ರ ಗಣಾಖ್ಯನು
ಸರಿದನು ರಣ ಭೀತಿಯಲಿ ॥ ೮೮

ಮೇಲನರಿಯದೆ ಬಿಟ್ಟಪ ಚಾಮೇಂದ್ರ ಭೂ
ಪಾಲನ ಕೆಣಕಿ ದುಷ್ಕೀರ್ತಿ ।
ಬಾಲೆಗೆ ಪತಿ ಯಾದೆನೆಂದಾಗ ಪದಿನಾಡ
ಭೂಲೋಲ ಸರಿದ ಚಿಂತೆಯಲಿ ॥ ೨೯

ಎಂದೆಂದಿಗೀ ಕಡೆಯಲಿ ಸುಳಿದರೆ ತಮ್ಮ
ತಂದೆಯ ಪದದಾಣೆ ಎನುತ ।
ಮುಂದು ಗೆಟ್ಟೋಡಿದನಾಗ ತಳಕಾಡ ನಂಜೇಂದ್ರ
ಬಂದು ಹೊಕ್ಕನು ತನ್ನ ಪುರವ ॥ ೩೦

ಕೆರೆಯೂರ ತಿಮ್ಮನಾಯಕ ನುಗ್ಗ ಹಳ್ಳಿಯ
ಹರಿದಾಸ ನರಸಿಂಹ ಪುರದ ।
ದೊರೆ ಬೇಲೂರ ಮನ್ನೆಯರಾಗ ಮನನೊಂದು
ಸರಿದರು ನಿಜ ಪುರಿಗಳಿಗೆ ॥ ೩೧

ಬಳಲಾಪುರ ಬೆಂಗಳೂರು ಕೋಳಾಲ
ದಿಳೆ ಯಾಣ್ಮರುರೆ ಕಂಗೆಟ್ಟು ।
ತಳತಂತ್ರವ ನೀಗಿ ತಮ್ಮಯ ಪುರಗಳ್ಗೆ
ತಳುವದೆ ಸರಿದರೇ ವೇಳ್ವ ॥ ೩೨

ಸುತ್ತಣ ಪ್ರಭು ಮನ್ನೆಯರೆಲ್ಲರು ನಿಜ
ಪತ್ತಿಗಳನು ನೀಗಿ ನೊಂದು ।
ಮತ್ತಾಗ ನಿಂದಲ್ಲಿ ನಿಲ್ಲದೆ ಸರಿದ ಪಿ
ಪತ್ತ ನಾನೇನ ಬಣ್ಣಿಪೆನು ॥ ೩೩

ಹರಿಭಕ್ತನ ಕೂಡೆ ಬರಿದೆ ವೈರವ ತಾಳ್ದ
ತಿರುಮಲ ರಾಜನ ಬಿಟ್ಟು ।
ಸಿರಿ ವಧು ಜಯಲಕ್ಷ್ಮಿ ಬೆಟ್ಟದ ಚಾಮನ
ವರ ಹಸ್ತದಲಿ ಸೇರಿದಳು ॥ ೩೪

ಧರೆಯನಾಳುವೊಡೆ ಪರಾಕ್ರಮ ಸಾಲದೆ
ತಿರುಮಲ ರಾಜ ಚಕ್ರೇಶ ।
ಸರಿದನು ಪದಿನಾಡ ಹೊಳೆಯ ಮೂಲಿಂಗಿಗೆ
ಪರ ಪುತ್ರ ಮಿತ್ರರು ಸಹಿತ ॥ ೯೫

ಮುರಿದು ಸುತ್ತಣ ಪ್ರಭುಗಳ ರಾಜ್ಯವನಾಗ
ಬರೆ ಸೆಳೆದಗ್ರಜಾತನಿಗೆ ।
ಹರುಷದೆ ಪಟ್ಟಣ ಸಹಿತಿತ್ತು ಬೆಟ್ಟದ
ಧುರ ಧೀರ ಚಾಮೇಂದ್ರ ಮೆರೆದ ॥ ೯೬

ಭೀಮನ ಬಲದಿಂದ ಧರ್ಮ ನಂದನನುರೆ
ಭೂಮಿಗಟ್ಟರೆಯನಾದಂತೆ ।
ಆ ಮಹಾ ಬೆಟ್ಟದ ಚಾಮೇಂದ್ರನಿಂದ ನಿ
ಸ್ಸೀಮನಾದನು ರಾಜ ನೃಪತಿ ॥ ೯೭

ಬೆಟ್ಟದ ಚಾಮೇಂದ್ರನೆನೆ ರಿಪು ಭೂಪರ
ಪಟ್ಟದಂಗನೆಯರ ಗರ್ಭ ।
ತೊಟ್ಟುಳುಕಿಗೆ ಬಂದು ಕರಗುವುದಾತನ
ದಿಟ್ಟತನವನದೇ ಪೇಳ್ವೆ ॥ ೯೮

ಹುಟ್ಟಿದ ದಿನದಿಂದಾ ಬೆನ್ನ ಮುಚ್ಚವ
ಕೊಟ್ಟುದಿಲ್ಲಾಗ್ರಯ ಭೂಪ ।
ಬೆಟ್ಟದ ಚಾಮನ ವೀರ ರಸದ ಬಲು
ಗಟ್ಟಿಯನೇನ ಬಣ್ಣಿಸುವ ॥ ೯೯

ನಲಿದಳು ಭೂ ದೇವಿ ಯಜನ ಯಾಜನಗಳು
ಸಲೆ ಪೆರ್ಚಿಯುವವಸಿಂದ ।
ಮಳೆ ಬೆಳೆಯುಲಿ ಸಂತುಷ್ಟಿ ವಡೆದು ಜನ
ತಳಗಿದುದತಿ ಹರುಷದಲಿ ॥ ೧೦೦

ಎಲ್ಲಿ ನೋಡಲು ಕೆರೆ ಕಟ್ಟೆ ಯಾರಾಮಗ
ಳುಲ್ಲಾಸಗಳನ್ನ ಸತ್ರ ।
ಬಲ್ಲಿದ ಬೆಟ್ಟದ ಚಾಮೇಂದ್ರನಿಂದುರೆ
ಪಲ್ಲೈಸಿದುದ ನೇವೇಳ್ವ ॥ ೧೦೧

ಎಂದು ಚಾಮುಂಡಿಯ ಪಾದ ಪದ್ಮಗಳನ್ನು
ವಂದಿಸಿ ತ್ರಿ ಕಾಲದೊಳಗೆ ।
ಸುಂದರ ನಾಮದ ಷ್ಟೋತ್ತರ ಶತ ಪೂಜೆ
ಚೆಂದವೆನಲು ಮಾಡುವನು ॥ ೧೦೨

ಕೂಳ ಕಾಣದ ದೇವತಾ ಜಾಲವಾ ಮುಹಿ
ಪಾಲ ಬೆಟ್ಟದ ಚಾಮನಿಂದ ।
ಮೇಲೆ ಮೃಷ್ಟಾನ್ನ ನೈವೇದ್ಯಗಳಿಂ ಮಿಗೆ
ತಾಳಿದುವತಿ ಹರುಷವನು ॥ ೧೦೩

ಪುರ ದುರ್ಗ ವಗ್ರ ಹಾರಗಳು ರಾಜಿಸುವ ಭೂ
ಸುರ ವರ್ಗ ಬಂಧು ವರ್ಗಗಳು ।
ಸಿರಿಯೊಳೋಲಾಡಿ ಬೆಟ್ಟದ ಚಾಮೇಂದ್ರನ
ಪರಸಿದುವತಿ ಮುದದಿಂದ ॥ ೧೦೪

ಇಂತಪ್ಪ ಬಹು ಧರ್ಮ ಶೌರ್ಯದೇಳ್ಗೆಯಲಿ ಭೂ
ಕಾಂತ ಬೆಟ್ಟದ ಚಾಮೇಂದ್ರ ।
ಸಂತತ ಜಯದಿಂದ ಪೃಥ್ವಿಯನಾಳ್ದನಂ
ಬಂತಾಗ ಸನಿ ಸಂಬಂಧಿ ॥ ೧೦೫

೨ ನೆಯ ಸಂಧಿ ಸಮಾಪ್ತಂ.



## ೪ ನೆಯ ಸಂಧಿ.

ಕಂಠೀರವ ನರಸರಾಜ ಜನನ ವರ್ಣನೆ.

ಸೂಚನೆ || ನರ ರಕ್ಕಸರ ಸಂ ಹರಿಸಲು ನರಸಿಂಹ
ನರನಾಥನಾಗಿ ಪುಟ್ಟಿದನು ||

ಹರಿ ವಾಹನನ ತಾಯನುಜನ ವೈರಿಯು
ನಿರದೆ ತುತ್ತಾಗಿ ನುಂಗಿದನ |
ಹಿರಿಯಣ್ಣನಿಂದ ಪಥವ ಪಡೆದನ ಸುತ
ನರಸ ಸಲಹು ತ್ರಿಜಗವ || ೧

ಬಳಿಕ ಬೆಟ್ಟದ ಚಾಮೇಂದ್ರ ಸಮಸ್ತ ಭೂ
ತಳವನಗ್ರಜ ಸಹ ನಲಿದು |
ವಿಲಸಿತ ಧರ್ಮ ಮಾರ್ಗದಲಿ ಪಾಲಿಸುತಾಗ
ಬಲು ಹರುಷದೊಳೊಪ್ಪಿದನು || ೨

ಬಹು ರಾಜ್ಯವ ತನ್ನ ವಶ ಮಾಡಿ ಭಕ್ತಿ ಸ
ನ್ನಿಹಿತನಾಗಿಯೆ ರಾಜಿಸುವ |
ಸಹ ಜಾತನ ಬಿಗಿಯಪ್ಪಿ ಮನ್ನಿಸಿ ನೆರೆ
ಮಹಿಪ ರಾಜೇಂದ್ರನೊಪ್ಪಿದನು || ೩

ಹರಿ ಭಕ್ತಿಯಲಿ ಪ್ರಹ್ಲಾದನೆನಿಸಿ ನೆರೆ
ಹರಿಧ್ಯಾನದಲಿ ಬಲಿಯೆನಿಸಿ |
ಹರಿ ಪೂಜೆಯಲಿ ರುಕ್ಮಾಂಗದನೆನಿಸಿ ಭೂ
ವರ ಬೆಟ್ಟದ ಚಾಮಸಿರುವ || ೪

ರಾಮ ಕವಚ ಕೃಷ್ಣ ಸ್ತವ ನರಸಿಂಹ
ಸ್ವಾಮಿ ದಿವ್ಯ ನಾಮಗಳ ।
ನೇಮದೊಳಗೆ ಜಪಿಸುವನಾ ಬೆಟ್ಟದ
ಚಾಮೇಂದ್ರನೊಲಿದು ಭಕ್ತಿಯಲಿ ॥ ೫

ದಿನ ಚರಿ ಮೂರು ಸಹಸ್ರ ನಾಮದ ಮಂತ್ರ
ದನುವಲಿ ಶ್ರೀ ನರ ಹರಿಯ ।
ಮನ ನಲಿವರ್ಚಿಸಿದಲ್ಲದನ್ನವ ಕೊಳ್ಳ
ಜನಪ ಬೆಟ್ಟದ ಚಾಮೇಂದ್ರ ॥ ೬

ಅವರಿಂದ ಶ್ರೀ ನರ ಹರಿ ಯಾ ಭೂ ಪನ
ಹೃದಯಾಬ್ಜ ಪೀಠದೆ ನೆಲಸಿ ।
ಕದನದೊಳಗೆ ಜಯವೀವ ಬೆಟ್ಟದ ಚಾಮ
ಗಿದಿರಹ ರಿಪು ನೃಪರುಂಟೆ ॥ ೭

ಹರಿ ದಿನದಲಿ ಹರಿ ಮಂತ್ರದೆ ಹರಿ ಪೂಜೆ
ಹರಿ ನಾಮ ಕೀರ್ತನೆಯಿಂದ ।
ಹರುಷದೆ ಜಾಗರವಿದ್ದು ರುಕ್ಮಾಂಗದ
ಧರಣೀಶನಂತೆ ರಾಜಿಪನು ॥ ೮

ಅಂಬರೀಷನವೊಲು ದ್ವಾದಶಿ ದ್ವಿಜ ನಿಕು
ರುಂಬಕ್ಕೆ ಯನ್ನ ದಾನಗಳ ।
ಸಂಭ್ರಮದಲಿ ಮಾಡಿ ಪಾರಣೆ ಗೆಯ್ವನಾ
ಕುಂಭಿನೀ ಪತಿ ಭಕ್ತಿಯಲಿ ॥ ೯

ಇಂತೊಪ್ಪುತ ಬೆಟ್ಟದ ಚಾಮ ಧರಣೀ
ಕಾಂತನು ಹರಿ ಭಕ್ತಿಯಲ್ಲಿ ।
ಸಂತತ ಪೃಥ್ವೀ ಸಾಮ್ರಾಜ್ಯವನೋ
ರಂತೆ ಪಾಲಿಸುತಿರುತಿರಲು ॥ ೧೦

ಕಲಿಯುಗ ಮಹಿಮೆಯೊಳಗೆ ನರ ರಕ್ಕಸ
ರುಲಿದು ದುರ್ಮಾರ್ಗವ ಬಲಿದು ।
ಸುಲಲಿತ ದೇವ ಭೂದೇವರ ಬಾಧಿಸಿ
ನಲಸಿದರವನಿಯೊಳಗೆ ॥ ೧೧

ಯಜನ ಯಾಜನಗಳನಳಿದು ಭೂಮಿಯೊಳಿಹ
ಸುಜನರುಗಳ ಹಿಂಡಿ ಹಿಳಿದು ।
ಗಜಬಜವನು ಮಾಡಿ ಬಳಿಕಲಧರ್ಮವ
ನಿಜವಾಗಿ ಬಲಿದರೇನೆಂಬೆ ॥ ೧೨

ಗೋವುಗಳನು ಸದೆಬಡಿದು ಧರೆಯೊಳಿಹ
ದೇವತಾಶಿಲೆಗಳನೊಡೆದು ।
ಪಾವನ ಸಾಧ್ವಿಯರನು ಭಂಗಕೆ ತಂದು
ಹಾವಳಿಯನು ಮಾಡಿದರು ॥ ೧೩

ಒಡೆದು ತಟಾಕವ ಧರ್ಮವೃಕ್ಷಗಳನು
ಕಡಿದಾಗ ಕಲ್ಪವಲ್ಲಿಗಳ ।
ಜಡಿದಿಟ್ಟು ಮುನಿಗಳ ತಪವನಳಿದು ಕ
ಣ್ಗೆಡಿಸಿದರೇವೇಳ್ವನದನು ॥ ೧೪

ಕೆಟ್ಟುದು ದೇವರ್ಕಳ ಮಹತ್ತು ಮುಳಬೆಳ
ನಷ್ಟವಾಗಲು ಧರ್ಮಗಳು ।
ಬಿಟ್ಟೋಡಲು ಮ್ಲೇಚ್ಛರು ಹೆಚ್ಚಿದ ಬಲು
ಕಷ್ಟವನೇನ ಬಣ್ಣಿಸುವೆ ॥ ೧೫

ವೇದಶಾಸ್ತ್ರಾಗಮವಳಿದಾಗ ಬಹುಳ ದು
ರ್ಬೋಧೆಗಳ ವರ್ತಿಸಲು ।
ಭೂದೇವಿ ಖಳರ ಭಾರವ ತಾಳಲಾರದೆ
ಆದಿಯೊಳುರೆ ಚಿಂತಿಸಿದಳು ॥ ೧೬

ಅರಿಗುಸಿರುವನೀಯಮಾಯಾಸದ ಪರಿ
ಹಾರವ ಮಾಳ್ಪರಾರೆಂದು ।
ಧಾರಿಣಿದೇವಿ ಚಿಂತಿಸಿ ಮನದಲಿ ಕಂಡ
ಳೋರಂತೆಸೆವ ಕಾರ್ಯದಿರವ ॥ ೧೭

ಹರಗುಸಿರುವೆನೆ ತಮೋಗುಣವಾತನ
ಮರಿಸಿಹುದಜಗೆ ಪೇಳುವೆನೆ ।
ಪರಿಹರಿಪೊಡೆ ಶಕ್ತನಲ್ಲವಿದಕೆ ಸಿರಿ
ಧರನೆ ಗತಿ ಯೆಂದಳಾಗ ॥ ೧೮

ಎಂದಾಳೋಚಿಸಿ ಭೂದೇವಿ ಸುಮನೋ
ಬೃಂದ ಸಹಿತ ನಡೆತಂದು ।
ಮಂದರಧರಗಾವಾಸ ಕ್ಷೀರಾಬ್ಧಿಯ
ನಂದಾಗ ಕಂಡಳೇವೇಳ್ವೆ ॥ ೧೯

ಪಾಕಶಾಸನಗೆ ಭಾಗ್ಯವನಿತ್ತೆನವನದೊಂ
ದಾಕಾರವ ನೋಳ್ಪನೆಂದು ।
ಬೇಕಾಗಿ ಶರಧಿ ತೆರೆಗಳಿಂ ಮೈ ವೆಚ್ಚಿ
ನಾಕವ ತುಡುಕುತೊಪ್ಪಿದುದು ॥ ೨೦

ಪುತ್ರಾಗಮಕುಬ್ಬಿದ ಸತ್ಪುರುಷನ
ಗಾತ್ರದಂದದೆ ಶಶಿಯುದಿಸೆ ॥
ಚಿತ್ರದೆ ಮೈ ವೆಚ್ಚುತಾಗ ಕ್ಷೀರಾಂಬುಧಿ
ಪತ್ರಿಪಥವನಡರಿದುದು ॥ ೨೧

ಪವಳಗಳಿಂ ರಾಗಿಸಿ ಮೌಕ್ತಿಕವೆಂಬ
ನವ ಪುಳಕಾಂಬು ವೆತ್ತಾಗ ।
ಸು ವಿಲಾಸದೆ ವಿಷ್ಣು ಪದ ಸೇವೆಗೆಯ್ಯುತ
ತವೆ ಪೊಳ್ಗಡಲೊಪ್ಪಿದುದು ॥ ೨೨

ಸುಳಿ ತೆರೆ ನೊರೆ ಬುದ್ಬುದ ಜಲ ಚರಗಳ
ಟ್ಟುಳಿಗೆ ತುಳುಕಿ ಮೇಲಕೇಳ್ವ ।
ಬಲುಸೀರ್ಪನಿಗಳ ಪೊತ್ತದಿಂದಂಬುಧಿ
ಯುಳವಟ್ಟು ಮೆರೆದುದಲ್ಲಿಯಲಿ ॥ ೧೩

ಇಂತೊಪ್ಪುತಿಹ ಕ್ಷೀರಾಬ್ಧಿಯ ನಡುವೆಯ
ನಂತನ ತಲ್ಪದೊಳಾಗ ।
ಸಂತತ ಬಿಡದೋಲೈಪ ದೇವರ್ಕಳ
ತಿಂತಿಣಿಯಲಿ ಹರಿಯೆಸೆದ ॥ ೧೪

ದ್ವಾದಶಾದಿತ್ಯರೇಕಾದಶ ರುದ್ರರು
ವಾದಿಪ ಸನ್ಮುನಿ ನಿಕರ ।
ಮಾದವನಿದಿರಲಿ ಜಯ ಜಯ ಯೆಂಬ ನಿ
ನಾದದೆ ಮೆರೆದುವೊಗ್ಗಿನಲಿ ॥ ೧೫

ಗರುಡ ಗಂಧರ್ವ ಕಿನ್ನರ ಕಿಂಪುರುಷ
ಸುರ ಸಿದ ಚಾರಣರೊಲಿದು ।
ಸಿರಿಯರಸನ ಚರಣಕೆ ನೊಸಲನು ಚಾಚಿ
ಹರುಷದೆ ನುತಿಸುತೊಪ್ಪಿದರು ॥ ೧೬

ರಂಭಾ ನಾಟ್ಯ ತುಂಬುರು ಗಾನ ಧ್ವನಿ
ಯಂಬುಜಾಸನನ ಕೊಂಡಾಟ ।
ಶಂಬರ ವೈರಿಯ ಪಿತನಾಸ್ಥಾನದೆ
ತುಂಬಿ ರಾಜಿಸಿದುದರ್ತಿಯಲಿ ॥ ೧೭

ಆ ಸಮಯದೆ ಭೂದೇವಿಯೈತಂದು ಸ
ರ್ವೇಶನ ಚರಣಾಬ್ಜಗಳಿಗೆ ।
ಭಾಸುರವಹ ಸಿರಿ ನೊಸಲ ಚಾಚುತ ಬಿ
ನ್ನೈಸಿದಳೊಲಿದು ನುತಿಸುತ ॥ ೧೮

ದೇವ ದೇವಾಸುರಾರ್ಚಿತ ದಿವ್ಯಪದಯುಗ
ಭಾವಜಪಿತ ಭವದೂರ ।
ಪಾವನಮೂರ್ತಿ ಪಂಕಜನೇತ್ರ ಸರ್ವಗು
ಣಾವಲಂಬನನವಧಾನ ॥ ೧೯

ಜಯ ಜಯ ಜನನವಿದೂರ ಜನಾರ್ದನ
ಜಯ ಜಯ ರವಿಕೋಟಿತೇಜ ।
ಜಯ ಭಕ್ತವತ್ಸಲ ಭವರೋಗಭೇಷಜ
ಜಯ ದುರಿತಾಬ್ಜಶಶಾಂಕ ॥ ೨೦

ಶರಣಾಗತರ ಮೊರೆಯ ಕೇಳಿಯವರಿಗೆ
ವರವಿತ್ತು ಸಲಹುವ ಬಿರುದು ।
ನೆರೆ ನಿನಗಲ್ಲದಿನ್ನಾವ ದೇವರ್ಗುಂಟು
ಸಿರಿಯುರಸನೆ ಚಿತ್ತೈಸು । ೨೧

ಶ್ರುತಿಯ ಕದ್ದೊಯ್ದಸುರನ ಕೊಂದು ಭೂಸುರ
ತತಿಯ ರಕ್ಷಿಸಿದೆ ಮಂದರವ ।
ಅತಿಶಯದಿಂ ತಾಳ್ದನ್ನ ಸೀನುಳುಹಿದೆ
ಶತಪತ್ರನೇತ್ರ ಚಿತ್ತೈಸು ॥ ೨೨

ತರಳಗೆ ಮುನಿದನ ಕರುಳನುಗಿದು ನಿನ್ನ
ಕೊರಳೊಳು ವನಮಾಲೆಯಿಟ್ಟೆ ।
ಭರದೆ ಬಲಿಯ ಮೆಟ್ಟಿ ದುರುಳರಾಜರ ತಲೆ
ಯುರುಳ ಕಡಿದೆ ಕೊಡಲಿಯಲಿ ॥ ೨೩

* ಹತ್ತು ಮೊಗದ ಖಳನುತ್ತಮಾಂಗಗಳನು
ಕತ್ತರಿಸಿದೆ ಬಾಣದಲಿ ।
ಮತ್ತಾಗ ಯದುಭೂಪೋತ್ತಮನಾಗಿ ದು
ರ್ಮತ್ತರ ಸಂಹಾರಗೈದೆ ॥ ೨೪

ತ್ರಿಪುರದ ಸತಿಯರ ಕಪಟ ರೂಪಲಿ ಬಲು
ತಪಗಳನಳಿದ ಮಹಾತ್ಮ ।
ವಿಪರೀತರಾವೃತನುಪಮೆಯ ಕೈಕೊಂಡ
ನಿಪುಣ ಕೇಳನ್ನ ಬಿನ್ನಪವ ॥ ೩೫

ಅಂದಿನ ಖಳರೀಗ ಬಂದು ತುರುಕರಾಗಿ
ಮುಂದುಗೆಡಿಸಿ ಗೋದ್ವಿಜರ ।
ಕೊಂದು ಕೂಗುತ ಧರ್ಮದಂದವನಳಿದರು
ಕಂದರ್ಪ ಪಿತನೆ ಚಿತ್ತೈಸು । ೩೬

ಅಳಿದರು ಹವ್ಯಕವ್ಯವ ವೇದಶಾಸ್ತ್ರವ
ಪಳಿದು ಪತಿವ್ರತೆಯರನು ।
ಸೆಳೆದು ಸೆರೆಯನಿಕ್ಕಿ ತಾಪಸ ನಿಕರವ
ಮುಳಿದಟ್ಟಿ ದೆಸೆಗೋಡಿಸಿದರು ॥ ೩೭

ದುಷ್ಟರ ಹೊರಲಾರೆ ನಿನ್ನಯ ಕರುಣಾ
ದೃಷ್ಟಿಯೊಳೆನ್ನನುದ್ಧರಿಸಿ ।
ತಟ್ಟನೆ ಸಲಹೆಂದು ಹರಿಚರಣಕೆ ನೊಸ
ಲಿಟ್ಟಳು ಮತ್ತೆ ಭೂದೇವಿ ॥ ೩೮

ಮದಮುಖ ದೈತ್ಯರ ಸದೆಯಲೋಸುಗ ನಿನ್ನ
ಪದಕೆ ಬಿನ್ನಹ ಮಾಡಿದೆನು ।
ಹದನಿದೀಗೆಂದ ಭೂಸುದತಿಯು ಮನ್ನಿಸಿ
ಪದುಮಾಕ್ಷ ನಗುತಲಿಂತೆಂದ ॥ ೩೯

ಹೋದ ರಕ್ಕಸರು ತುರುಕರಾಗಿ ಬಂದೀಗ
ಬಾಧಿಪರೆ ನಿನ್ನುವನು ।
ಭೂದೇವಿ ಕೇಳು ಮೈಸೂರ ರಾಜೇಂದ್ರನ
ಸೋದರನಿಹನೆನ್ನ ಭಜಕ ॥ ೪೦

ರುಕುಮಾಂಗದನಂಬರೀಷನವೊಲು ಸ್ತೋತ್ರ
ಮುಖದಿಂದಲೆಮ್ಮ ಪೂಜಿಸುವ ।
ಅಕಳಂಕ ಚರಿತ ಬೆಟ್ಟದ ಚಾಮೇಂದ್ರನ
ಬಕುತಿಗೆ ಮನವೊಲಿದಿಹೆನು ॥ ೪೧

ಬೆಟ್ಟದ ಚಾಮ ಭೂಪಾಲನ ಮೋಹದ
ಪಟ್ಟದಂಗನೆ ಗುರುವೆಂಬೆ ।
ಮುಟ್ಟಿ ಭಜಿಪಳನ್ನಾ ತಾಯ ಗರ್ಭದೆ
ಪುಟ್ಟಿ ಖಳರ ಕೊಲ್ವೆನೆನಲು ॥ ೪೨

ದೇವ ನಿನ್ನುದ್ಭವವಾಗುವ ದಿನವನು
ನಾವೆಂತರಿಯ ಬೇಕೆಂದು ।
ಭೂವಧು ಬಿನ್ನೈಸೆ ನಗುತಾಗ ಬಳಿಕ ಕೃ
ಪಾವಲಂಬನನಿಂತೆಂದ ॥ ೪೩

ಹಿಂದೆ ಕಂಬದೊಳಾನು ಜನಿಸಿದ ಶುಭಮಾಸ
ದಂದಿನ ದಿವಸದಗ್ರದಲಿ ।
ಬಂದಾಕೆಯುದರದೆ ನರ ರಕ್ಕಸರನು
ಕೊಂದಪೆ ಸಂಜಬೇಡೆಂದ ॥ ೪೪

ಎಂದು ಭೂದೇವಿ ಮುಂತಾದ ಸಕಲ ಸುರ
ವೃಂದವ ಮುದದೆ ಬೀಳ್ಕೊಟ್ಟು ।
ಮಂದರಧರ ನಸು ನಗುತ ಮುಂದಣ ಕಾರ್ಯ
ದಂದವ ನೆನೆಯುತೊಪ್ಪಿರಲು ॥ ೪೫

ಬಳಿಕಿತ್ತಲೊಂದು ದಿವಸ ಭೂಪನಂಗನೆ
ಕೆಳದಿಯರುಗಳೊಂದುಗೂಡಿ ।
ತಳುವದೆ ರಾಜಕೇಳೀವನಕೈತಂದು
ಗಿಳಿವರಿಗಳ ಕಂಡಳಾಗ ॥ ೪೬

ಕುದುರೆಗಳೇಳೆಂಟು ಸಾವಿರ ಹೆಚ್ಚಿನ
ಮದ ಸಾಮಜಗಳನ್ನೂರು ।
ಬದವಿದ ಬಲ ಲಕ್ಷ ಸಹ ತಿರುಮಲ ರಾಜ
ಕದನಕ್ಕೈದಿದನೇನೆಂಬೆ । ೩೫

ನೆಗಹಿದ ಸಾಲ ಸಬಳ ಝಳಪಿಪ ಖಡ್ಗ
ಮಿಗೆ ನಾನಾಯುಧ ಪಿಡಿದ ।
ಅಗಣಿತ ಬಲ ಸಹ ತಿರುಮಲ ರಾಜೇಂದ್ರ
ನಗುತ ದಂಡೆತ್ತಿ ನಡೆದನು ॥ ೩೬

ಬಿರುದಿನ ಡಾಳು ಪವಮಾನ ಮಕರ ಟೆಕ್ಕೆ
ಯುರುತರ ರಾಜ ಚಿಹ್ನಗಳ ।
ಪರಿಯ ತೋರುತ ತಿರುಮಲ ರಾಜೇಂದ್ರನಂ
ಏರದೆ ದಂಡೆತ್ತಿ ನಡೆದನು ॥ ೩೭

ಕೊಂಬು ಕಹಳೆ ರಾಯ ಭೇರಿ ತಂಬಟೆ ಪರೆ
ಚಂಬಕ ಮುವ್ವುರಿ ತುತ್ತೂರಿ ।
ಮುಂಬರಿದೆಸೆವ ನಾನಾ ವಾದ್ಯಗಳಾ
ಡಂಬರದೊಳಗೈತಂದ ॥ ೩೮

ಬಿರುದಿನ ಕಂಡೆಯ ರಾಯ ಗಜಾಂಕುಶ
ವುರುತರ ಗಂಗನ ಗೋಲು ।
ಮೆರೆವ ಮುತ್ತಿನ ಚಂಡು ವರ ಪಚ್ಚೆಯುಲಸು
ಕರಿಯೆಂಬ ಗಜಗಳೈದಿದುವು ॥ ೩೯

ಮೀಸರ ಗಂಡ ಬೊಯಿಲ ಪೋತರಾಜ ಕ
ಟ್ಟಾಸುರ ಮದನ ಗೋಪಾಲ ।
ಕೇಸುರಿ ಗಣ್ಣಳ ನರಸಿಂಹನೆನಿಸುವ
ಭೂಸುರ ಗಜಗಳೈದಿದುವು ॥ ೪೦

ಪರಮ ಸಂತೋಷದಿ ಮುಖ ಮಜ್ಜನವ ಮಾಡಿ
ಪೆರೆ ನೊಸಲಿನಲಿ ಕಸ್ತೂರಿಯ |
ಸು ರುಚಿರ ತಿಲಕವ ರಚಿಸಿ ಸು ಮಾಂಗಲ್ಯ
ತರುಣಿ ಯೊರ್ವಳ ಕರಿಸಿದಳು || ೫೩

ಇರುಳಿನಗ್ರದಲಿ ತಾ ಕಂಡ ಕನಸ ಪೇಳಿ
ವರ ಸು ಫಲವ ಬೆಸಗೊಳಲು |
ಪಿರಿದೆನಿಸುವ ಶೋಭನ ವಾಕ್ಯವ ಸತಿ
ಗೊರೆದಳಾ ಸಾಧ್ವಿ ಸಂತಸದಿ || ೫೪

ಎಲೆ ತಾಯೆ ನಿನ್ನುದರದೆ ಶೌರ್ಯ ಬಲ ಧರ್ಮ
ವಿಲಸಿತ ಕೀರ್ತಿಯು ಧರಿಸಿ |
ಜಲಜಾಕ್ಷ ನರ ಸಿಂಹ ಪುತ್ರನಾಗುದಿಸುವ
ಫಲವಿದೆಂದುಸಿರಿದಳೊಲಿದು || ೫೫

ಸಕಲ ಭೂಮಿಪಾಲಕನಾಗಿ ಬಹು ಶತ್ರು
ನಿಕರವ ಜಯಿಸಿ ಸಂತಸದಿ |
ಅಕಳಂಕರಹ ಪುತ್ರ ಪೌತ್ರರುತ್ಸವದಲಿ
ಸುಖ ಬಾಳುವನೆಂದಳವಳು || ೫೬

ಎನಲಾ ಶುಭ ವಾಕ್ಯವ ಕೇಳಿ ಸಾಧ್ವಿಗೆ
ಕನಕ ಭೂಷಣಗಳನಿತ್ತು |
ವನಿತೆಯು ಬೀಳ್ಕೊಟ್ಟು ನರ ಸಿಂಹ ಮೂರ್ತಿಯ
ಜನಪನಂಗನೆ ಧ್ಯಾನಿಸಲು || ೫೭

ಆ ತಾಯು ಪರಮ ಭಕ್ತಿಗೆ ಕೃಪೆಯಿಂದಲಾ
ಪ್ರೀತಿಯೊಳ್ನರ ಹರಿ ನಲಿದು |
ಭೂ ತಳಕಚ್ಚರಿ ಯೆನೆ ಗರ್ಭದಲಿ ನಿಂತ
ರೀತಿಯನೀನ ಬಣ್ಣಿಸುವೆ || ೫೮

ಅಸಿ ನಡು ಬಳೆದುದು ಕಮಲ ಕುಟ್ಮಲದೊಳು
ಬೆಸುಗೆ ಯಾಂತುವು ತುಂಬಿಗಳು ।
ಮಿಸುಗಿ ದರ್ಪಣ ಧವಳಿಸಿದುದು ಭೂಪನ
ಶಶಿ ಮುಖಿ ಗರ್ಭವ ಧರಿಸೆ ॥ ೫೯

ಬಳಿಕ ಬಯಕೆ ಪೆರ್ಚಿದುದು ರಾಜಿಸುತಿಹ
ವಳಿಗಳು ಮರಸಿದುವಾಗ ।
ನಳಿನ ದಳಾಕ್ಷ ನರ ಸಿಂಹನ ಮೂರುತಿ
ಬಳೆಯಲಂಗನೆಯ ಗರ್ಭದಲಿ ॥ ೬೦

ಪಟ್ಟದ ರಾಣಿ ಗರ್ಭಿಣಿ ಯಾದುದರಿತಾಗ
ನೆಟ್ಟನೆ ಹರುಷವ ತಾಳಿ ।
ಕೊಟ್ಟನು ದಾನಗಳನು ದ್ವಿಜ ನಿಕರಕೆ
ಬೆಟ್ಟದ ಚಾಮ ಭೂ ಪಾಲ ॥ ೬೧

ತುಂಬಲು ನವ ಮಾಸ ಶುಭವಾದ ನರ ಸಿಂಹ
ಗಿಂಬಾದ ವರ ಜಯಂತಿಯಲಿ ।
ಕುಂಭಿನಿಗಧಿಕ ಶೂರನ ಕುವರನ ಗುರು
ನಂಬಿ ಪಡೆದಳುತ್ಸವದೆ ॥ ೬೨

ಮೊರೆದುವು ಮಂಗಳ ವಾದ್ಯ ಮುತ್ತಿನ ಸೇಸೆ
ಗರೆದರಂಗನೆಯರರತಿಯಲಿ ।
ಧರೆ ನಲಿದುದು ಭೂ ಸುರರು ದಕ್ಷಿಣೆಗಳಿಂ
ಸಿರಿವಂತರಾದರು ಕ್ಷಣದೆ ॥ ೬೩

ಪನ್ನೆರಡನೆಯ ದಿವಸ ನಾಮ ಕರಣವ
ಚೆನ್ನಾಗಿ ರಚಿಸಲು ದ್ವಿಜರ ।
ಸನ್ನುತ ಬೆಟ್ಟದ ಚಾಮೇಂದ್ರ ಕರಸಿಯ
ತ್ಯನ್ನತ ಹರುಷದೊಳಾಗ ॥ ೬೪

ಕುವರಗೆ ಶುಭ ನಾಮ ಕರಣವ ರಚಿಸುವ
ವಿವರವೇನೆಂದು ಭೂ ಪಾಲ ।
ತವೆ ಹರುಷದೆ ಬೆಸ ಗೊಳಲು ಭೂ ಸುರರು
ತ್ಸವ ಮಿಗಲುಸಿರಿದರೊಲಿದು ॥ ೬೫

ಕರುಣಾ ಕರ ನರ ಸಿಂಹನ ನೀಪತಿ
ಪರಮ ಭಕ್ತಿಯುಲಿ ಪೂಜಿಸಲು ।
ಹರಿ ನಿನಗೊಲಿದು ನಿನ್ನುದರದೆ ಜನಿಸಿದ
ಪರಿ ಯುಲ್ಲದಿನೆ ನರ ಶಿಶುವೇ ॥ ೬೬

ಪರಿಕಿಸೆ ಮಧು ಮಾಸದ ಶುಕ್ಲ ಪಕ್ಷದ
ವರ ಚತುರ್ದಶಿಯು ಸಂಜೆಯುಲಿ ।
ನರ ಸಿಂಹನ ಜಯಂತಿಯುಲಿ ಜನಿಸಿದೀ
ತರಳನು ನರ ಸಿಂಹನ್ನೈಸೆ ॥ ೬೭

ಇದಗೆ ಕಂಠೀರವ ನರಸೇಂದ್ರನೆಂದು
ಸ್ತವದಲಿ ನಾಮ ಕರಣವ ।
ವಿವರದೆ ರಚಿಸ ಬೇಕೆಂದು ಭೂ ಸುರರೆನ
ಲವನೀಶ್ವರನೊಪ್ಪಿ ಗೊಂಡ ॥ ೬೮

ಪರಮ ಮಂಗಳ ಪುಣ್ಯಾಹಚರ್ನೆ ಶುಭ ಹೋಮ
ಸುರುಚಿರ ಸಕಲ ದಾನಗಳ ।
ವಿರಚಿಸಿ ಕಂಠೀರವ ನರಸೇಂದ್ರನೆಂ
ದೊರೆದರು ನಾಮ ಕರಣವನು । ೬೯

ಸು ಲಲಿತ ಮಂಗಳ ವಾದ್ಯ ಘೋಷದೆ ದೂರ್ವೆ
ಸಳೆ ದದಿ ಲಾಜೆಗಳ್ವರಸಿ ।
ಹೊಳೆವ ಮುತ್ತಿನ ಸೇಸೆ ದಳೆದು ಕುಮಾರನ
ಲಲನೆಯರ್ಹರಸಿದರೊಲಿದು ॥ ೭೦

ಮುತ್ತಿನಾರತಿ ರನ್ನದಾರತಿಗಳ ತಂದು
ಮುತ್ತೈದೆಯರೆತ್ತಿ ನಲಿದು ।
ಉತ್ತಮ ಶುಭ ಶೋಭನದೆ ತರಳನ
ನರ್ತಿಯಿಂದಲಿ ಪಾಡಿದರು ॥ ೩೧

ಪಿರಿಯ ವೃಷ್ಟಾನ್ನ ಭೋಜನ ದಾನಗಳಿಂದ
ಧರಣೀ ಸುರರಾಗ ನಲಿದು ।
ವರ ಮಂತ್ರಾಕ್ಷತೆ ಗರೆದು ಭೂಪನ ಸು
ಸ್ಥಿರ ಕುಮಾರನ ಪರಸಿದರು ॥ ೩೦

ಎಸೆವ ಶೋಭನ ತಿಥಿ ವಾರ ಸು ಲಗ್ನದೆ
ಮಿಸುನಿ ದೊಟ್ಟಿಲನಳವಡಿಸಿ ।
ವಸುಧೇಶನ ಸು ಕುಮಾರನನಿಂಬಿಟ್ಟು
ಶಶಿಮುಖಿಯರು ಪಾಡಿದರು ॥ ೩೩

ಕಂದ ಜೋ ಸೋಮ ವಂಶಾಂಬುಧಿ ಪರಿ ಪೂ
ರ್ಣೇಂದು ಜೋ ತರುಣೀ ಮಣಿಯರ ।
ಬಂಧುರ ನೇತ್ರಾಬ್ಜಗಳಿಗೆ ರಾಜಿಸುವಬ್ಜ
ಬಂಧು ಜೋ ಯೆಂದು ಪಾಡಿದರು ॥ ೩೪

ಬಳಿಕ ಪುರಂಧ್ರಿಯರೀ ಪರಿಯಲಿ ಪಾಡಿ
ನಲಿದು ಪರಸಿ ಸೇಸೆ ದಳೆದು ।
ಬಲವಿಂದ ಸು ಕುಮಾರನ ಮುದ್ದಿಸಿ ತವ್ಮ
ನಿಳಯಕೆ ಗಮಿಸಿದರಂದು ॥ ೩೫

ಇತ್ತಲಾ ಹುರ ಪುರದಧಿಪತಿ ಕೆಂಪ ಭೂ
ಪೋತ್ತಮನನುದರ ವಾರ್ಧಿಯಲಿ ।
ಉತ್ತಮ ಶುಭ ತಿಥಿ ವಾರ ಲಗ್ನದೆ ಸುತ
ರುತ್ತರೋತ್ತರದೆ ಪುಟ್ಟಿದರು ॥ ೩೬

ರವಿ ಶಶಿಗಳು ನರ ರೂಪಿನೊಳವನಿಯೊ
ಳವತರಿಸಿದ ತೆರದಿಂದ ।
ಭುವನೇಶ ಕೆಂಪ ರಾಜೇಂದ್ರನ ಗರ್ಭದೆ
ಕುವರರುದ್ಭವಿಸಿದರಾಗ ॥ ೭೭

ಧರಣೀ ಸುರ ಮಂತ್ರ ಮುಖದಲಿ ವರ ನಾಮ
ಕರಣವ ರಚಿಸಿ ಭೂ ಪಾಲ ।
ಸ್ಮರ ರೂಪ ನಂಜ ರಾಜೇಂದ್ರ ಲಿಂಗೇಂದ್ರನೆಂ
ದುರೆ ಪೆಸರಿಟ್ಟನರ್ತಿಯಲಿ ॥ ೭೮

ಹರುಷದೊಳಗ್ರಜನಾತ್ಮಜರನು ತನ್ನ
ಪೊರೆಗೆ ಬರಿಸಿ ಕೊಂಡು ನಲಿದು ।
ಗುರುವಂಬಿಕೆ ತನ್ನ ಪುತ್ರರಂದದೊಳಾ
ತರುಣರ ಸಲಹಿದಳೊಲಿದು ॥ ೭೯

ಸುಳಿ ಗುರುಳರಳಲೆ ಕರ್ಣ ಕುಂಡಲ ಕಟಿ
ಗಳವಟ್ಟ ಪೊನ್ನುಡಿ ದಾರ ।
ಪೊಳೆವ ರನ್ನದ ಗೆಜ್ಜೆ ಸು ಕುಮಾರ ತರ ಪಾದ
ಕಳವಟ್ಟು ಮೆರೆದರರ್ತಿಯಲಿ ॥ ೮೦

ತೊದಲು ನುಡಿಗಳಂಬೆ ಗಾಲು ದಟ್ಟಡಿ ಮುದ
ವೊದವಿದ ಧೂಳಾಟದಿಂದ ।
ಸಮುಳಿದೆ ಬಾಲ ಲೀಲೆಯು ತೋರಿ ಸಕಲಗೆ
ಚದುರ ಕುಮಾರರೊಪ್ಪಿದರು ॥ ೮೧

ಹರಿ ಯೊಡ ಗೂಡಿ ಭೀಮಾರ್ಜುನರುಗಳಾಗ
ಪರಿದಾದ ಬಾಲ ಲೀಲೆಯಲಿ ।
ಪರಿ ಶೋಭಿಸಂತೆ ನಂಜೇಂದ್ರ ಲಿಂಗೇಂದ್ರರು
ನರಸೇಂದ್ರನೊಡನೊಪ್ಪಿದರು ॥ ೮೨

ರಘು ಪತಿಯೊಡನೆ ಲಕ್ಷ್ಮಣ ಶತ್ರುಘ್ನರು
ವೊಗುವಿಗೆ ಭಯ ಭಕ್ತಿಯಲಿ ।
ವಿಗೆ ರಂಜಿಪ್ಪೊಲು ಕಂಠೀರವೇಂದ್ರನ ಕೂಡೆ
ಸು ಗುಣ ಶೇಖರರೊಪ್ಪಿದರು ॥ ೮೩

ದ್ವಾದಶಾಬ್ದದೊಳಾಗ ಕ್ಷತ್ರಿಯ ಧರ್ಮದೊ
ಳಾದುದಂದವರಿಗುತ್ಸಾಹ ।
ವೇದಿನೀ ಸುರರಿಂದ ಸಕಲ ವಿದ್ಯಾಭ್ಯಾಸ
ವಾದುದಾ ಸು ಕುಮಾರರರಿಗೆ ॥ ೮೪

ತುರಗದೇರಾಟ ಗಜಾರೋಹಣ ಮುಖ್ಯ
ವರ ಧನುರ್ವೇದ ಮುಂತಾದ ।
ಪರಿ ಪರಿಯಾಯುಧ ಸಾಧನೆಗಳನಾಗ
ಪರಿ ಪೂರ್ಣದಲಿ ಸಾಧಿಸಿದರು ॥ ೮೫

ಸಾಂಗ ಭಲ್ಲೆಯ ಬಾಕು ಹಿಂಗದೆ ಕಠಾರಿ
ಮಂಗಳ ಕರ ಚಕ್ರಾಯುಧದ ।
ಅಂಗವಣೆಯ ಕಲಿತರು ಬೇಗದಲಿ ಶ್ರೀ
ರಂಗ ಭಕ್ತರು ಮುದದಿಂದ ॥ ೮೬

ಸಿತ ಪಕ್ಷದ ಚಂದ್ರನಂತೆಯು ದಿನ ದಿನ
ಕತಿಶಯ ಕಳೆ ಪೆರ್ಚುತಿರಲು ।
ನುತ ಕೀರ್ತಿ ಕೌಮುದಿಯಿಂದಲೊಪ್ಪಿದನಾ
ಕ್ಷಿತಿ ಪತಿ ಕಂಠೀರವೇಂದ್ರ ॥ ೮೭

ಸು ಲಲಿತವಹ ಧರ್ಮ ಕೀರ್ತಿ ಪ್ರತಾಪಗ
ಳಳವಟ್ಟು ಪುರುಷ ರೂಪಾಗೆ ।
ಇಳೆಯೊಳು ಪರಿ ಶೋಭಿಸನಾ ಧರಾಧೀಶ
ಕುಲ ರತ್ನ ಕಂಠೀರವೇಂದ್ರ । ೮೮

ರೂಢಿಯು ಜೌವನದೊಡನೆ ಪರಾಕ್ರಮ
ಮೂಡಿರಲಾತ್ಮ ಜಾತನಿಗೆ ।
ನೋಡಿ ಸಂತಸದಿಂದ ಪಟ್ಟಾಭಿಷೇಕವ
ಮಾಡಲುಜ್ಜುಗಿಸಿದ ನೃಪತಿ ॥ ೮೯

ಶುಭ ತಿಥಿ ವಾರ ನಕ್ಷತ್ರದೆ ಭೂಮಿಯ
ವಿಭುಗಳೆಲ್ಲರ ಕೂಡಿಕೊಂಡು ।
ತ್ರಿಭುವನ ನಲಿಯೆ ಕಂಠೀರವ ಭೂಪಗೆ
ವಿಭವದೆ ಪಟ್ಟಗಟ್ಟಿದರು ॥ ೯೦

ಪಟ್ಟಾಭಿಷೇಕದ ಶುಭ ಮುಹೂರ್ತದೊಳಾಗ
ನೆಟ್ಟನೆ ಭೂಪರೈತಂದು ।
ಕೊಟ್ಟು ಕಾಣಿಕೆ ಕಪ್ಪಗಳ ನಲವಿಂ ಮನ
ಮುಟ್ಟಿ ಯೋಲೈಸಿದರಾಗ ॥ ೯೧

ಮಣಿ ಕನಕಾದಿ ಸಮಸ್ತ ದಾನಗಳಿಂದ
ದಣಿದು ಭೂಸುರರು ಯಾಚಕರು ।
ಗುಣಮಣಿ ನರಸರಾಜೇಂದ್ರ ಚಂದ್ರಮನ
ಪ್ರಣುತಿಯ ಮಾಡಿದರೊಲಿದು ॥ ೯೨

ಪೊಡವೀಶ ಮನ್ನೆಯ ಪರಿವಾರ ಮಂತ್ರಿಗ
ಳುಡುಗೊರೆಯುತ್ಸವಗಳಲಿ ।
ಒಡನೆ ಸನ್ಮಾನವ ತಾಳಿ ಸಂತೋಷವ
ಪಡೆದರೇವೇಳ್ವನಚ್ಚರಿಯು ॥ ೯೩

ಚಂದ್ರನ ಕಾಂತಿ ದಿನೇಂದ್ರನ ತೇಜ ಬ
ಲೀಂದ್ರನ ಸಿರಿ ರಂಜಿಸುವ ।
ಇಂದ್ರನ ಭೋಗ ಕಂಠೀರವ ನರಸರಾ
ಜೇಂದ್ರನಿಗಳವಟ್ಟುವಾಗ ॥ ೯೪

ಮುಖ ಪದ್ಮದಲಿ ಸಿರಿ ದೇವಿ ಭುಜದೆ ವರ
ಪ್ರಕಟಿತ ಜಯ ಲಕ್ಷ್ಮಿ ದೇವಿ ।
ಅಕಳಂಕನ ನಾಲಿಗೆಯೊಳು ವಾಗ್ದೇವಿ
ಸುಖದಿಂದ ನೆಲಸಿಹರೊಲಿದು ॥ ೯೫

ಆ ಮಹೀಶನ ಕುಲ ದೇವತೆ ಚಾಮುಂಡಿ
ಸ್ವಾಮಿ ತ್ರಿಣೇತ್ರ ಸರ್ವೇಶ ।
ಕಾಮ ಜನಕ ಲಕ್ಷ್ಮೀ ಕಾಂತನಿವರು ಸು
ಪ್ರೇಮದೆ ಮೈಗಾದಿಹರು ॥ ೯೬

ಸಿರಿ ರಂಗೇಶನ ಕೃಪೆ ಭೂಪನಂಗಕೆ
ಹಿರಿದು ವಜ್ರಾಂಗಿ ತಾನಾಗಿ ।
ಮೆರೆದಿರೆ ಕಂಠೀರವ ನರಸೇಂದ್ರನ
ಪರಮ ಶೌರ್ಯವನೇ ಪೇಳ್ವ ॥ ೯೭

ಚಲದಂಕ ಕಂಠೀರವ ನರಸೇಂದ್ರನ
ಬಲು ಶೌರ್ಯವೆಂದೆಂಬ ಚಕ್ರ ।
ಮಲೆವರಿ ನೃಪರ ಖಂಡಿಸುತೆಂದು ದೆಸೆಯೊಳು
ಸಲೆ ತಿರುಗುತ್ತಿಹುದಾಗ ॥ ೯೮

ಅದರಿಂದ ಪೂರ್ವದ ಚಕ್ರವರ್ತಿಗಳ ಸಂ
ಪದವೇಳಿಗೆಯೊಳಗೊಲಿದು ।
ಮುದದೆ ಕರ್ಣಾಟಕ ಚಕ್ರೇಶ್ವರನೆಂ
ಬುದಿತ ಪ್ರತಾಪದೆ ಮೆರೆದ ॥ ೯೯

ದೇವ ಬ್ರಾಹ್ಮಣ ಪಾಲನೆನಿಸಿ ಕೊಂ
ಡಾವಾವ ಧರ್ಮದೇಳ್ಗೆಯಲಿ ।
ಭೂ ವರ ಕಂಠೀರವ ನರಸೇಂದ್ರನು
ಠೀವಿಯಲಿರುತೊಂದು ದಿವಸ ॥ ೧೦೦

ಕರೆದು ತನ್ನಾಪ್ತ ಮಂತ್ರಿಗಳನೇಕಾನ್ತದೆ
ಹರುಷದೆ ನುಡಿದನಿಂತೆಂದು ।
ನೆರೆ ನಮ್ಮ ದಂಡಿಗೆ ದಳ ಪತಿ ಯೊಬ್ಬನ
ವಿರಚಿಸ ಬೇಕು ನಾವೆನಲು ॥ ೧೦೧

ಕಂಜ ವೈರಿಯ ಶಾಂತಿ ಕಾಮನ ಬಲು ರೀತಿ
ಯಂಜನೆ ಯಣುಗನ ಶೌರ್ಯ ।
ರಂಜಿಪ ದಿನ ನಾಥನ ತೇಜವೀ ವರ
ನಂಜೇಂದ್ರಗೀ ಯೆಂದರವರು ॥ ೧೦೨

ಎಂದೆಂಬ ಮಂತ್ರಿಗಳುಚಿತ ವಚನ ಕಾ
ನಂದದೆ ನರಸ ರಾಜೇಂದ್ರ ।
ಚೆಂದದೆ ದಳವಾಯಿ ಪಟ್ಟವ ನಂಜೇಂದ್ರ
ಗಂದು ಕಟ್ಟಿದನರ್ತಿಯಲಿ ॥ ೧೦೩

ರಾಮ ಚಂದ್ರನ ಸೇವೆಗೆ ಕಲಿ ಹನುಮಂತ
ನೇಮದೆ ತಗುಲಾದಂತೆ ॥
ಭೂಮಿಪ ಕಂಠೀರವೇಂದ್ರಗೆ ನಂಜೇಂದ್ರ
ತಾ ಮನೋಹರದೊಳೊಪ್ಪಿದನು ॥ ೧೦೪

ಬಿಡದೆ ತಾ ಮಾಡುವ ದಾನ ಧರ್ಮಗಳು ತ
ನ್ನೊಡೆಯ ಕಂಠೀರವೇಂದ್ರನಿಗೆ ।
ಕಡು ಪುಣ್ಯವೆಂದು ಮಾಡುತ ನಂಜ ರಾಜೇಂದ್ರ
ಸಡಗರದೊಳಗೊಪ್ಪಿದನು ॥ ೧೦೫

ಇಂತೊಪ್ಪುತಿಹ ದಳ ಪತಿ ಸಹ ನರಸ ಭೂ
ಕಾಂತ ಶ್ರೀರಂಗ ಪಟ್ಟಣದೆ ॥
ಸಂತತ ಸಕಲ ರಾಜ್ಯವ ಪಾಲಿಸುತ
ತ್ಯಂತ ಸಂಭ್ರಮದೊಳೊಪ್ಪಿದನು ॥ ೧೦೬

ಬಳಿಕ ಸು ಧರ್ಮ ದೇವತೆ ಭೂ ವಲನಾಳು
ವಿಳಯೊಳು ಪರಿ ಪೂರ್ಣವಾಗಿ ।
ಬಲು ಹರುಷದಲಿ ರಾಜಿಸುವಳಂಬಲ್ಲಿಗೆ
ಸುಲಲಿತ ಸಂಧಿ ಸಂಬಂಧಿ ॥ ೧೦೩

ನಾಲ್ಕನೆಯ ಸಂಧಿ ಸಮಾಪ್ತಂ.

## ೫ನೆಯ ಸಂಧಿ.

### ಶ್ರೀ ರಂಗೇಶ ಮಹಾತ್ಮ್ಯ ವರ್ಣನಂ

ಸೂಚನೆ || ಜಲಜಾಕ್ಷ ರಂಗ ಧಾಮನ ಕಾವೇರಿಯ |
ಲಲಿತ ಮಹಿಮೆಯ ಬಣ್ಣಿಸುವೆ ||

ಕಮಲ ಧರನ ಕಂಡು ನಿಮಿಷದೊಳತಿ ಸಂ
ಭ್ರಮದೊಳುಬ್ಬಿದನ ಮೊಮ್ಮಗನ |
ಕ್ರಮ ಗೆಡಿಸಿದನ ಭಕ್ತನ ಕಾಳಗದೆ ಗೆದ್ದ
ರಮೆಯ ವಲ್ಲಭ ಪಾಲಿಸೊಲಿದು || ೧

ಎಸೆವ ಕರ್ಣಾಟಕವೆಂಬ ನಾರಿಯ ಮುಖ
ಬಿಸರುಹದಂತೆ ರಾಜಿಸುತ |
ಜಸ ಪಡೆದುದು ಶ್ರೀ ರಂಗ ಪಟ್ಟಣ ಭಾಗ್ಯ
ದೆಸಕದೊಳತಿ ರಮ್ಯವಾಗಿ || ೨

ಇಳೆಯ ರಾಜರ ಭಾಗ್ಯ ವಧುಗಳೀ ಭೂಪನ
ಬಲು ಶೌರ್ಯ ಚಲುವಿಕೆಗೊಲಿದು |
ನೆಲಸೆ ಶ್ರೀ ರಂಗ ಪಟ್ಟಣವೆಂಬ ಪೆಸರು ಬಂ
ದಳವಟ್ಟುದೀ ಪುರ ವರಕೆ || ೩

ಶಶಿ ರವಿ ತ್ರಾಸಲೀ ಪುರವ ಸಗ್ಗವನೊಲ್ದು
ಬಿಸರುಹಾಸನ ತೂಗುತಿರಲು |
ಮೊಸೆದದು ಲಘುವಾಗಲೀ ಪುರ ಗುರು ವಾಗೆ
ವಸುಧೆಗಚ್ಚರಿ ಯೆನಿಸುವುದು || ೪

ಸಚ್ಚಿದಾನಂದ ಸರ್ವೇಶ್ವರ ಧರೆಯೊಳು
ಮೆಚ್ಚರಿಪಸುರ ಸಂಹಾರಿ ।
ಅಚ್ಯುತನಾದಿ ಕೇಶವನಪ್ರಮೇಯು ಶ್ರೀ
ಪಶ್ಚಿಮ ರಂಗೇಶನಿಹನು ॥ ೫

ಭಾವಜ ಪಿತ ಭಕ್ತ ವತ್ಸಲ ಭವದೂರ
ರಾವಣಾಂತಕ ರಮೆಯರಸ ।
ಪಾವನ ಮೂರ್ತಿ ಪಶ್ಚಿಮ ರಂಗೇಶ ಕೃ
ಪಾವಲಂಬನನೊಪ್ಪುತಿಹನು ॥ ೬

ತನ್ನ ನೆನೆವ ವರ ಭಕ್ತರ ಹೃತ್ಕಮಲದ
ಕರ್ಣಿಕೆಯೊಳು ತಾ ನೆಲಸಿ ।
ಸನ್ನುತ ಸಕಲ ವರಗಳೀವುತಾಗ ಪ್ರ
ಸನ್ನ ಮೂರುತಿ ಯೊಪ್ಪುತಿಹನು ॥ ೭

ಸ್ತ್ರರ ಪಿತ ನೀಲ ಮೇಘ ಶ್ಯಾಮನಾ ಪುರ
ವರದೀಶಾನ್ಯದ ಗಿರಿಯು ।
ಶಿರದೊಳೊಪ್ಪಿರಲಾತನ ತನು ಕಾಂತಿಯಿಂ
ಕರಿಘಟ್ಟವೆಂದು ಪೆಸರಾಯ್ತು ॥ ೮

ಸಕಲ ಜನರಿಗಿಷ್ಟಾರ್ಥ ವನೀಯುತ
ಭಕುತ ವತ್ಸಲನು ತಾನಾಗಿ ।
ಅಕಳಂಕ ಮೂರ್ತಿ ಬೇಟೆಯ ರಾಯನಾ ಗಿರಿ
ಶಿಖರದೊಳಗೆ ನೆಲಸಿಹನು ॥ ೯

ದೇಶಕಧಿಕ ಪುಣ್ಯ ಕ್ಷೇತ್ರವೆಂದೈದಿ
ಕಾಶಿಯು ವಿಶ್ವೇಶ್ವರನು ।
ಭಾಸುರ ಮಣಿ ಕರ್ಣಿಕೆ ಸಹಿತಿರುವ ವಿ
ಲಾಸವನೇನ ಬಣ್ಣಿಸುವೆ ॥ ೧೦

ಸಿರಿ ಧರ ಪಶ್ಚಿಮ ರಂಗನೀ ಪುರದಲ್ಲಿ
ಸ್ಥಿರವಾಗಿ ನೆಲಸಿದ ಬಗೆಯ ।
ಹರುಷದೊಳೊರೆವೆನು ಧರೆಯ ಜನರು ನೆರೆ
ಪರಮ ಭಕ್ತಿಯಲಿ ಲಾಲಿಪುದು ॥ ೧೧

ಪಿರಿದು ಗೋದಾವರಿ ತೀರದೆ ಗೌತಮ
ವರ ಮುನೀಶ್ವರನಿರುತಿರಲು ।
ಬರಲು ದುರ್ಭಿಕ್ಷ ಭೂ ಸುರರೈದಿ ಯಾತನೊ
ಪ್ಪಿರುವ ಮಂದಿರವ ಸಾರಿದರು ॥ ೧೨

ಕಂಡಾಗ ದ್ವಿಜರ ಮೇಲಣ ಕರುಣದೆ ಮುನಿ
ಪುಂಡರೀಕಾಕ್ಷನ ಭಜಿಸಿ ।
ಕೊಂಡಾ ಯವೆಯ ಬೀಜವ ಬಿತ್ತಿ ಧಾನ್ಯ
ದಂಡೆಯೊಳವರ ರಕ್ಷಿಸಿದ ॥ ೧೩

ಮುನಿ ಮಾಡಿದುಪಕಾರಕೆ ಯುಪಕಾರವ
ನೆನೆದಾಗ ಭೂಸುರ ನಿಕರ ।
ಘನ ಮಹಿಮನನಲ್ಲಿಂದಲೇಳಿಸಲೊಂ
ದನುವ ನೆಗಳ್ದರೇ ವೇಳ್ವ ॥ ೧೪

ಸಂತುಷ್ಟಿ ರಾಜ್ಯಕ್ಕೆ ಬಂತು ಪೋಗುವೆವೆನೆ
ಯಂತರಂಗದೆ ಕೋಪಿಸುವನು ।
ಎಂತು ನಾವಿಲ್ಲಿಂದ ಹೊರಡುವ ಯತ್ನವೆಂ
ದಂತದ ಯೋಚನ ಗೈದು ॥ ೧೫

ನಾವೀ ಮುನಿಗೆ ಸುಮ್ಮನೆ ಪೋಪೆವೆನೆ ಶಾಪ
ವೀವನೀತನಿಗೆ ನಿಂದೆಯನು ।
ತೀವ ಬೇಕೆಂದಾಗ ವಿಪ್ರರು ಕಪಟದ
ಗೋವ ನಿರ್ಮಿಸಿದರು ಕ್ಷಣದೆ ॥ ೧೬

ಬಂದಾಗ ಪಶು ಯವೆ ಬೆಳೆಯ ಭಕ್ಷಿಸುತಿರ
ಲಂದಾ ಮುನಿಪನೈತಂದು ।
ಮುಂದಿರ್ದ ಗೋವ ಕೈಯಿಂ ತಡಹಲು ಬೀಳು
ತಂದು ಜೀವವ ಜಾಡಿಸಿದುದು ॥ ೧೭

ಕುಟಿಲವೆಂದರಿಯದೆ ಗೌತಮ ಮುನಿ ಯಾಗ
ಚಟುಲ ಗತಿಯೊಳು ದುಃಖಿಸುತ ।
ಘಟಿಸಿತು ಗೋವಧೆ ಯಿನ್ನೇ ಗೈವೆನು
ವಟ ಪತ್ರ ಶಾಯಿ ಪೊರೆ ಯೆಂದು ॥ ೧೮

ಬಳಿಕ ಗೋ ಹತಿ ಬಂದಿತೆಂದಾಗ ಯತಿ ಪತಿ
ಘಳಿಲನೆ ವಿಪ್ರರ ಕೇಳೆ ।
ತಳುವದೆ ಭೂ ಪ್ರದಕ್ಷಿಣಕೆ ಪೋಗೆಂದಾಗ
ತಿಳುಹಲು ಜ್ಞಾನ ದೃಷ್ಟಿಯಲಿ ॥ ೧೯

ವರ ಮುನಿ ಕಪಟವೆಂದರಿದು ವಿಪ್ರರನಾಗ
ನೆರೆದ ಮರುಳರು ದಾರಿದ್ರ್ಯ ।
ಪರಿಪೂರ್ಣರಾಗೆಂದು ಶಪಿಸಿಕೋಪದೊಳಂದು
ತೆರಳಿದ ಭೂ ಪ್ರದಕ್ಷಿಣಕೆ ೨೦

ಕಾಶಿ ಪ್ರಯಾಗೆ ಗಯಾ ಕ್ಷೇತ್ರವೊಡ್ಡಿಯು
ಭೂಸುರ ತ್ರಿ ಜಗತ್ಪತಿಯು ।
ಸೂಸುವ ಹರುಷದೆ ಸೇವಿಸಿ ಶ್ರೀ ರಂ
ಗೇಶನ ಪುರಕೈತಂದ ॥ ೨೧

ಶ್ರೀ ರಂಗ ಪತಿಯು ಭಜಿಸಿ ದಿವ್ಯ ವರವನಾ
ಪಾರಿಕಾಂಕ್ಷಿಪನಾಗ ಬೇಡೆ ।
ಕಾರುಣ್ಯದಿಂದೆ ನೀ ನೆನೆದಲ್ಲಿಗೆ ಬಂದು
ಸೇರಿಪ ವರವ ಪೋಗೆಂದ ॥ ೨೨

ಎನಲು ಹಸಾದವೆನುತ ಕಾವೇರಿಯ
ಘನ ತಟ ಪುಣ್ಯ ಕ್ಷೇತ್ರಗಳ ।
ಮನದ ಹರುಷದೆ ನೋಡುತ ಬರೆ ಕಂಡನು
ಮುನಿ ಪತಿಗಳ ಮೊತ್ತವನು ॥ ೧೩

ವರ ಶಂಭು ಜೋಧಾಯನಾರ್ಷ್ಟಿಷೇಣನು
ಗುರು ಪಾರಾಶರ ಭೃಗು ಶುಕರು ।
ಗಿರಿಜೆ ಚಂದ್ರಮ ಬಿಲ್ವರಿರೆ ತಪಸಿನೊಳಾಗ
ಪರಮ ಗೌತಮ ಮುನಿ ಕಂಡ ॥ ೧೪

ಕಂಡಾಗ ನಗುತಲಾ ಮುನಿ ವರೇಣ್ಯರ ಪಾದ
ಪುಂಡರೀಕಗಳಿಗೆ ನಮಿಸಿ ।
ಕೊಂಡಾಡಿ ಬಹು ಭಕ್ತಿಯಲಿ ಗೌತಮ ಬೆಸ
ಗೊಂಡನೇನೆಂಬೆನಚ್ಚರಿಯ ॥ ೧೫

ಎಲೆ ಮುನಿಗಳಿರ ನೀವೇನು ಕಾರಣವಿಲ್ಲಿ
ಬಲು ತಪಗಳನು ಮಾಡುವಿರಿ ।
ಸ್ಥಳಮಾಹಾತ್ಮ್ಯೆಯನೆನಗರುಪೆನೆ ಮುನಿ
ಕುಳ ನುಡಿದುದು ಪ್ರೀತಿಯಿಂದ ॥ ೧೬

ಬಾರೆಲೆ ಗೌತಮ ಬಹು ಜನ್ಮ ವಿರಚಿತ
ಘೋರ ಪಾಪಗಳನು ನೀಗಿ ।
ಸೇರಿಪುದುತ್ತಮ ಗತಿಗೀ ಸು ಕ್ಷೇತ್ರವು
ದಾರದಿಂ ತನ್ನ ಸೇರಿದರ ॥ ೧೭

ಆವಾವ ಪುಣ್ಯ ಸ್ಥಳಕಿಂತಲೀ ಕ್ಷೇತ್ರ
ಪಾವನವೆಂದು ರಂಜಿಸಲು ।
ನಾವಿಹೆವೆನೆ ಮುನಿ ಪತಿ ಕೇಳಿ ಬಳಿಕ ಕೃ
ಪಾವಲಂಬನನ ಧ್ಯಾನಿಸಿದ ॥ ೧೮

ಸು ಲಲಿತ ಮುನಿಗಾದಪವಾದ ಗೋ ಹತಿ
ತೊಲಗಲಾ ಸ್ಥಳ ಮಹಿಮೆಯಲಿ ।
ನಲಿದು ನಿರ್ಮಲ ಚಿತ್ತನಾಗಿ ಯಾಗುತ್ತಮ
ಜಲಜಾಕ್ಷನನು ನುತಿಸಿದನು ॥ ೧೯

ಪರಮ ಗೌತಮನ ಸ್ಥಿತಿಗೆ ಮೆಚ್ಚಿ ಮನ್ನಿತ್ತ
ವರವ ಸಲಿಪೆನೆಂದು ನಗುತ ।
ಸಿರಿಧರ ರಂಗೇಶ ಕಾವೇರಿ ಮಧ್ಯದೆ
ಪಿರಿದು ವಲ್ಮೀಕದೊಳಸೆದ ॥ ೨೦

ಮುನಿ ಪತಿ ಜ್ಞಾನದೃಷ್ಟಿಯಲರಿದಾ ಕ್ಷಣ
ಘನ ಕಾಮ ಧೇನುವ ಬರಿಸಿ ।
ವಿನುತ ಪಯ ಗರೆದು ವಲ್ಮೀಕವ ಕರಗಿಸಿ
ಚಿನುಮಯ ಮೂರ್ತಿಯ ಕಂಡ ॥ ೨೧

ಸಿರಿ ದೇವಿ ಪಾದ ಪದ್ಮವನೊತ್ತೆ ಭೋಗೀ
ಶ್ವರ ಭೋಗ ತಲ್ಪದೊಳಸೆವ ।
ಹರಿಯ ಕಂಡಾ ಕ್ಷಣ ಗೌತಮ ಮುನಿ ಪತಿ
ನೆರೆ ಸ್ತುತಿಗೈದನಂದಾಗ ॥ ೨೨

ಜಯ ಜಯ ಸನಕಾದಿ ಯೋಗಿ ವಂದಿತ ಪಾದ
ಜಯ ಜಯ ಲೀಲಾ ವಿನೋದ ।
ಜಯ ಜಯ ಜನನ ವಿದೂರ ಜನಾರ್ದನ
ಜಯತೆಂದು ಪೊಗಳಿದನಾಗ ॥ ೨೩

ಶರಣಾಗತರನು ಪಾಲಿಸುವೆನೆಂದೆಂಬ
ಬಿರುದು ನಿನ್ನದು ಸರ್ವೇಶ ।
ಪರಮ ಮಂಗಳ ಮೂರ್ತಿ ಯೀ ದಿವ್ಯ ಸ್ಥಳದಲಿ
ಸ್ಥಿರವಾಗಿ ನೆಲಸಬೇಕೆಂದ ॥ ೨೪

ಎಂದೆಂಬ ಗೌತಮ ಮುನಿ ಸಹ ತಾಪಸ
ವೃಂದಕ್ಕೆ ಮುಕ್ತಿಯನಿತ್ತು ।
ಅಂದಿಂದ ರಂಗೇಶ ಭೂ ವೈಕುಂಠವಿ
ದೆಂದು ನೆಲಸಿದನರ್ತಿಯಲಿ ॥ ೩೫

ಬಡನಂದಿನ ಋಷಿಗಳು ತಮ್ಮ ಪೆಸರಲಿ
ಬಿಡದೆ ತೀರ್ಥವ ಕಲ್ಪಿಸಲು ।
ಪೊಡವಿಯ ಜನರು ಸ್ನಾನವ ಮಾಡಿ ಮುಕ್ತಿಯ
ಪಡೆವರೇ ವೇಳ್ವನಚ್ಚರಿಯು ॥ ೩೬

ಪರಿವ ಕಾವೇರಿಯುತ್ತರ ತಟದಲಿ ಶ್ರೀ
ನರಸಿಂಹ ನೆಲಸಿ ಭಕ್ತರನು ।
ಪೊರೆವನಾ ದಿವ್ಯ ಮಹಿಮನ ಬಣ್ಣಿಸುವೊಡೆ
ಸುರ ನರ ನಿಕರಕಸಾಧ್ಯ ॥ ೩೭

ರಾಮ ಚಂದ್ರನು ರಾಮೇಶ್ವರ ಪಶ್ಚಿಮ
ಭೂಮಿಯ ನದಿಯ ತೀರದಲಿ ।
ತಾ ಮನೋಹರವಾಗಿ ನರ ಹರಿ ಜನರ ಸು
ಪ್ರೇಮದೆ ಸಲಹುವನೊಲಿದು ॥ ೩೮

ಇಳಿದಗಸ್ತ್ಯನವರ ಕರ ಕಮಂಡಲದಿಂದ
ಜಳ ಪೂರ್ಣವಾದ ಕಾವೇರಿ ।
ಬಳಿ ಬ್ರಹ್ಮ ಗಿರಿಯಿಂದಲಿಳಿದುತಾ ಪುಟ್ಟುವ
ಬಲು ಸಂಭ್ರಮವೇನನೆಂಬ ॥ ೩೯

ಕನಕೆ ಯೆಂಬಾ ನದಿ ಯಿದಿರಾಗಿಯೆ ಬಂದು
ವಿನಯದೆ ಭಾಗಮಂಡಲದೆ ।
ಘನ ಸಂತೋಷದೆ ಸಂಗತೆ ಯಾಗೆ ಕಾ
ನನದೆ ಬಂದಳು ಬಲಮುರಿಗೆ ॥ ೪೦

ಹಲಿ ಚಂದ್ರ ತೀರ್ಥ ಸರ್ಪ ತೀರ್ಥವೆಂತೆಂಬ
ಹಲವು ತೀರ್ಥಂಗಳ ಬೆರೆದು ।
ಸಲೆ ಪರಿದೈತರುತಾಗಳಬ್ಬಗ ಯಾಗಿ
ಬಳಸಿ ಕೊಂಡಿಹಳು ಪಟ್ಟಣವ ॥ ೪೧

ಸುರ ನದಿ ಕಾಳಿಂದಿ ಗೂಡಿತು ಕ್ಷೀರಾಬ್ಧಿ
ಹರಿಯ ಧರಿಸಿ ಕೊಂಡಿಹುದು ।
ನರೆ ತನ್ನ ಶುಭ್ರಕೆ ಸರಿ ಗಾಣೆನೆಂದಾಗ
ಪರಿದಾಡುತಿಹಳು ಕಾವೇರಿ ॥ ೪೨

ಅಸಿ ವರುಣೆಗಳಾ ಕಾಸಿಯ ಪುರವನು
ಮುಸುಕಿ ಕಾದಿರುವೆಂದದಲಿ ।
ಬಸೆಯ ಪಟ್ಟಣವನು ವಾಹಿನಿ ಯೆರಡಾಗಿ
ಪಸರಿಸಿ ರಕ್ಷಿಸುತಿಹಳು ॥ ೪೩

ದೇವ ಗಂಗಾ ನದಿ ಗಗನ ಗಾಮಿನಿ ಯಾದ
ಭಾವವ ನೋಡ ಬೇಕೆನುತ ।
ಭಾವಿಸಿ ತೆರೆ ಗೂಡಿ ಕಾವೇರಿ ನರೆ ಗಗ
ನಾವಲಂಬಿತೆ ಯಾಗಿಹಳು ॥ ೪೪

ತಪ್ಪದೆ ಜಲ ಚರ ನಿಕರ ಬಿದಿರೆ ಮೇಲೆ
ಕುಪ್ಪರಿಸುವ ಜಲ ಬಿಂದು ।
ಚಿಪ್ಪಿಂದಲೊಡೆದು ಸಿಡಿವ ಮುತ್ತುಗಳನ
ಲೆಪ್ಪಿದುದತಿ ರಮ್ಯವಾಗಿ ॥ ೪೫

ಭಂಗ ಸಂಯುತೆ ಯಾಗಿ ಮುಳುಗಿದ ಜನರನ
ಭಂಗರ ಮಾಳ್ಪನೆಂದೆನುತ ।
ತುಂಗ ತರಂಗದೇಳಿಗೆಯಿಂದ ಕಾವೇರಿ
ಮಂಗಳ ಗಾತ್ರೆ ಯಾಗಿಹಳು ॥ ೪೬

ತಾವರೆ ಮೊಗ ಮೀನ್ ಕಣ್ಣು ನೀರಾನೆಗ
ಳ್ತೀವಿದ ನಡೆ ಸುಳಿ ನಾಭಿ ।
ಓವಿದ ಸೆಳ್ ನಡು ಕುಚ ಕೋಕಗಳೆನೆ
ಭಾವಕಿ ಮೆರೆದಳರ್ತಿಯಲಿ ॥ ೪೭

ಅಲಗ ಝುಳಪಿಸಂತೆ ಸೂರ್ಯನ ಕಿರಣವು
ಸಲೆ ಕಿರು ತೆರೆಯ ಮಧ್ಯದಲಿ ।
ಹೊಳೆದಾಡುತಿಹುದಾ ಕಾವೇರಿಯ ಬಲು
ಚೆಲುವನದೇನ ಬಣ್ಣಿಸುವೆ ॥ ೪೮

ಸಸಿ ಯುದಯಿಸೆ ಚಂದ್ರ ಕಾಂತ ಸೋಪಾನಗ
ಳೊಸರಲಾ ಜಲ ದಂಪ್ರ ಗೂಡಿ ।
ಎಸೆವಳು ಕಾವೇರಿ ಶ್ರಮದವರು ಮುಳುಗೆ ಸಂ
ತಸದಲಿ ಶೈತ್ಯವ ಕೊಡುತ ॥ ೪೯

ಸ್ನಾನ ಸಂಧ್ಯಾ ವಂದನೆ ಜಪ ತಪಗಳ
ಮೌನದೆ ಮಾಡಿ ರಾಜಿಸುವ ।
ಜ್ಞಾನಾಧಿಕರಿಂದ ಲುಭಯನದೀ ತಟ
ತಾನೆಸೆದಿಹುದರ್ತಿಯಲಿ ॥ ೫೦

ಚಾರು ವಸನ ಪೊಂಬಟ್ಟೆ ಬಿಳಿಯ ವಸ್ತ್ರ
ಸಾರ ಪೊಸ್ಪಳಿ ಮೊದಲಾದ ।
ಸೀರೆ ಸಹಿತ ಸ್ನಾನವ ಮಾಳ್ಪ ವಿಪ್ರರ
ನಾರಿಯರೆಸೆದರಿತ್ತಟದೆ ॥ ೫೧

ಕುಂಕುಮಗಳ ಪಣೆಗಿಡುವ ಹರಿದ್ರದ
ಪಂಕವ ಮೈಗೆ ಲೇಪಿಸುವ ।
ಪಂಕಜ ಮುಖಿಯರಿತ್ತಡಿಯ ಸೋಪಾನದೆ
ಮುಂಕೊಂಡು ಮೆರೆದರರ್ತಿಯಲಿ ॥ ೫೨

ಕಳಸಗಳನ್ನಿಕ್ಕಿ ಯರಿಸಿನ ಕುಂಕುಮ
ಗಳ ಗಂಧಾಕ್ಷತೆ ಯಿಟ್ಟು ।
ಫಲ ಪುಷ್ಪ ತಾಂಬೂಲದಿಂದ ಕಾವೇರಿಯ
ನೊಲಿದು ಪೂಜಿಸುತಿರ್ಪರಲ್ಲಿ ॥ ೫೩

ಕಚಗಳ ಸಿಕ್ಕ ಬಿಡಿಸುತೆಣೆ ಗಂಟಿಕ್ಕಿ
ಕುಚ ಮಧ್ಯದಲಿ ಹಾರವಿಡುತ ।
ವಿಚಲಿತ ನೇತ್ರಗಳಿಗೆ ಕಜ್ಜಲವನ್ನು
ರಚಿಸುತಂಗನೆಯರೊಪ್ಪಿದರು ॥ ೫೪

ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ
ಪೂರ್ಣ ಜಲವ ಕೊಂಡಾಗ ।
ಸನ್ನಾಹದಲಿ ಮನೆಗೈದುವ ವಿಪ್ರರ
ಕನ್ನಿಕೆಯರು ರಾಜಿಸುವರು ॥ ೫೫

ಲಿಂಗಕ್ಕೆ ಮಜ್ಜನವೆರೆದು ವಿಭೂತಿಯ
ನಂಗಕ್ಕೆ ಲೇಪಿಸಿ ಕೊಂಬ ।
ಹಿಂಗದ ಶಿವ ಭಕ್ತರ ಮೇಳದಿಂ ನೆರೆ
ಕಂಗೊಳಿಪುದು ನದಿ ತಟವು ॥ ೫೬

ಹರಿ ದಾಸರುಗಳೈದಿ ಹರಿವ ಜಲದೊಳಾಗ
ಹರಿದು ಮಜ್ಜನವನು ಮಾಡಿ ।
ತಿರು ನಾಮ ತಿರು ಚೂರ್ಣಗಳ ಹಣೆಯೊಳಗಿಟ್ಟು
ತಿರಿಗಿ ಹರಿಯ ಧ್ಯಾನಿಪರು ॥ ೫೭

ಬಡನೆ ಕಾವೇರಿಯ ನಡು ಕಡೆ ತಡಿಯೊಳು
ಬಿಡದೊಪ್ಪುವ ಮಂಟಪಗಳು ।
ಕುಡು ಬಿಲ್ಲನ ಪಿತನುತ್ಸವಕೆಡೆಯಾಗಿ
ಕಡು ಹರುಷವ ಬೀರಿದುವು ॥ ೫೮

ಪುರವ ಬಳಸಿ ಭೋರ್ಗರೆವ ಕಾವೇರಿಯು
ಪರಿಪೂರ್ಣ ಜಲದೊಳಗಾಗ |
ವರ ನಾವೆಯಲಿ ಜನ ದಾಟಿಪ ಜಲಗಾರ
ರಿರವ ನಾನೇನ ಬಣ್ಣಿಸುವೆ ॥ ೫೯

ಮಿಗೆ ಹರುಷದೊಳೊಪ್ಪುವ ಬಹು ಧರ್ಮದ
ಸೊಗಸು ವಡೆದ ಮಾರ್ಗವೆನಲು |
ಝಗ ಝಗಿಸಿದುದಾ ಉಭಯ ಕಾವೇರಿಯ
ಬಿಗಿದೊಪ್ಪುತಿಹ ದಿವ್ಯ ಸೇತು ॥ ೬೦

ಕಾರುಣ್ಯ ನಿಧಿ ಕಾವೇರಿಯ ವಕ್ಷದ
ಚಾರು ಮೌಕ್ತಿಕ ಹಾರವೆನಲು |
ಊರ ಬಳಸಿ ನೆರೆ ಪರಿವ ಕಾಲುವೆಯ ಶೃಂ
ಗಾರವನೇನ ಬಣ್ಣಿಸುವೆ ॥ ೬೧

ಮುಗುಳು ಹೊಡೆಗಳರೆ ಹೊಡೆ ನೆರೆ ಮೇಲಕ್ಕೆ
ನಿಗುರುವ ಹೊಡೆ ಪಸುರ್ವಡೆಯ |
ಬಗುಮಿಗೆಯಲಿ ಹಾಲುದುಂಬುದೆನೆಯ ಶಾಲಿ
ಸೊಗಸನಿತ್ತುವು ನೋಳ್ಪರಿಗೆ ॥ ೬೨

ಪುರವೆಂಬ ನಾರಿಯಾ ಪಸುರ ಪಟ್ಟೆಯನುಟ್ಟ
ತೆರದಿಂದ ಶಾಲಿಯ ಗದ್ದೆ |
ಪಿರಿದು ಶ್ರೀ ರಂಗ ಪಟ್ಟಣವ ಬಳಸಿ ಕೊಂ
ಡಿರುವ ಸಂಭ್ರಮವನೇನೆಂಬೆ ॥ ೬೩

ಹಾಲು ಬತ್ತಕೆ ಕವಿವರ ಗಿಳಿಗಳ ಹಿಂಡ
ಮೇಲಕೆಬ್ಬಿಸುವ ನಾರಿಯರ |
ಪೇಳಲಳವೆ ನೆಲೆ ಮೊಲೆಗಳ ಕಮಲವೆಂ
ದೋಲೈಸುವುವು ತುಂಬಿಗಳು ॥ ೬೪

ಕುರುಳ ಕಾಳಿಕೆ ಮೈ ಕಾಂತಿ ಕೈ ತಳಿರ್ಗಳಂದು
ಪಿರಿದಾದ ಬಾಯ್ದೆರೆ ಜಪ್ಪ ।
ಇರದಾಗಸಕೆ ಪಾರುವರ ಗಿಳಿಗಳ ಮುತ್ತೆ
ನೆರೆ ಪಂಚ ವರ್ಣವೈದಿದುವು ॥ ೬೫

ಕುಂಭಿನೀ ದೇವಿ ಮಂಗಳ ಮಜ್ಜನ ಮಾಡಿ
ತುಂಬಿ ತನುವಿಗೆ ಲೇಪಿಸಿದ ।
ಇಂಬಿನಲಿ ಮೆರೆವರಿಸಿನವೆನೆ ಶಾಲಿಯು
ಪೊಂ ಬಣ್ಣದಾ ಗದ್ದೆ ಯಿಹುವು ॥ ೬೬

ಕಣಿವೆಯು ಸಣ್ಣ ಸತ್ಯಾಗಾಲದ ಸಣ್ಣ
ಮಣಿಯಾದ ಗೋವೆಯು ಸಣ್ಣ ।
ಪುಣುಗು ವಾಸನೆಯುನಾಂತಿಹ ಸಣ್ಣ ಶಾಲಿಯು
ತೆನೆಗಳೊಪ್ಪಿದುವು ಚೆಲ್ವಿಂದ ॥ ೬೭

ಪಿರಿಯ ರಾಜಾನ್ನ ಜೀರಿಗೆ ರಾಜಾನ್ನವು
ವುರುತರ ಸೊಗಸು ರಾಜಾನ್ನ ।
ಪರಿ ಶೋಭಿಸುವ ಕಸ್ತೂರಿ ರಾಜಾನ್ನದ
ವರ ಶಾಲಿಯು ಗದ್ದೆ ಯಿಹುವು ॥ ೬೮

ಸೋಮ ಶಾಲಿಯು ಬಿಳಿ ಮಲ್ಲಿಗೆ ಕೆಂಬೂತಿ
ಹೇಮ ವರ್ಣದ ಕೊನೆವಾಳ ।
ರಾಮಣೀಯಕವಾದ ಪುಷ್ಪ ಮಂಜರಿಯು ಸ
ನಾಮದ ತೆನೆಗಳೊಪ್ಪಿಹುವು ॥ ೬೯

ಕೊಡಗು ಮಳಲಿ ಕಂತೆ ಹರಹಿನ ಡುಂಣಗ
ಳೊಡನೊಪ್ಪುತಿಹ ಬೈರಾವಳಿಯು ।
ಕಡು ಸೊಬಗಾಂತಿಹ ಚಂದ್ರೋದಯ ಶಾಲಿ
ಯೆಡೆ ಬಿಡದೆಸೆದುವರ್ತಿಯಲಿ ॥ ೭೦

ಹೊಳೆಯುವ ಕೆಂದಳಗ ಕಸ್ತೂರೀವರ್ಣ
ದೊಳು ಪರಿಮಳವಾಂತು ಮೆರೆವ ।
ಕಳಮೆಯ ತೆನೆಗಳು ಪರಿಶೋಭಿಸುತಾಗ
ಹೊಳಲ ಬಳಸಿ ರಾಜಿಪುವು ॥ ೩೧

ಅಳಿವಿಂಡುಗಳ ಗಾನಕೆ ತಂಬೆಲರಿಗೆ
ನಳಿನದಳದ ವಾಸನೆಗೆ ।
ತಲೆದೂಗುವೆಂದದೆ ಕಳಮೆಯ ತೆನೆಗಳಂ
ದೊಲೆದಾಡುತಿರ್ದುವರ್ತಿಯಲಿ ॥ ೩೨

ಹರುಷದೆ ಪಾಲ್ಗೆನೆಗೆರಗುವ ಗಿಳಿವಿಂಡ
ಹೊರಡಿಸುವಂಬುಜಾಕ್ಷಿಯರ ।
ಗುರು ಕುಚ ತನು ಕಾಂತಿ ಮೊಗದ ಚೆಲ್ವಿಕೆಗಾಗ
ಸಿರವ ತೂಗುವವೋಲೊಪ್ಪಿದುವು ॥ ೩೩

ಅಲರು ವಿಲ್ಪುಷ್ಪ ಬಾಣಗಳತಿ ಮೃದು ಪದ
ಕಳುಕರು ಜನರೆಂದು ಚಂದ್ರ ।
ಅಳಿಯನ ಬಿಲ್ಗೆ ಪೆಳಸಿದಂತೆ ಧವಳೇಕ್ಷು
ಗಳ ಗದ್ದ ರಾಜಿಸುತಿಹುವು ॥ ೩೪

ಗಗನದೆ ಚರಿಸುವ ಗಿಳಿಯ ದೇಹ ಚ್ಛವಿ
ಮಿಗೆ ನಮ್ಮ ಪಸುರ್ಗೆಣೆ ಯಹುವೆ ।
ನಗವೈರಿ ನೋಡೆಂದು ತೋರ್ಪೊಲಿಕ್ಷುವ ಸೋಗೆ
ಸೊಗಸಲುನ್ನತವಾಗಿಹುವು ॥ ೩೫

ಪುರಲಕ್ಷ್ಮಿಯ ಮೊಗ ದಾವರೆಯನು ನೆರೆ
ಪರಿವೇಷ್ಟಿಸಿ ಕೊಂಡಿರ್ಪ ।
ಪಿರಿದು ಪಚ್ಚೆಯ ಪತ್ರ ಮೆನಲು ನಂದನವನ
ಮೆರೆದುವು ನಾಲ್ದೆಸೆಗಳಲಿ ॥ ೩೬

ನರರಿಗಾ ಫಲವಿತ್ತು ಗಗನ ಮಾರ್ಗದೆ ನೆರೆ
ಚರಿಸುವೆಚ್ಚರ ವೆಣ್ಣುಗಳಿಗೆ ।
ಸಿರಿ ಮುಡಿಗಲರೀವ್ರೊಲಂಬರಕಡರಿದ
ಮರಗಳೊಪ್ಪಿದುವಡಕೆಗಳ ॥ ೭೭

ಬನ ದೇವಿ ಪೊಂಗಳಸದೊಳಮೃತವ ತುಂಬಿ
ಮನ ನಲಿದಾಗ ಕೈ ನೀಡಿ ।
ಅನಿಮಿಷಗೀರ್ವಂತೆ ಕೆಂದೆಂಗಿನ ಮರ
ಘನ ಫಲ ಸಹಿತವೊಪ್ಪಿಹುವು ॥ ೭೮

ಗಿಳಿ ಕರ್ದಂಕಲು ಸೋರ್ವನಿ ರಸವನು ಸವಿ
ವೆಳ ವೆಂಗಳೊಲಿದು ಚಪ್ಪರಿದು ।
ತಲೆ ದೂಗಿ ಕೊಂಡಾಡೆ ಪಕ್ವ ಫಲಾವಳಿ
ವೆಳದೊಪ್ಪಿ ಮೆರೆದುವಿಸ್ಮಾವು ॥ ೭೯

ಲಲನೆಯರಧರಾಮೃತಕಿಂತ ಸವಿ ನಮ್ಮ
ಫಲದೊಳಗಿವೆ ನೋಡೆನುತ ।
ಸಲೆ ವಿಟ ಜನಕರುಪುವೊಲು ನೇರಿಲ ಮರ
ಕಳಿ ವಣ್ಣು ಸಹಿತಲೊಪ್ಪಿಹುವು ॥ ೮೦

ಅಂಬುಜಾಕ್ಷಿಯರ ದಂತ ಚ್ಛವಿ ನಮ್ಮಯ
ನುಣ್ಬಿತ್ತಿನೊಳಗಿದೆ ಯೆನುತ ।
ಇಂಬಿಲ್ಲ ಪಲ್ಗಿರಿದುಸಿರುವವೊಲ್ಫಲಿಸಿ ದಾ
ಳಿಂಬದ ಮರಗಳೊಪ್ಪಿಹುವು ॥ ೮೧

ನಾರಂಗವೆ ನಾವು ನಮ್ಮಿಂದಲನ್ಯಕೆ
ಸಾರ ಸಂಪಾದಿಪುದೆನುತ ।
ಪೂರೈಸಿದ ಫಲ ಸಹ ಹೇರಿಳಯ ಮರ
ವಾರಾಮದೊಳೊಪ್ಪಿದುವು ॥ ೮೨

ಸುರ ಲೋಕದಿಂದಮೃತವ ಕೊಂಡು ಗರುಡನು
ಮರುತನ ಪಥದೊಳೈತರಲು ।
ಸುರಿವ ಬಿಂದುಗಳಂತ ಕರಣಿಗೆಯೊನೆ ಫಲ
ವೆರಸಿಹ ಕಿತ್ತಿಳೆ ಯಿಹುವು ॥ ೮೩

ಮಿಸುನಿಯ ವರ್ಣಕೆ ನಾನಾ ಬಗೆವಟ
ಕಸುಭೈಷಜ್ಯಕೆ ನರರ ।
ರಸನೆಯ ಸವಿಗೆ ನಾವೆಂದಾಗ ಫಲ ಸಹಿ
ತೆಸೆವ ಜಂಬೀರಗಳಿಹುವು ॥ ೮೪

ಕೆಡಹಿ ಲವಿತ್ರದೊಳ್ಕೊರೆದು ಸೀಳದರೀಗ
ಬಿಡೆವು ಸದ್ಗುಣವೆನೆಂದೆನುತ ।
ತೊಡವಿಗೆ ತೋರ್ಪೊಲು ಸವಿ ರಸ ಪುದುಗಿದ
ಕಡು ಫಲ ಸಹ ಪಲಸಿಹುವು ॥ ೮೫

ಸುರ ಪತಿ ರಂಭಾ ಫಲದೊಳಗಮೃತವ
ಸಿರಿಸಿ ಭೂ ಲೋಕಕೆ ಕಳುಹೆ ।
ನರರ ಮನ್ನಿಸಿ ನೆಲ ಗಳಕೈದುವೊಲ್ಬಾಳೆ
ಯುರು ಗೊನೆ ಸಹಿತಲೊಪ್ಪಿಹುವು ॥ ೮೬

ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆ
ಯೆಸೆವಾ ದೇವಾಳೆ ಕಬ್ಬಾಳೆ ।
ಪಸುರು ಗುಂಪದ ಪಚ್ಚೆ ನಾಡವು ಮಧುರಂಗ
ಪಸರಿಸಿ ಮೆರೆದು ವರ್ತಿಯಲಿ ॥ ೮೭

ಹೆಂಗಳ ನೆಲೆ ಮೊಲೆಗಳ್ ವೃತ್ತ ನಮ್ಮ ಫ
ಲಂಗಳೊಳ್ತೀವಿದೆ ಯೆನುತ ।
ಕಂಗೊಳಿಪೊಲು ಪರಿಮಳದ ಪಣ್ಗಳನಾಂತು
ತುಂಗದ ಬೇಲಗಳಿಹುವು ॥ ೮೮

ಅಂಬಟೆ ಯರೆ ನೆಲ್ಲಿ ಚಳ್ಳೆ ಬಿಲ್ವದ ಮರ
ಮುಂಬರಿದೆಸೆವ ತಿಂತ್ರಿಣಿಯು ।
ಇಂಬಾದ ದ್ರಾಕ್ಷಿ ಖರ್ಜೂರ ತಮಾಲಗ
ಳ್ತುಂಬಿಹುವಾರಾಮದೊಳಗೆ ॥ ೨೯

ಸುರರ ನಂದನ ಚೈತ್ರರಥದೊಳಗಿಹ ಕಲ್ಪ
ತರುಗಳ್ಬೈತಂದು ಪಟ್ಟಣದ ।
ಹೊರ ವನದೊಳಗೊಪ್ಪಿಹುವೆನೆ ಫಲ ಸಹ
ಮೆರೆದುವು ಭೂಜ ರಾಜಿಗಳು ॥ ೩೦

ಮದನನ ಮೊದಲಸ್ತ್ರವೆನಿಸಿ ಜಿತೇಂದ್ರಿಯ
ರೆದೆಯ ತಟ್ಟುಗಿವೆವೆಂದೆನುತ ।
ಮುದದೆ ಸರಸಿಯೊಳ್ಪರಿಮಳವಂತಿಹ
ಪದುಮದರಳುಗಳೊಪ್ಪಿದುವು ॥ ೩೧

ತರುಣಿ ರನ್ನೆಯರ ಬೆಳ್ನಗೆ ನಮ್ಮ ಶುಭ್ರಕೆ
ಸರಿ ಯಿಲ್ಲವೆಂದದ ಜರೆದು ।
ಪರಿಮಳಗಳ ಬೀರುತ ದೆಸೆ ದೆಸೆಗಾಗ
ಲರಳು ಮಲ್ಲಿಗೆಗಳೊಪ್ಪಿದುವು ॥ ೩೨

ಅಳಿ ನಿಕರಕೆ ಖಗ ಸರ್ವ ಜನಕೆ ಸುಖ
ಗಳನೀವೆವು ಸೌರಭದಲಿ ।
ಇಳೆಯೊಳಮ್ಮಂತುಪಕಾರಿಗಳಾರೆಂ
ದಲರೊಪ್ಪಿದುವು ಸಂಪಗೆಗಳ ॥ ೩೩

ವಿರಹಿಗಳದೆಯ ಕೆನ್ನೀರ್ಗುಡಿದತನುವ
ಕರಕೆ ಕಠಾರಿಗಳಾಗಿ ।
ಮೆರೆದೆವು ಬಿರುದನೆಂದೆನುತ ಸೌರಭ್ಯದ
ಸುರಗಿಯ ಪೂಗಳೊಪ್ಪಿದುವು ॥ ೩೪

ನಮ್ಮಂತೆರಡು ಪೆಸರನು ತಾಳಿ ರಾಜಿಪ
ಸುಮ್ಮಾನದರಳಿಲ್ಲವೆನುತ ॥
ಹೊಮ್ಮಿದ ನಂದನದಲಿ ಸುರ ಹೊನ್ನೆಯ
ಕಮ್ಮಲರುಗಳೊಪ್ಪಿದುವು ॥ ೯೫

ಫುಲ್ಲಲೋಚನೆಯರ ದನ್ತ ಪಙ್ಕ್ತಿ ಚ್ಛವಿ
ಯಿಲ್ಲಿವೆ ನೋಡಿ ಯೆಂದೆನುತ ॥
ಉಲ್ಲಾಸದೊಳು ತೋರ್ಪೊಲು ಪರಿಮಳವಾಂತ
ಮಲ್ಲೆಯ ಮುಗುಳ್ಗಳೊಪ್ಪಿದುವು ॥ ೯೬

ಪೊದವಿಯೊಳಾವಿರೆ ಪರಿಮಳವನು ವಾಯು
ಬಿಡದೆ ಕೊಂಡೊಯ್ವನೆಂದಂಜಿ ।
ಒಡನೆ ಪಾತಾಳವ ಮರೆಗೊಂಡು ಲಾಮಂಚ
ಮುಡಿವಾಳ ಬೇರ್ಗಳೊಪ್ಪಿದುವು ॥ ೯೭

ನೆರೆ ಮುಳ್ಳು ತುಂಟ * ಪೆಸರ ಬಂಡುಗರೆಮ್ಮ
ಹೊರೆಯೊಳಗಿರ ಬೇಡವೆಂದು ।
ಪರ ವನ ಪುಷ್ಪಗಳ್ಪೊರಡಿಸೆ ಬೆಳ್ದಳಿ
ಯರಲೊಪ್ಪಿದುವು ವನ ತಟದೆ ॥ ೯೮

ಮರುಗ ಕಸ್ತುರಿ ಮರುಗವು ಜಾಜಿ ಕೆಂಜಾಜಿ
ಪರಿಮಳಿಸುವ ಸೇವಂತಿ ।
ವರ ಪಾರಿಜಾತ ನಂದ್ಯಾವರ್ತ ಮೊದಲಾ
ದರಲೊಪ್ಪಿದುವು ಬನದೊಳಗೆ ॥ ೯೯

ಜಾಲದ ಪುಷ್ಪ ಪಾದರಿ ಬಕುಳ ಪುಷ್ಪ
ಮೇಲಾದ ಸುಕರಾಜ ಪುಷ್ಪ ।
ಲೀಲೆಯಿಂ ದೇವತಾ ಕುಸುಮಂಗಳೆಲ್ಲಾ
ಕಾಲದೆ ರಾಜಿಸುತಿಪುವು ॥ ೧೦೦

* ಮುಳ್ಳುತೋಂಟ ಎಂದಿರಬಹುದೆ ?

ಇಂದು ಕಾಂತದ ದಿವ್ಯ ಸೋಪಾನ ಜಲ ಮಾರ್ಗ
ನಿಂದ ನೀರ್ಗಳ ಚೆಲ್ವಿಂದ ।
ಮಂದ ವಾಯುವಿನಲೆಗೇಳುವ ಕಿರು ದೆರೆ
ಯಿಂದೊಪ್ಪಿದುವು ಸರಸಿಗಳು ॥ ೧೦೧

ಚೆಂ ಗಣಿಗಿಲ ದಿವ್ಯ ಪರಿಮಳಕೆರಗುವ
ಭೃಂಗ ವಿಂಡುಗಳ ಝೇಂಕಾರ ।
ಅಂಗಜ ವನ ದುರ್ಗಕಿಟ್ಟ ಮೋಲ್ಯಾರಿಯು
ಪೊಂಗಿದಾಳ್ದನಿಗಳಂತಿಹುವು ॥ ೧೦೨

ಗಿಣಿಗಳುಗ್ಗಡಣೆ ಕೋಕಿಲ ಪಾಠಕಾಳಿಯು
ಘನ ರವ ನವಿಲ ನರ್ತನದೆ ।
ವನ ಲಕ್ಷ್ಮಿಯೋಲಗ ಶಾಲೆಯಂದದಲಿ ನಂ
ದನ ವನ ಕಡು ರಮ್ಯವಾಯ್ತು ॥ ೧೦೩

ಪೊಡೆ ಬಿರಿದೆಸೆವ ಕಸ್ತೂರಿ ಪೊಂಬಾಳೆಯು
ಕಡು ಪರಿಮಳ ತಂಗೊಳದ ।
ಬಿಡುತರ್ಪ ಪುಷ್ಪ ವಾಸನೆಯಿಂದ ಪಥ ಶ್ರಮ
ವಡಗಿಪ್ಪುವೇನ ಬಣ್ಣಿಸುವೆ ॥ ೧೦೪

ಪುರ ವನಿತೆಯರು ತಮ್ಮಿನಿಯರ ಕರ ವಿಡಿ
ದಿರದೈತಂದು ನಂದನದೆ ।
ಪರಿಮಳ ಪುಷ್ಪಾಪಚಯ ಗೈದಾಸರ
ಪರಿ ಹರಿಸುತ ಮೆರೆದಿಹರು ॥ ೧೦೫

ತರುಣಿಯೊರ್ವಳ ತುಟಿಯು ತೊಂಡೆಯು ಪಣ್ಣೆಂ
ದರಗಿಣಿ ಯೆರಗಲಾ ನೀರೆ ।
ಕರ ಶಾಖೆಯಾ ಪುಷ್ಪರಾಗದೂರ್ಮಿಕೆ ದೋರಿ
ಪರಿದೋಡಿತಾ ಕೀರನಾಗ ॥ ೧೦೬

ಬಾಲಕಿ ಯೊರ್ವಳ ಮೊಗವ ತಾವರೆ ಯೆಂದು
ರೋಲಂಬವೈತಂದೆರಗಿ ।
ಮೇಲೆ ನಾಸಾ ಚಂಪಕ ಗಂಡು ಭೀತಿ ಗೊಂ
ಡಾಲೋಕಿಸದೋಡಿದುದು ॥ ೧೦೭

ನಳಿನಾಕ್ಷಿಯು ನೆಲೆ ಮೊಲೆಗಳ ತನ್ನಯ
ಬಳಗವೆನುತ ಚಕ್ರವಾಕ ।
ತಳುವದಲ್ಲಿಗೆ ಬಂದು ನಖರೇಖೆಯ ಕಂ
ಡೆಳ ಸಸಿ ಯೆಂದಂಜಿದುದು ॥ ೧೦೮

ಇಂತೊಪ್ಪುತಿಹ ನಾರಿಯರು ನಂದನದಲ್ಲಿ
ಕಂತುವ ಕೂರಾಳ್ಗಳಂತೆ ।
ಸಂತೋಷದಲಿ ದೋಹಳಗೈದು ವರ ಪ್ರಾಣ
ಕಾಂತರ ಬಳಗೈದಿದರು ॥ ೧೦೯

ತಳರ್ವನ ಪುಷ್ಪ ಮಂಟಪ ದಿವ್ಯ ಪುಳಿನ
ಸ್ಥಳಗಳಿಗಿಸಿಯರನೊಯ್ದು ।
ನಳಿನಾಸ್ತ್ರನಾಹವಗೈದು ಸಂತಸದಲಿ
ತಳರ್ದರು ಪುರ ಗೃಹಗಳಿಗೆ ॥ ೧೧೦

ಈ ಪರಿ ಕೇಳೀನಂದನ ನವ ಪುಷ್ಪ
ಚಾಪನ ಬಂಡಾರದಂತೆ ।
ರೂಪು ವಡೆದು ಮೆರೆದುದು ಬಹುವಸ್ತು ಕ
ಲಾಪವನೀಯುತ ಜನಕೆ ॥ ೧೧೧

ಮಂಗಳ ಭೂ ವೈಕುಂಠವಾಗೊಪ್ಪುವ
ರಂಗ ಪಟ್ಟಣದ ವರ್ಣನೆಯು ।
ಹಿಂಗದೆ ವಿಸ್ತರಿಸಲ್ಲಿಗೈದನೆ ಸಂಧಿ
ಕಂಗೊಳಿಸುವ ಸಂಬಂಧಿ ॥ ೧೧೨

೫ನೆಯ ಸಂಧಿ ಸಮಾಪ್ತಂ.

# ೬ ನೆಯ ಸಂಧಿ.

## ಶ್ರೀರಂಗ ಪಟ್ಟಣ ವರ್ಣನೆ.

ಸೂಚನೆ—ಪೊಡವಿಗಧಿಕ ಶ್ರೀ ರಂಗ ಪಟ್ಟಣದೊಂದು
ಕಡು ಚಲುವಿಕೆಯ ಬಣ್ಣಿಸುವೆ ||

ಮೃಗವಾಹನನ ನಂದನನ ರಣದ ಸೆರೆ
ಬಿಗಿದನ ಪಿತನನುಜನಿಗೆ |
ತೆಗೆಯದುಂಬಳಿಯಿತ್ತ ದೇವನ ಸಿರಿಪದ
ಯುಗವ ಭಜಿಪೆ ಮುದದಿಂದ || ೧

ಬಾಲಸೂರ್ಯನ ಕಿರಣವ ಜರೆದತುಳ ವಿ
ಶಾಲದೊಳಾ ಪುರವರದ |
ಶಾಲಾವೀಧಿಗಳೆಸೆದುವು ನವರತ್ನ
ಜಾಲದ ದೀಧಿತಿಯಿಂದ || ೨

ವರ ತ್ರಿದಶರಿಗಾಸ್ಪದವಮರಾಪತಿ
ಹರಸಖ ಪುರ ಗುಹ್ಯಕರ |
ಧರಿಸಿಹುದೆಂದವ ಜರೆದು ಭೂತಳದೆ ಸುಂ
ದರವಾಗೆಸೆವುದು ನಗರ || ೩

ಅಗಲಕೆ ಭೂಮಂಡಲ ಕಿರಿದುಬ್ಬಲು
ಮಿಗೆ ತಾಳವಷ್ಟದಿಕ್ಕೆಂದು |
ನಗುತಾಗ ಮೇಲಕ್ಕೆ ಬಳೆದೋಲು ಹೊಂಗೋಂಟೆ
ಗಗನ ಮಂಡಲವ ಮುಟ್ಟಿಹುದು || ೪

ದೆಸೆಯರ್ಣ್ಮರ ಪುರಪಿದಕಣೆ ಯಿಲ್ಲೆಂದು
ನಸುನಗೆ ಪುರಲಕ್ಷ್ಮಿ ಯುವಳ ।
ದಶನಪಙ್ಕ್ತಿಗಳ ಚೆಲ್ವನೆ ಕೋಟೆಯಾತೆನೆ
ಯೆಸೆದುವು ಕಣ್ಗೆ ರಾಜಿಸುತ ॥ ೫

ಪುರದರಸಿನ ಜಯಾಂಗನೆ ತನ್ನ ಮಂಗಳಾ
ಭರಣವನಿರಿಸಲು ಸಮೆದ ।
ಪಿರಿದು ವಜ್ರದ ಕರಂಡಗಳನೆ ಕೊತ್ತಲ
ಮೆರೆದುವು ಚೌ ದೆಸೆಯೊಳಗೆ ॥ ೬

ಪುರವೆಂಬ ಸರಸಿಯೊಳೊಗೆದ ತಾವರೆಗಳು
ತರಣಿಮಂಡಲವ ನೋಡುವೊಡೆ ।
ನೆರೆ ವಾಯುಪಥವಡರ್ದೊಲು ಮುಗಿಲಿಟ್ಟಣೆ
ಮೆರೆದುವಾಗಸವ ತುಡುಕುತ ॥ ೭

ಅಂಬರಚರಿಯುಗಸೀ ಪಟ್ಟಣದೊಂದು
ಸಂಭ್ರಮವನು ನೋಡಿ ಯೆನುತ ।
ಕುಂಭಿನಿ ಕೈ ನೀಡಿ ಕರೆವೋಲು ಡೆಂಕಣಿ
ಮುಂ ಬರಿದೆಸೆದುತ್ರಿರ್ಯುಲಿ ॥ ೮

ಗಗನಗಂಗೆಯು ಕಾಲುವೆ ಬಲುಮಾರ್ಗದೆ
ಸೊಗಸುತ್ತೈತಂದೊಪ್ಪಿದಂತೆ ।
ಮುಗಿಲ ಮುಟ್ಟುವ ಕೋಟೆದೆಸೆಯೆಡೆ ಪಟಗಳು
ಝುಗಝುಗಿಸಿದುವು ಶುಭ್ರದಲಿ ॥ ೯

ಹರಿಗೆ ಹಾಸಿಗೆ ಯಾಗ ಬೇಕೆಂದು ಪಾತಾಳ
ಪುರದಿಂದಲುರಗೇಂದ್ರ ಬಂದ ।
ಪರ ಮಾರ್ಗ ದ್ವಾರವಿದೆನೆ ಬಲು ಘಾತದೆ
ಮೆರೆದುವಗಳಪೇನೆಂಬೆ ॥ ೧೦

ಶಾಲಾ ವೀಥಿಯು ಬಳಸಿ ಕೊಂಡತುಲ ವಿ
ಶಾಲದೊಳಾ ಪಟ್ಟಣದ ।
ಆಳುವೇರಿಗಳಸೆದುವು ನೋಳ್ಪ ಜನರ ಕ
ಣ್ಣಾಲೋಕನಕಿಸಿದಾಗಿ ॥ ೧೧

ನೆಲೆ ನಮಗಳುಕಿ ಚಂದ್ರನ ಮರೆ ಹೊಗೆ ತಮ್ಮ
ಭರದೆ ನುಂಗದೆ ಬಿಡೆವೆನುತ ।
ಪಿರಿದು ಬಾಯ್ದೆರೆದಾಗ ಶತಿಯೊರಳಗೆ ಪಾರು
ತ್ತಿರುವೊಲು ಹುಲಿ ಮುಖ ಪಿಡುವು ॥ ೧೨

ಆ ಪುರದತುಳ ಭಾಗ್ಯ ಕೀರ್ತಿಯು ನಗುತಾಗ
ಗೋಪತಿಗರಪುವಂದದಲಿ ।
ತಾ ಪಿರಿದಾಗಿ ಬಾಗಿಲ ಸೆಜ್ಜೆ ಯುಭ್ರವ
ವ್ಯಾಪಿಸಿದುವು ಶುಭ್ರ ವಿಡಿದು ॥ ೧೩

ಪಿರಿದು ಗೋಪುರ ನಗೆ ಮೊಗ ಹರ್ಮ್ಯ ನೆಲೆ ಮೊಲೆ
ಮೆರೆವ ಕೊತ್ತಳ ಪೊರವಾರು ।
ಸುರುಚಿರ ಪೊಂಗೋಂಟೆ ಮೇಖಳೆ ಪುರವೆಂಬ
ತರುಣಿ ಯೊಪ್ಪಿದಳು ಭಾಗ್ಯದಲಿ ॥ ೧೪

ಪುರಕ್ಕೈದಿ ಬಹ ರಿಪು ಜಲಧಿಯನುಸಿಗ್ಗರ್ಜಿ
ನುರುಹೆಂದು ಪಲವು ಬಾಡಬರ ।
ಪರಮೇಷ್ಠಿ ನಿರ್ಮಿಸಿ ಕಳುಹಿದ ತೆರದಂತೆ
ಮೆರೆದುವು ಬಲು ಶತಘ್ನಿಗಳು ॥ ೧೫

ರಣ ಪೀತಿಹೋತ್ರನುಗಿಗಳೊ ಭರ್ಗನ ನೆರೆ
ಪಣೆ ಗಣ್ಣ ನುರಿಯು ಸಂಗಿಗಳೊ ।
ಸೆಣಸುವಧಟರ ನುಂಗಿಗಳನ್ನಲೆಸೆದುವು
ಗಣನೆ ಯಿಲ್ಲದ ಪಿರಂಗಿಗಳು ॥ ೧೬

ನರ ಸುಧನ್ವನ ಶಿರಕೆಚ್ಚ ಮೂರ್ತಿ ತ್ರಯ
ವೆರೆದ ಶಕ್ತಿಯ ತೆರದಂತೆ ।
ಪುರದ ಕೋಟೆಯ ಸುತ್ತಣ ಕೊತ್ತಳಗಳೊಳು
ಮೆರೆದುವು ಬಲು ಪಿರಂಗಿಗಳು ॥ ೧೭

ರಾಮ ಬಾಣವು ಭೂತ ನಾಥ ಲಂಕೆಯ ಸಿ
ಧೂರ್ಮ ಧಾಮನು ಹನುಮಂತ ।
ಚಾಮುಂಡಿ ಸಿಡಿಲ ಜಂಗುಳಿ ಮೇಘನಾದ ನಿ
ಸ್ಸೀಮ ಪಿರಂಗಿಗಳಿಹುವು ॥ ೧೮

ಕೋಟೆ ಕೋಲಾಹಲ ಕಲಿ ವೀರ ಭದ್ರನು
ಲೂಟಿಯ ರಣ ಭೈರವನು ।
ಮಾಟಿನ ರಂಗ ನಾಥನು ವೈರಿ ಭಟ ಕುರು
ಹಟದ ಬಲು ಗೋವಿ ಯಿಹುವು ॥ ೧೯

ಒಡ್ಡಿದ ಶೂಲ ವರಾಹನ ತಲೆ ನೂಕು
ವಡ್ಡ ವಲಗೆ ಕವಣೆಗಳು ।
ಅಡ್ಡಾಯುಧ ಗರಗಸ ಮೊನೆ ಗಲ್ಲು ಕ
ಣ್ಗೆಡ್ಡವಾಗಿಯೆ ರಾಜಿಸಿಹುವು ॥ ೨೦

ಚೇಳು ಬಾಣಗಳ ರಾಟಳ ಪುರಿ ಪೊಟ್ಟಣ
ವೇಳುವ ಜಂತ್ರದ ದಗಳು ।
ತೂಳುವ ಗುಂಡು ಗಲ್ಗಳ ರಾಸಿ ಪಟ್ಟಣ
ದಾಳುವೇರಿಯ ತುಂಬಿಹುವು ॥ ೨೧

ವಿಷದ ಚೀಗೊರ್ಳವೆ ಮುಳಲ ರಾಸಿ ಯುಕ್ಕಿನ
ಮುಸಿವಲಗಿನ ಸಾಲ ಸಬಳ ।
ಎಸೆವ ಕೀಲಾಯುಧ ಬಲಿದಡ್ಡಣದೊಳೆ ಕ
ಣ್ಗೆಸೆದುವು ತೆನೆಯ ಸಂದಿನಲಿ ॥ ೨೨

ಪುರದ ಸಂವರಣೆಯು ನೋಡಲಮ್ಮದೆ ಯಂಜಿ
ಸುರ ನಾಥ ಸ್ವರ್ಗಕ್ಕೈದಿದನು ।
ಉರಗೇಂದ್ರ ಪಾತಾಳದೆ ಮರಸಿದ ಮಿಕ್ಕ
ಕಿರುಮಾನಿಸರ ಪಾಡೇನು ॥ ೨೩

ಇಂತಪ್ಪ ಪುರದ ಚೌದೆಸೆಯು ಬಾಗಿಲುಗಳ
ಮುಂತಿಹ ಚಾವಡಿಗಳಲಿ ।
ಪಂತದೊಳಗೆ ದಿವ್ಯಾಯುಧಗಳನಾಂತು
ಹೊಂತ ಕಾರಿಗಳು ಕಾದಿಹರು ॥ ೨೪

ಧುರದೊಳು ವೈರಿ ಭೂಪಾಲರ ಖಂಡಿಸಿ
ಹರುಷದಿಂದಲಿ ಸೆಳೆ ತಂದ ।
ಬಿರುದಿನ ತುರಗಗಳನು ಕಟ್ಟಿಹ ಲಾಯ
ಪರಿ ಶೋಭಿಸಿದುವು ಪಟ್ಟಣದೆ ॥ ೨೫

ಸಂಗರದೊಳು ಮಧುರೆಯ ನೃಪ ಬಲವನು
ಭಂಗಿಸಿ ಮುರಿಯಿರಿದಾಗ ।
ಹಿಂಗದೆ ಸೆಳೆ ತಂದ ದಿವ್ಯಾಶ್ವಗಳ ಲಾಯ
ಕಂಗೊಳಿಸಿದುವು ಪಟ್ಟಣದೆ ॥ ೨೬

ಬೇಲೂರು ನರಸಿಂಹಪುರ ಮುಂತಾದ ಭೂ
ಪಾಲರು ಶರಣು ಹೊಕ್ಕಾಗ ।
ಮೇಲೆ ಕಾಣಿಕೆ ಯಿತ್ತ ಬಲು ತೇಜಿಗಳಿಹ
ಸಾಲು ಲಾಯಗಳೊಪ್ಪಿಹುವು ॥ ೨೭

ನರ ರಕ್ಕಸರನಿರಿದೋಡಿಸಿ ಪಿಡಿತಂದ
ಸುರ ಮದ ಗಜದ ಶಾಲೆಗಳು ।
ಮೆರೆದುವು ಪೂರ್ವ ದಿಕ್ಕಿನ ಬಾಗಿಲ ಬಳಿ
ಯುರುತರೋನ್ನತದಿಂದಲಾಗ ॥ ೨೮

ಧುರದೊಳು ಮಧುರೆಯ ತಿರುಮಲ ನಾಯಕ
ನುರುವಾಹಿನಿಯ ಮುರಿದಿದ |
ಹರುಷದೆ ಪಿಡಿದಾನೆಗಳ ಶಾಲೆ ಮೆರೆದುವು
ಪುರದೊಳಗೇನೆಂಬೆನಚ್ಚರಿಯ || ೧೯

ತುಂಗ ಚಂಗಳ್ವಾಧಿಪನು ಕದನದೆ ಸೋತು
ಕಂಗೆಟ್ಟು ಕಾಣಿಕೆ ಯಿತ್ತ |
ಮಂಗಲ ಗಜ ಶಾಲೆ ಮೈಸೂರ ಬಾಗಿಲ
ಮುಂಗಡೆಯೊಳಗೊಪ್ಪಿದುದು || ೨೦

ಭುಜ ಬಲಾನ್ವಿತರಾದ ತೆಲುಗು ಭೂಪಾಲರ
ತ್ರಿಜಗ ಮೆಚ್ಚಲು ಗೆದ್ದು ತಂದ |
ಗಜ ಘಟೆಗಳ ಶಾಲೆಗಳೊಪ್ಪಿದುವಾಗ
ವಿಜಯಾ ಪುರದ ಬಾಗಿಲೆಡೆಯ || ೨೧

ಕೊಡಗು ಕೊಂಕಣ ಕೊಂಗ ಮಲೆಯಾಳ ರಾಜ್ಯದ
ಬಡಿ ಹೋರಿಗಳು ಮನ ನಡುಗಿ |
ಒಡನೆ ಕಾಣಿಕೆಯನಿತ್ತಾನೆಯ ಸಜ್ಜಾರ
ನಡು ಕೇರಿಯೊಳಗೊಪ್ಪುತಿಹುದು || ೨೨

ಜಲ ಪಾನಕ್ಕೈದುವ ಕುದುರೆಯ ಸಾಲುಗಳ್
ಬಲು ತೆರೆ ಬೆಳುಗೊಡೆ ನೊರೆಯು |
ಕೊಳಿಸ ಚಾಮರ ಶಫರಿಗಳಾಗಲಾ ಪುರ
ಜಲ ರಾಶಿಯಂತೆ ರಾಜಿಸಿತು || ೨೩

ವಸು ಗೇಹವಪ್ಸರವಾಸ ಸೌರಭ್ಯದ
ರಸದೇಳಿಗೆ ಹರಿ ಲೀಲೆ |
ಪಸರಿಸಿ ಮೆರೆಯಲಾ ಪುರವಮರಾವತಿ
ಯೊಸಕದಿಂ ಮಿಗೆ ರಂಜಿಸಿತು || ೨೪

ಸುರ ನದಿ ಕಾಳಿಂದಿ ಶೋಣಭದ್ರೆಯರೊಡ
ನಿರದೈದಿ ಪುರವ ನೋಳ್ಪಂತೆ ।
ವರ ಮೌಕ್ತಿಕ ಹರಿ ನೀಲ ಪವಳಗಳ
ಸು ರುಚಿರ ವೀಧಿ ಯೊಪ್ಪಿದುವು ॥ ೩೫

ಪೊಡವಿಪ ಪುರ ಲಕ್ಷ್ಮಿಗೆ ಮಂಗಳೋತ್ಸವ
ಕೊಡನೆತ್ತಿದಾ ಬೆಳ್ಗೊಡೆಗಳ ;
ಸಡಗರದಂತೆ ಶುಭ್ರದ ಸಾಲು ಸೆಜ್ಜೆಗ
ಳ್ಕಡು ಚಲುವಿಕೆಯ ಬೀರಿದುವು ॥ ೩೬

ಬಾಲಾರ್ಕ ಬಿಂಬದೀಳಿಗೆಯಿಂದ ಪೂರ್ವ ದ
ಶೈಲವ್ರು ಬಹು ರೂಪ ತಾಳೆ ।
ಮೇಲೊಪ್ಪುವಂತೆ ಚಿನ್ನದ ಕಲಶಗಳಿಂದ
ಸಾಲುಪ್ಪರಿಗೆಗಳೊಪ್ಪಿದುವು ॥ ೩೭

ಪರಿಮಳೋತ್ಸವಕ್ಕೈದುವನಿಲರಾಜನಿಗಾಗ
ನೆರೆ ಶುಭ್ರ ಮೇಘ ದಂತಿಯನು ।
ಹರುಷದೆ ಸಿಂಗರ ಗೈದೊಲು ಟೆಕ್ಕೆಯು
ಮೆರೆದುವು ಹರ್ಮ್ಯಾಗ್ರದೊಳಗೆ ॥ ೩೮

ಕನಕ ಶೈಲದೆ ಮೂಡಿ ಶುಭ್ರ ಮೇಘವ ಪೊ
ಕ್ಕನಿಮಿಷ ಪತಿ ಚಾಪದಂತೆ ।
ಮನೆ ಮನೆಗಳೊಳು ಮಂಗಳ ರತ್ನ ಮಯವಾದ
ವಿನುತ ತೋರಣಗಳೊಪ್ಪಿದುವು ॥ ೩೯

ಶಶಿ ತನ್ನಗ್ರಜೆ ಯೀ ಪುರದೊಳು ಮೆರೆ
ದೆಸೆವಳು ನೋಡು ಹೋಗೆಂದು ।
ಪೊಸ ಕೌಮುದಿಯನಟ್ಟಿದೊಲು ಶುಭ್ರನವಸುಧಾ
ರಸ ಲಿಪ್ತ ಮಾಳಿಗೆಗಳಿಹುವು ॥ ೪೦

ಆರು ಶಾಸ್ತ್ರವು ನಾಲ್ಕು ವೇದ ಪುರಾಣದ
ಸಾರಾರ್ಥವ ನಿರ್ಣೈಸಿ ।
ತೋರಿ ವಾಚಿಸುವ ಬ್ರಾಹ್ಮಣ ವೀಧಿ ಬಹು ಶೃಂ
ಗಾರದೆ ಮೆರೆದುವರ್ತಿಯಲಿ ॥ ೪೧

ಲಕ್ಷ್ಯ ಲಕ್ಷಣ ಪದ ಕ್ರಮದಿಂದ ಕ್ಷಣದಲ್ಲಿ
ಯಿರಾಕ್ಷಿಸಿ ಕಾವ್ಯ ನಾಟಕವ ।
ಅಣಿಯರಿತುಸಿರುವ ಕವಿಗಳ ವೀಧಿ ಸಂ
ದಣಿಸಿಹುವಾ ಪುರದೊಳಗೆ ॥ ೪೨

ಮೇರು ಹಿಮಾದ್ರಿಗಳರಡನು ಸೇರಿಸಿ
ಪಾರೀಣ ಮಂತ್ರ ಬುದ್ಧಿಯಲಿ ।
ಓರಂತೊಂದು ಗೂಡಿಪ ಮಂತ್ರಿಗಳ ಶೃಂ
ಗಾರ ಗೃಹಗಳೊಪ್ಪಿದುವು ॥ ೪೩

ಸಲೆ ಚಿತ್ರಗುಪ್ತರ ಲೆಕ್ಕವ ಟಿಕ್ಕರಿ
ಗಳೆದು ಲೆಕ್ಕದೆ ಶೂರರೆನಿಪ ।
ಲುಳಿಯಲಿ ವಾಚಿಸುತಿಹ ಕರಣಿಕ ಕುಲ
ತಿಲಕರ ಗೃಹವಿರುತಿಹುವು ॥ ೪೪

ದೊರೆಗಳ ಮನವಲಿ ನೆನೆದ ಜಾತ್ಯುತ್ತರ
ಬಿರವ ತಿಳಿದು ನಿಮಿಷದಲಿ ।
ಬರೆದೋದುತಿಹ ನೆರೆ ವಿದ್ವಾಂಸರುಗಳ
ಸು ರುಚಿರ ಗೃಹಗಳೊಪ್ಪಿದುವು ॥ ೪೫

ಭುವನದ ಬಡವರ ಬಿನ್ನಹವನು ತಂ
ದವನೀಶ್ವರರಿಗೆ ಪೇಳಿ ।
ತವಕದೆ ಕಾಣಿಸಿ ಯಿಷ್ಟಾರ್ಥಗೊಡಿಸುತಿ
ರ್ಪವರ ಕೇರಿಗಳೊಪ್ಪುತಿಹುವು ॥ ೪೬

ಸಕಲ ರುಜೆಯು ಕೆಡಿಪೌಷಧಿಗಳನಿತ್ತು
ಸುಖವ ಪುಟ್ಟಿಸಿ ಸರ್ವ ಜನಕೆ ।
ಅಕಳಂಕರೆನಿಸಿ ಮೆರೆವ ಘನ ವೈದ್ಯರ
ನಿಕರದ ಕೇರಿ ಯೊಪ್ಪಿದುವು ॥ ೪೭

ಗಾಯಕ ನಟ ನಾಯಕ ವಿ ಹಾಸಕ
ಧೀ ಯುಕ್ತರಹ ವಿನೋದಿಗಳ ।
ಆಯತವಡೆದ ಕೇರಿಗಳೊಪ್ಪಿ ಮೆರೆವ ಸು
ದಾಯುವನೇನ ಬಣ್ಣಿ ಪೆನು ॥ ೪೮

ಸಲೆ ಬೀದಿ ಬೀದಿ ಯೊಳಗೆ ಮಂಗಳೋತ್ಸವ
ಕುಲ ಶುಭ ಶೋಭನಗಳೊಳು ।
ಒಲಿದು ಪಾಡುತ ಚರಿಸುವ ಪುರಂಧ್ರಿಯರಿಂದ
ಪೊಳಲೊಪ್ಪಿತತಿ ಸೊಬಗಿನಲಿ । ೪೯

ನೆರೆ ಯಗ್ನಿ ಹೋತ್ರದಾಜ್ಯಾಹುತಿಗಳ ಕಂಪು
ಪರಿ ಪರಿ ಕಜ್ಜಾಯಗಳ ।
ಪರಿಮಳದಿಂಪು ಬೀದಿಯೊಳಡೆಯಾಡುತಿ
ಪ್ಪರ ಮುಖಾಬ್ಜಕೆ ತೀಡುತಿಹುದು ॥ ೫೦

ಮೆರೆವ ನಾನಾ ಬಗೆವಸ್ತುಗಳನು ವಯೆ
ಮೆರೆಸುತೆ ಧರ್ಮ ಮಾರ್ಗದಲಿ ।
ಕರೆ ಕರೆದಾಕ್ಷಣ ಕ್ರಯಕೀವ ಹರದರ
ಸು ರುಚಿರ ಗೃಹಗಳೊಪ್ಪಿದುವು ॥ ೫೧

ಅಕ್ಕರೊಳಗೆ ಬಹು ಬಗೆಯ ಧಾನ್ಯಗಳನು
ಚೊಕ್ಕಟವಾಗಿಯೆ ಬೆಳೆದು ।
ಎಕ್ಕತುಳದೆ ಧರ್ಮ ಮಾರ್ಗದೆ ರಾಜಿಸು
ವೊಕ್ಕಲಿಗರ ಕೇರಿ ಯಿಹುವು ॥ ೫೨

ತವೆ ಕ್ಷುದ್ಬಾಧೆಯೊಳ್ಯೆತಹ ಚರ ಲಿಂಗ
ನಿವಹವ ಕರೆ ಕರೆದೊಯ್ಯು |
ತವಕದೆ ಮೃಷ್ಟಾನ್ನವಿಕ್ಕಿ ರಾಜಿಸುತಿಹ
ಶಿವ ಭಕ್ತರ ಕೇರಿ ಯಿಹುವು || ೫೩

ಗಂದಿಗ ಬೋಗಾರ ತಿಲಗಾತಕ ನಾ
ಯಿಂದರ ತಾಮ್ರ ಮರ್ದಕರ |
ಮುಂದೊಪ್ಪುತಿಹ ಮಲ್ಲ ಜಾಲಗಾರರ ಗೃಹ
ಚೆಂದದಿಂದೊಪ್ಪಿದುವಾಗ || ೫೪

ಮೆರೆವ ಚಿತ್ರಿಗ ನಾನಾ ಬಗೆ ದುಗುಲವ
ವಿರಚಿಸುತಿಹ ಸೇಲಿಗರ |
ಸಿರತಾಳಿ ಜೋಡು ಪೈಠಣಿಗಳ ಹೊಲಿಗೆಯ
ಗರುವ ಚಿಪ್ಪಿಗಗೇರಿ ಯಿಹುವು | ೫೫

ತಾಳ ಧಾರಿಗ ಮದ್ದಳಿಗ ನಾಗಸರ ಮುವುರ
ಯಾಳಾಪಿಗ ನಟುವಿಗರ |
ಹೇಳಲಳವೆ ಜೋಗಿಗ ಮುಚ್ಚಿಗರ ಗೃಹ
ಸಾಲು ವಿಡಿದು ರಾಜಿಪುವು || ೫೬

ದೀವಟಿಗರು ಕೊಟ್ಟಿಗೆಯರು ವರ ತುರ
ಗಾವಳಿಗಳ ನೆರೆ ಪಿಡಿವ |
ಕೋವಿದ ನಿವಹ ಗಜಾರೋಹಕರ ಗೃಹ
ತೀವಿಹುವಾ ಪಟ್ಟಣದೆ || ೫೭

ಹರಿ ಹಯನಶ್ವದಂದದ ತೇಜಿಗಳನೇರಿ
ನೆರೆ ತೊಲಗುಭಯ ವೀಥಿಗಳ |
ಪರಿಸುವ ಬಿರುದಿನ ರಾಯ ರಾವುತರ ಸಿಂ
ಗರವಾಂತ ಕೇರಿ ಯೊಪ್ಪಿಹುವು || ೫೮

ಕಡು ಗಲಿ ಕಾಲ ರುದ್ರನ ಪಣೆ ಗಣ್ಣಿನ
ಕಿಡಿಗಳ ಗಡಣದಂದದಲಿ ।
ಜಡಿವ ಬತ್ತೀಸಾಯುಧಗಳ ಸು ಭಟರ
ಬಿಡಗಿನ ನಿಕರ ವೊಪ್ಪಿಹುವು ॥ ೫೯

ಅಂಟಿದ ಜಗಳದೊಳಗೆ ಪೂರ್ಬಲವನು
ಪಂಟಿಸಿ ಮುರಿಯಿರಿದಾಗ ।
ಬಂಟಂಗದಲಿ ಮೆರೆದರ ಕೇರಿ ಯೆಸೆದುವು
ವೊಂಟೇರಿಗಾರ ನಾಯಕರ ॥ ೬೦

ಕಟ್ಟಾಣಿ ಮುತ್ತಿನ ಚೌಕುಳಿ ಕೊರಳೊಳ
ಗಿಟ್ಟ ಪದಕ ಚಂದ್ರ ಹಾರ ।
ತೊಟ್ಟ ದುಗುಲದ ಸ್ವೈರಣೆಯೊಳಗದವರ
ಪಟ್ಟೆಸಕದ ಕೇರಿ ಯಿಹುವು ॥ ೬೧

ಶೂರರ ನೀತಿ ವಿಹಾರ ಸದ್ಗುಣ ಗಣ
ಸಾರರ ಸಲೆ ಕಲಾವಿದರ ।
ವೀರ ವೈಷ್ಣವರ ಸರ್ವಜ್ಞರ ಬಹು ಶೃಂ
ಗಾರದ ಕೇರಿ ಯೊಪ್ಪಿಹುವು ॥ ೬೨

ಇಂತೊಪ್ಪುತಿಪ ರವಿ ಶಶಿ ವೀಧಿಗಳೊಳ
ತ್ಯಂತ ಸೌಖ್ಯವನೀಯುತಾಗ ।
ಸಂತತ ಸೌಭಾಗ್ಯ ಸಿದ್ಧಿಯೊಲಂಗಡಿ ಗೇರಿ
ಮುಂತೆಸೆದುದು ಚೆಲ್ವಿನಿಂದ ॥ ೬೩

ಉರ್ವೀ ಜನರಿಗಿಷ್ಟಾರ್ಥದಾಗರ ಸಿರಿ
ಪರ್ವಿ ಕೊಂಡಿಹ ಸುಖ ಶಾಲೆ ।
ಉರ್ವಿಗೆ ಸೊಬಗಾಂತತುಳ ವೈಭವದೆ ಸು
ಪರ್ವಾಣ ಪುರವ ನಗುವುದು ॥ ೬೪

ಹರ ಸಖ ನವ ನಿಧಿಗಳನೀ ಪುರದೊಳ
ಗಿರಿಸಿದನೆಂಬಂದದಲಿ ।
ಪಿರಿದೆನಿಸುವ ಹೊನ್ನ ರಾಸಿಗಳಿಂ ಚಿನ್ನ
ವರದರ ಮಳಿಗೆ ಯೊಪ್ಪಿದುವು ॥ ೬೫

ಬಿಳಿ ಮುತ್ತು ಕೆನ್ನೀರ ಮುತ್ತು ಕಟ್ಟಾಣಿ ಮು
ತ್ತಾಳವಟ್ಟ ಮೂಕುತಿ ಮುತ್ತು ।
ತೊಳಗುವ ಕಂಠ ಮಾಲೆಯ ತೋರ ಮುತ್ತಿನ
ಮಳಿಗೆಗಳಸೆದುವರ್ತಿಯಲಿ ॥ ೬೬

ಸಣ್ಣ ಪವಳ ಕೈ ಕಟ್ಟಿನ ಪವಳಗ
ಳ್ಬಣ್ಣ ಸರದ ಜಾತಿ ಪವಳ ।
ತಿಣ್ಣವಡೆದ ಪವಳದ ಪಸರಗಳಾಗ
ಕಣ್ಣ ಕೊಕ್ಕರಿಸುತೊಪ್ಪಿದುವು ॥ ೬೭

ನೀಲದ ಸರ ಮಾಣಿಕದ ಕುಚ್ಚು ವಜ್ರದ
ಮೇಲು ಗೊಂಚಲು ವೈಡೂರ್ಯ ।
ಡಾಳಿಸುತಿಹ ಬಲು ಪಸರದಂಗಡಿಗಳು
ಸಾಲು ಗೊಂಡೆಸೆದುವೇ ವೇಳ್ವ ॥ ೬೮

ಮಿಂಚುವ ಪರಿವಾಣ ಚೆಂಬು ಗಿಂಡಿಗಳು ಸಾ
ಲಂಚಿನ ಮಜ್ಜನ ಸಾಲೆ ।
ಪಂಚಾರತಿ ಗಂಟೆಗಳಿಂದ ಮೆರೆದುವು
ಕಂಚು ಗಾರರ ಪಸರಗಳು ॥ ೬೯

ಪಟ್ಟೆಯ ಸುರುಳು ಸೂರಿಯ ಪುಟ ಹೊಸ ಹೊನ್ನ
ದಟ್ಟ ಬಿಳಿಯ ದುಕೂಲಗಳ ।
ಪೆಟ್ಟಿಗೆಗಳ ಚೆಲುವಾಂತ ಮಳಿಗೆಗಳು
ದಿಟ್ಟಿಗಚ್ಚರಿಯ ಬೀರಿದುವು ॥ ೭೦

ಹಳದಿ ಪೊಪ್ಪಳಿ ಚಂದ್ರಗಾವಿ ಬೊಂಬೆಯ ಬಣ್ಣ
ಸುಲಿ ಪಲ್ಲ ಹೊನ್ನ ತಗಡಿನ ।
ಬಿಳುವಟ್ಟೆ ನಾನಾ ವರ್ಣದ ಜವಳಿಯ
ಮಳಿಗೆಗಳೆಸೆದುವರ್ತಿಯಲಿ ॥ ೭೧

ನರಸಿಂಹನವತಾರದ ದಿವ್ಯ ಪುರುಷನೀ
ಗರಸಾಗಲೀ ಪಟ್ಟಣಕೆ ।
ಧರಣಿ ನಾನಾ ವಿಧ ಧಾನ್ಯವನೊದಗಿಪ
ದರಿದಲ್ಲವೇನ ಬಣ್ಣಿಸುವ ॥ ೭೨

ಕರೆದರಾ ಯೆನುತಾಗ ಸಿರಿ ದೇವಿ ಯಾಪುರ
ದರಸಿನ ಮಂದಿರದೊಳಗೆ ।
ಸ್ಥಿರವಾಗಿ ನೆಲಸಿಹಳಂಗಡಿ ಗೇರಿಯ
ಪಿರಿದು ಭಾಗ್ಯವನೇನನೆಂಬ ॥ ೭೩

ಪೊಗಳಲಳವೆ ನಾನಾ ಬಗೆ ವಸ್ತುಗ
ಳಗಣಿತವಾದಂಗಡಿಗಳು ।
ಮಿಗೆ ರಾಜಿಸುತ್ತಿರ್ದುವಾ ಪಟ್ಟಣದೊಂದು
ಸೊಗಸನದೇನ ಬಣ್ಣಿಪೆನು ॥ ೭೪

ಮೇಲೆ ರಾಜಿಸುತಿಹ ಶಶಿ ರವಿ ವೀಧಿಯ
ಸಾಲ ಸಜ್ಜೆಗಳ ಬಾಗಿಲಲಿ ।
ನೀಲ ಕುಟ್ಟಿಮದರವಟ್ಟಿಗೆಯೊಳುನೀರ
ಬಾಲೆಯರೆರೆಯುತೊಪ್ಪಿದರು ॥ ೭೫

ಶಶಿ ಕಾಂತ ಕಲಶದೆ ಚಂದ್ರ ಮುಖಿಯರಾಗ
ಪೊಸ ನೀರ ಪಥಿಕರಿಗೆರೆಯೆ ।
ಒಸರಲಾ ತಂಗಲ್ಲು ಕರಗಾದ ಜಲ ತಂ
ಣಸದೋರಿ ಶ್ರಮವಡಗಿಪುದು ॥ ೭೬

ಕಟ್ಟಾಣಿ ವೆಂಗಳು ಜಲ ಸೂಸೆ ಪಥಿಕರು
ದಿಟ್ಟ ಬಲ್ಮೊಲೆಗಳ ಮೇಲೆ ।
ನೆಟ್ಟರೆ ನೀಮುಱುಗಿಯಲು ಬಯಲಿಗೆ ಬಾಯ
ಬಿಟ್ಟಿರ್ದರೇನ ಬಣ್ಣಿಸುವೆ ॥ ೭೭

ಚಮರೆ ನೀನೆರೆವ ನೀರಿಂದೆನ್ನ ಹೃದಯದ
ಮದನನ ತಾಪವಳಿವುದೆ ।
ಅಧರಾಮೃತವನಿತ್ತು ವಿರಹದ ಶ್ರಮವನು
ಕದಲಿಸೆನುತ ಕೈಯ ಮುಗಿದು ॥ ೭೮

ಮೊಲೆಮೊಗಗಳ ಮೇಲೆ ನಟ್ಟಿರ್ದ ದಿಟ್ಟಿಯ
ನಲುಗಿ ಕೀಳುವ ತೆರದಂತೆ ।
ಜಲ ಧಾರೆಗೆ ಮನ ದಣಿದಾಗ ಪಥಿಕರು
ತಲೆಯನಲ್ಲಾಡಿಸುತಿಪರು ॥ ೭೯

ನಲಿದು ತಮ್ಮ ನಯನಗಳಲಿ ಚರಿಸಿ ನೆರೆ
ಬಳಲ್ದ ಪಥಿಕರಕ್ಷಿಗಳಿಗೆ ।
ಕಲಶ ಕುಚದ ಲಾವಣ್ಯಾಂಬು ವೆರೆಯುತ
ಜಲಜ ಲೋಚನೆಯರೊಪ್ಪಿದರು ॥ ೮೦

ಸವಿಯಲು ಸಂತೋಷ ಮದನನಾಗಮಕಿವು
ಸುವಿಲಾಸವೆಂದು ಬೆಳ್ಳಲೆಯ ।
ತವಕದೆ ಮಾರುವ ನೀಲಾಳಕಿಯರ
ನಿವಹವೊಪ್ಪಿದುದು ಬೀದಿಯಲಿ ॥ ೮೧

ಕತ್ತುರಿ ಸೇವಂತಿಗೆ ದುಂಡುಮಲ್ಲಿಗೆ
ಮೊತ್ತದ ಜಾಜಿ ಸಂಪಗೆಯ ।
ಇತ್ತರದಲಿ ಮಾಲೆ ಗಟ್ಟಿ ಮಾರುವ ಹೆಂಗ
ಳರ್ತಿಯನೇನ ಬಣ್ಣಿಸುವೆ ॥ ೮೨

ಮದನನ ಮೊದಲಂಬು ನಮಗೆ ಸೋಲದರೆದೆ
ಗವವನುಗಿದು ಧೈರ್ಯ ಗಿರಿಯು ।
ನುದುರು ಗುಟ್ಟುವುದೆಂದು ನಗುತೊರ್ವ ವಿಟನಿಗೆ
ಪದುಮದರಳನಿತ್ತಳಾಗ ॥ ೮೩

ಸಲ್ಲಲಿತಾಂಗಿ ಯೊರ್ವಳು ತನ್ನಯ ಸುಲಿ
ಪಲ್ಲ ಸಾಲ್ಗಳ ತೋರಿ ನಗುತ ।
ಮಲ್ಲಿಯ ಸರವಿದೆ ಕೊಳ್ಳೆಂದು ಬೆಲೆಗೊಂಡು
ನಿಲ್ಲದವನ ನಾಚಿಸಿದಳು ॥ ೮೪

ತರುಣಿಯೊರ್ವಳು ವಿಟನಿಗೆ ಸೋತು ಮಂದರ
ದರಳ ಮಾಲೆಯು ಪಿಡಿದಾಗ ।
ಕರದೊಳಂಬಿಡದೆ ಕಂಠದೊಳಿಕ್ಕೆ ಸನ್ನೆಯ
ನರಿವನದೇನು ಪ್ರವುದ್ಧನೊ ॥ ೮೫

ಲಲನೆಯೊರ್ವನ ಶಿಖೆಯೊಳು ಪುಷ್ಪ ಮಾಲೆಯು
ಸಲೆ ಧರಿಸುವ ನೆವದಿಂದ ।
ಮೊಲೆದುದಿಯೊಳಗಿರಿದವನೆದೆ ಧೈರ್ಯವ
ತೊಲಗಿಸುತಿರ್ದಳೇನೆಂಬೆ ॥ ೮೬

ಪರಿಮಳ ಪುಷ್ಪವ ಕೊಳ ಬಂದ ವಿಟನಿಗೆ
ಸರಸಿಜ ಮುಖಿ ಮನ ಸೋತು ।
ಸ್ಮರ ಬಾಧೆಯ ತವಿಸುವೊಡೆ ಕೆಂದಾವರೆ
ಯರಳಸಳ್ಳಣೆಗಿಟ್ಟಳವನ ॥ ೮೭

ಪುಣುಗು ಕಸ್ತೂರಿ ಕುಂಕುಮ ಸಿರಿಗಂಧವ
ಮಣಿ ವಟ್ಟಲೊಳು ಪದ ಮಾಡಿ ।
ಕ್ಷಣದೊಳು ಕ್ರಯಕೀವ ಗಟ್ಟಿವಳ್ಳಿಯರ ಸಂ
ದಣಿ ಮೆರೆದುದು ಬೀದಿಯೊಳಗೆ ॥ ೮೮

ಕುರುಳಲೆಯಲು ಕುಂಭ ಕುಚಗಳು ಕುಣಿಯಲು
ಹರಿ ಮಧ್ಯ ಬಳುಕುತಿರಲಾಗ ।
ಕರದ ಕಂಕಣ ಝಣ್ಣರೆನಲು ಗಂಧವ ತೀವೆ
ತರುಣಿ ರನ್ನೆಯರೊಪ್ಪಿದರು ॥ ೮೯

ಪರಿಮಳವನು ಕೊಳ್ವೊಡೆಳ ಹರೆಯದ ವಿಟ
ಬರಲಾತಗೆ ಮನ ಸೋತು ।
ಸ್ಮರ ಬಾಧೆಯ ಪರಿಹರಿಪೊಡೆ ಚೆಲುವನ
ಕೊರಳಗಿಟ್ಟಳು ಕಸ್ತೂರಿಯ ॥ ೯೦

ಅಂಗಜ ಹೆಂಗಳ ಸಿಂಗರ ವನದೊಳು
ತೊಂಗಿಸಿ ಮುನಿ ಮೃಗಾವಳಿಯ ।
ಜಂಗುಳಿಗೊಡ್ಡಿದ ಬೆಳ್ಳುರ ವಲೆಯೆನೆ
ಕಂಗೊಳಿಸಿತು ಸೂಳಗೇರಿ ॥ ೯೧

ಚರಿಸುವ ವಿಟರ ಕರಣವೆಂಬ ಖಗ ವಿಂಡ
ಗಿರದೊಡ್ಡಿದ ದೀಪವೆನಲು ।
ಮೆರೆದುದು ಸೂಳೆಗೇರಿಯ ಸಾಲು ಸಜ್ಜೆಯ
ಸುರುಚಿರ ಭವನಪಙ್ಕ್ತಿಯಲಿ ॥ ೯೨

ಗಿಳಿಯ ಪಂಜರ ಪಾರಿವಗಳ ಪೊಂಗೂಡು
ಕಳಕಂಠ ಕೇಕಿಯ ದೀಪ ।
ತೊಳಗುವ ಸೂಳೆಗೇರಿಯ ಸಾಲ ಭವನದ
ಮಳಿಗೆಗಳೊಳಗೆ ರಾಜಿಪುವು ॥ ೯೩

ಮುದದಿಂದ ರಾಜಿಸುತಿಹ ಮೋಹವೆಂಗಳ
ಸದನ ಪಙ್ಕ್ತಿಯ ಲೋವೆಯೊಳಗೆ ।
ಮದನ ವಿಲಾಸವ ತೋರ್ಪ ಪುತ್ತಳಿಗಳೊ
ಪ್ಪಿದುವತಿ ಚೆಲುವಿಕೆಯಿಂದ ॥ ೯೪

ಕುಸುಮಾಸ್ತ್ರ ತನ್ನಯ ಮೊನೆಯಾಳ್ಗಳಿದಿರಲಿ
ಮಿಸುಗುವರಿಲ್ಲೆಂದು ನಗುತ ।
ಜಸ ವೆಣ್ಣೆ ನಿಂದ ಕೈ ನೀಡಿ ಕೊಂಡಾಡಿಪ್ಪೊ
ಲ್ಪೊಸ ನೆಲೆ ಮಾಡ ವೊಪ್ಪಿದುವು ॥ ೯೫

ಎಡೆಯಾಡುವಂಗನೆಯರ ಪದದಳಿಗೆಂಪು
ಕೊಡಹಿದ ನಿಡುಮುಡಿಯಲರ ।
ನಿಡುಗಂಪು ತನುವಲ್ಲರಿಯ ತಂಪು ತೀವಿಕೊಂ
ಡಡಗಿಹುದಾ ಬೀದಿಯೊಳಗೆ ॥ ೯೬

ಗಿಳಿ ಸವಿನುಡಿ ಸ್ವರ ಗೋಗಿಲೆ ತನುವಲ್ಲಿ
ಯಲರು ಕಣ್ಣಡೆ ಮುಡಿ ಸೋಗೆ ।
ಕಲಹಂಸೆ ನಡೆ ನೆಲೆ ಮೊಲೆ ಚಕ್ರ ಕಾವನ
ಬೆಳ್ ವನವೆನೆ ಹೆಂಗಳಿಹರು ॥ ೯೭

ಕುರುಳಿಂದ್ರನೀಲ ಕಣ್ಣಡೆ ಶುಭ್ರ ಮೌಕ್ತಿಕ
ಮಿರುಗುವ ರದನ ಕೆಂಬರಳು ।
ಸ್ಮರ ಮಣಿಗಾರ ಪೂರುವ ರನ್ನ ವಸರದಂ
ತುರೆ ಮೆರೆದಿಹರಂಗನೆಯರು ॥ ೯೮

ನಗೆ ಮಲ್ಲಿಗೆ ಮೊಗ ದಾವರೆ ಕಣ್ಗಾಡಿ
ಸೊಗಸುವ ಕನ್ನೈದಿಲಾಗೆ ।
ಮುಗುಳಂಬನ ಮುಡಿಗಮರಿದ ಪರಿಮಳ
ವೊಗುವ ಪೂದೊಂಬೆಯಂತಿಹರು ॥ ೯೯

ಪಡುಗೆಂಪು ಚಂದ್ರಗಾವಿಯ ಸೀರೆ ಕೆಂಬಲ್ಲ
ಗಡಣ ಕೆಂದಾರೆಗಳಾಗೆ ।
ಮಡದಿಯೊರ್ವಳು ಬಾಗಿಲಲಿ ಸಂಜೆವೆಣ್ಣಿನ
ಕಡುಚೆಲುವಿಕೆಯ ಬೀರಿವಳು ॥ ೧೦೦

ಪದ ಕಟಕ ಪರಿಯನ್ತ ಕಟ್ಟಾಣಿ ಮುತ್ತುಗಳ್
ಪುದುಗಿದಾಭರಣಗಳಿಟ್ಟು ।
ವಿಧುಮುಖಿ ಯೊರ್ವಳೊಪ್ಪಿದಳಾಗ ಬೆಳುದಿಂಗ
ಳಧಿದೇವತೆ ಯಂದದಲಿ ॥ ೧೦೧

ಬೆರಳ ಮುದ್ರಿಕೆ ಹರಳೋಲೆ ಮುತ್ತಿನ ಪತ್ತ
ಸರ ಕಂಠ ಮಾಲೆ ಮೂಗುತಿಯು ।
ಸರಸಿಜಾಕ್ಷಿಯರು ಹೂವಿನ ಹೊತ್ತಿನೊಳಗಾಗ
ಚರಿಸುವರಾ ಬೀದಿಯೊಳಗೆ ॥ ೧೦೨

ಕಾಲಂದುಗೆ ಕಾಂಚಿ ಯುದದು ನಿಚ್ಚಳ
ದೋಲೆ ಪುಸ್ತಿಯು ಚಿಂತಾಕು ।
ಬಾಳದೊಳಸೆವ ಮುತ್ತಿನ ಬೊಟ್ಟು ತಳೆದಿಹ
ನೀಲಾಳಕಿಯರೊಪ್ಪಿದರು ॥ ೧೦೩

ಮುಡಿಯು ಮುತ್ತಿನ ಬಲೆ ಮುಂಗುರುಳೊಳು ಬಿಗಿ
ವಡೆದಿಹ ಮಣಿಯ ಕುಚ್ಚುಗಳ ।
ನಿಡುದೋಳ ಬಳೆ ತಾತಿ ಕಡಗ ಕಂಕಣವಾಂತ
ಕಡು ಚೆಲುವೆಯರೆಸೆದಿಹರು ॥ ೧೦೪

ಮುಗಿಲಟ್ಟಳೆ ಮುಡಿ ಕೊತ್ತಳ ನೆಲೆಮೊಲೆ
ಸೊಗಸು ಮೇಖಲೆ ಪೊಂಗೋಂಟೆ ।
ಮಿಗೆ ಪೊಕ್ಕುಳಂಬುಗಂಡಿಯು ಹೆಂಗಳಸೆದರು
ಮುಗುಳಂಬನ ದುರ್ಗದಂತೆ ॥ ೧೦೫

ಮೊಲೆ ತಲೆ ಗೊಡ ತೋಳ್ಸಂಡಿಲು ಜೌವನ
ಬಲುಮದ ಕಾಮ ರಾಯನಿಗೆ ।
ಸಲೆ ಸಂದ ಪಟ್ಟದಾನೆಗಳನೆ ಗಣಿಕಾ
ಲಲನೆಯರೆಸೆದರರ್ತಿಯಲಿ ॥ ೧೦೬

ಮೊಳೆ ಮೊಲೆ ಸೆಳೆ ನಡು ಸುಳಿ ನಾಭಿ ಯುಲರು ಕ
ಣ್ಣೆಳೆವಳ್ಳಿ ದಿವ್ಯಾಂಗವಾಗೆ ।
ತೊಳಗುವ ವಿಟಪೀ* ಮರಾಶ್ರಯದುಬ್ಬಿನಿಂ
ಕಳ ಹಂಸ ಗಮನೆಯರಿಹರು ॥ ೧೦೭

ಸೋಕಲು ಮನವ ಮಾತಾಡಿದೊಡವನ ಧ
ನಾಕರ್ಷಣವೆನು ಮಾಳ್ಪ ।
ಜೋಕಿನ ನಾಯಕಿಯರಿರ್ದರಾ ಕೇರಿಯೊಳ್
ಸೋಕಿದವರ ಹದನೇನು ॥ ೧೦೮

ಚರಣ ಶೋಭೆಯಲಂದುಗೆ ಕಾಂಚೀ ದಾಮ
ಹರಿ ಮಧ್ಯದ ಚೆಲುವಿಂದ ।
ಗುರು ಕುಚಗಳ ಕಾಂತಿಯಿಂ ಕಂಠ ಮಾಲೆಯ
ಸರಗಳೊಪ್ಪಿದುವಬಲೆಯರ ॥ ೧೦೯

ಮೊಳೆ ಮೊಲೆ ಪರಳು ಮೊಲೆಗಳು ತಾವರೆ ಮೊಗ್ಗೆ
ಗಳ ಮೊಲೆ ಬೆಳಗಾಯಿ ಮೊಲೆಯು ।
ಹೊಳೆವ ಪೊಂಗಳಸ ಮೊಲೆಯರಲ್ಲದೆ ಬೀಳು
ಮೊಲೆಗಳ ಹೆಣ್ಣಿಲ್ಲವಲ್ಲಿ ॥ ೧೧೦

ಬಡನಡು ಬಳುಕುವ ನಡು ಮೃಣಾಳದ ಮಾಲೆ
ಗೆಡೆಯಾದ ನಡು ದಿಟ್ಟಿಗಳಿಗೆ ।
ಕಡು ಸೂಕ್ಷ್ಮವಾಗಿಹ ನಡುಗಳ ಹೆಂಗಳ
ಗಡಣವೆಸೆದುದರ್ತಿಯಲಿ ॥ ೧೧೧

ತಾವರೆಗಣ್ಣೆರಳೆಯಕಣ್ಣು ಮರಿ ಮೀನ
ಭಾವದ ಕಣ್ಣೆಸಳ್ಗಣ್ಣು ।
ತೀವಿದ ಸೋಗೆಗಣ್ಣುಗಳ ಹೆಂಗಳ ಸಾಲು
ಟೀವಿಯ ತೋರುತೊಪ್ಪಿದುದು ॥ ೧೧೨

* ಕವಿಯು ವಿಟಪಶಬ್ದವು ಈಕಾರಾಂತವಾಗಿರುವುದೆಂದು ಭ್ರಮಿಸಿರುತ್ತಾನೆ.

ತರಣಿಯುಗಲಲೆವ್ಮನಿರದೆ ಬಾಧಿಪನೆಂ
ದರವಿಂದ ಚಂದ್ರನ ಪಿಡಿದು ।
ಧರೆಗೊತ್ತಿ ಬಡಿವ್ರೋಲು ಮುತ್ತಿನ ಪುಟ ಚಂಡ
ಸರಸಿಜ ಗಂಧಿಯಾಡಿದಳು ॥ ೧೧೩

ಸುರ ವಧುಗಳ ಚೆಲ್ವಿಕೆಯ ನೋಡಿ ಜರಿವ್ರೊಡೆ
ಮರುತ ಮಾರ್ಗಕೆ ಪೋಪಂತೆ ।
ಗುರು ಕುಚೆ ಯೊರ್ವಳು ನಲಿದುಯ್ಯಾಲಾಡುವ
ಭರವನದೇನ ಬಣ್ಣಿಸುವೆ ॥ ೧೧೪

ತಲ ವಾಗಿಲೊಳು ಘರ್ಮ ಜಲವಾರಿಪ ಸಿಯುಳ
ನೆಲೆ ಮೊಲೆಗಳ ನಖ ರೇಖೆ ।
ತೊಳಗಿತು ಸ್ಮರ ಜೋದ ಕರಿ ಶಿರಕೊತ್ತಿದ
ಬೆಳಗುವಂಕುಶ ಹತಿಯಂತೆ ॥ ೧೧೫

ಅಧರ ಬಿಂಬದ ದಂತ ಕ್ಷತ ನ್ಯೆಲ್ಯ ಸಹಿತೊರ್ವ
ಸುದತಿ ರಾಜಿಸೆ ಬಾಗಿಲೊಳಗೆ ।
ಪದಪಲಿ ತಳರ್ದವುಚಿದ ಮರಿದುಂಬಿಯು
ಹದನಂತೆ ಮೆರೆದುವರ್ತಿಯುಲಿ ॥ ೧೧೬

ಬೇಸರ ತಪಿಪ್ರೊಡೆ ಪಗಡೆಗೆ ಬಂದ ವಿ
ಲಾಸದ ವಿಟನ ಕೈ ಪಿಡಿದು ।
ಸೂಸುವ ನಗೆಯಿಂದ ಮನೆಗೊಯ್ದು ಬಲು ಮೋಹ
ಪಾಶದೆ ಬೀರಿದಳವನ ॥ ೧೧೭

ಹಳದಿ ಪಚ್ಚೆಯು ಕೆಂಪು ಕರಿ ಗಾಯಿ ನಮ್ಮಂಗ
ಲಲಿತ ಹಾಸಂಗಿಯೊಳವ ಕೊ ।
ನಳಿನಾಸ್ತ್ರನ ಕಲೆ ಡಾಳದೊಳಾಡೆಂದು
ಲಲನೆ ಸೂಸಿದಳು ಜಾಣ್ಣುಡಿಯು ॥ ೧೧೮

ಬಡನಾಗ ಚದುರಂಗಕೆಳಸಿ ಯೆಯ್ದಿದನ ತ
ವ್ಮ್ರಡತಿ ಯಿರುವ ಮನೆಗೊಯ್ದು ।
ಮಡದಿ ಮೋಹದ ಬಲು ಮಾತಲಿ ಚದುರಂಗ
ದಡಿಯು ಮೇಲ್ದಾಯ ಪೇಳಿದಳು ॥ ೧೧೯

ಪಿಡಿ ಯಾನೆಗಳ ನಾಳೊತ್ತು ರಥಕೆ ಕೈ
ದುಡುಕು ಮಂತ್ರಿಯು ಮೇಲಕೇರು ।
ಕಡು ಗುದುರೆಯು ಸೊಕ್ಕು ಮುರಿಯೆಂದು ಚದುರಂಗ
ದಡಿಯು ಮೇಲ್ದಾಯ ಪೇಳಿದಳು ॥ ೧೨೦

ವಾರಿಜಗಳ ಮುಗುಳ್ದೆಗೊತ್ತಿ ಸಿರಿಸದ
ಚಾರು ಮಾಲೆಗಳೊಳು ಬಿಗಿದು ।
ಓರಂತೆ ವಿಟನೊಳು ಮಗ್ಗುಲ ರತಿ ಗೈವ
ವಾರಾಂಗನೆಯರೊಪ್ಪಿದರು ॥ ೧೨೧

ಮಲ್ಲ ಸಾಧನೆಯಂತೆ ನಳಿ ತೋಳ್ಗಳಿಂದಪ್ಪಿ
ಯುಲ್ಲಾಸವನು ತೋರಿ ವಿಟಗೆ ।
ನಿಲ್ಲದೆ ತಳ ಮೇಲಾಗಿ ಕೂಡುವ ದಿವ್ಯ
ಸಲ್ಲಲಿತಾಂಗಿಯರಿಹರು ॥ ೧೨೨

ಹರಳೋಲೆ ಕುಣಿಯಲು ಜಡೆ ಬೆನ್ನನಲೆಯಲು
ಗುರು ಕುಚದೊಳು ನಲ್ಲನುರವ ।
ಇರಿದೊಡನುಪರಿ ರತದೆ ಕೂಡಿ ರಾಜಿಪ
ತರುಣಿಯೊಂದೆಡೆಯಲೊಪ್ಪಿದಳು ॥ ೧೨೩

ಸೊಕ್ಕು ಜವ್ವನೆಯು ಕಕ್ಕಸ ಕುಚಗಳಿಗೆ ಕೈ
ಯಿಕ್ಕುತ ಪುಟ ನೆಗೆದೊಡನೆ ।
ಮರ್ಕಟ ಬಂಧದೆ ಕೂಡುವ ವಿಟನದೊಂ
ದಕ್ಕರನೇನ ಬಣ್ಣಿಸುವೆ ॥ ೧೨೪

ಬಿಡದೆ ಜಂಘಾ ಕಾಂಡವ ನಿಡು ದೊಡೆಯೊಳ
ಗೊಡನೊಂದಿಸುತುಬ್ಬಿನಿಂದ ।
ಒಡನೆ ಮಂಡೂಕ ಬಂಧದೆ ಕೂಡಿ ರಾಜಿಪ
ಕಡು ಚೆಲ್ವ ವಿಟರೊಪ್ಪಿದರು ॥ ೧೨೫

ಭಾವಕಿಯೊರ್ವಳ್ ಬೆನ್ನಟ್ಟಿ ಕಡು ಮುದ
ನಾವಸ್ಥೆಯಿಂ ಮುಂದರಿಯದೆ ।
ನೀವಿಯನೆತ್ತಿ ಹಿಂಗೂಡಿ ನಗಿಪ ಹಾಸ್ಯ
ಭಾವದ ವಿಟನೊರ್ವನೆಸೆದ ॥ ೧೨೬

ಕಂಗಳೊಳಗೆ ನುಡಿ ಕರದಭಿನಯದ ಬೆ
ಡಂಗಿನೊಳಗೆ ಸನ್ನೆ ದೋರಿ ।
ಹಿಂಗದ ವಿಟರ ಬರಿಸಿ ಕೊಂಬ ಬಲು ಭಾವ
ದಂಗದ ಪ್ರೌಢೆಯರಿಹರು ॥ ೧೨೭

ನೋಟದೊಳೊಬ್ಬನ ನುಡಿಯೊಳೊಬ್ಬನ ನೆರೆ
ಚೇಟಿಯಿಂದೊಬ್ಬನ ಬರಿಸಿ ।
ನೀಟನ ಮನೆ ತಂಗಿಲ್ವಾಸೊಳು ವಂಚನೆ
ಕೂಟದ ಹೆಂಗಳೊಪ್ಪಿದರು ॥ ೧೨೮

ಸುರತಾಂತದ ಶ್ರಮವಳವೊಡೆ ಮೈದಿಲ
ಸೆರಗ ಜಾರಿಸಲಂಗನೆಯು ।
ಮಿರುಗುವ ಬಡ ಬಾಸೆ ಯೊಪ್ಪಿತು ಮುಖ ಚಂದ್ರ
ಗುರವಣಿಸುವ ರಾಹು ವೆನಲು ॥ ೧೨೯

ಸಖಿಯಿದಿರೊಳಗೊರ್ವನಪರಾಧಿ ನಾಯಕ
ಮುಕುಳಿತಾಂಜಲಿ ಪುಟನಾಗೆ ।
ಮುಖ ಚಂದ್ರಮನ ಕಂಡು ಮುಗಿದಬ್ಜದೊಲು ಕರ
ವಿಕಸಿತವಿಲ್ಲದೊಪ್ಪಿದುವು ॥ ೧೩೦

ಬಂದೆಡೆಯೊಳಗೊರ್ವ ನೀರೆ ವಿಟನ ಮೇ
ಲ್ಪೊಂದಿದ ಮೋಹವ ಬಿಡದೆ ।
ಕಂದರ್ಪ ಕೇಳಿಯೊಳೋಲಾಡುತಿರೆ ಸಖಿ
ಬಂದು ನೋಡಿದಳಾಕೆಯಿರವ ॥ ೧೩೧

ಅವಗತಿ ಹಿತವೆಂಬೊಲಾಕೆಗೆ ಬಹು ಬುದ್ಧಿ
ಯುವತರಿಸುವ ಜಾಣ್ಣುಡಿಯು ।
ಯುವತಿಗೆ ಸತಿ ಹರುಷದೆ ಪೇಳ್ದ ಭಾವದು
ತ್ಸವವ ನಾನೇನ ಬಣ್ಣಿಸುವೆ ॥ ೧೩೨

ನುಡಿಯೆರಡಿಲ್ಲ ಕೊಡಲು ದಾತ ನಲ್ಲನಿ
ನ್ನೊಡನಿದಿರಿಕ್ಕಬೇಡೆಂದು ।
ಒಡತಿಗೆ ಬುದ್ಧಿಯ ಪೇಳಿದಳಾ ನುಡಿ
ಕಡು ಹಿತವಾಯಿತವನಿಗೆ ॥ ೧೩೩

ಬಂದೆಡೆಯೊಳಗೊರ್ವ ಪ್ರೌಢೆ ಬಾಲೆಯು ಮುದ
ದಿಂದ ಕುಳ್ಳಿರಿಸಿಕೊಂಡಾಗ ।
ಕಂದರ್ಪನಾಗಮದಿರವ ಪೇಳುವ ಭಾವ
ದಂದವನೇನ ಬಣ್ಣಿಸುವೆ ॥ ೧೩೪

ಕಡು ಮತಿಯುಲಿ ಬಹ ನಲ್ಲನಿಗಿದಿರಾಗಿ
ನಡೆದು ತವಕದೆ ಕೈ ವಿಡಿದು ।
ಒಡನೆ ಮಂಚದಲಿ ಕುಳ್ಳಿರಿಸಿ ಮೈದಿಲೊಳಗೆ
ತೊಡೆವುದು ಪದ ರಜಗಳನು ॥ ೧೩೫

ಪರಿಮಳ ವಾಸದೊಳಗೆ ಮುಖ ಮೈ ಬಡಿ
ದೊರಸಿ ಕುರುಳ ನೇವರಿಸಿ ।
ಕರದಲಾಪಟದೊಳು ಬೀಸಿ ಸುಖವ ಸೂಸಿ
ಪರಿಹರಿಪುದು ಪಥ ಶ್ರಮವ ॥ ೧೩೬

ಪಾನ ಪನ್ನೀರನಿತ್ತವ ಕೊಂಡು ಮಿಕ್ಕುದ
ನಾನಂದದಲಿ ಸವಿದಾಗ ।
ಮಾನಿತ ಮಲಯಜಗಳನಾತನಂಗಕೆ
ಸಾನುರಾಗದಲಿ ಲೇಪಿಪುದು ॥ ೧೩೭

ಆವನ ಕರಾಬ್ಜದೆ ಪರಿಮಳವನು ನಿನ್ನ
ಜವಳಿ ಮೊಲೆಗಳ ಮಧ್ಯದಲಿ ।
ತವೆ ತಿಗುರಿಸಿಕೊಂಡು ಮುಡಿಗೆ ಪೂ ಸರವ ಬ
ಲ್ತವಕದೆ ಬಿಗಿದು ಸುತ್ತುವುದು ॥ ೧೩೮

ಆತನ ಕೈಯ ಪೂ ಮಾಲೆಯ ನಿನ್ನಯ
ನೂತನ ವೇಣಿ ವಲ್ಲರಿಗೆ ।
ಪ್ರೀತಿಯಿಂ ಸುತ್ತಿಸುವುದು ಮದನಾಗಮ
ರೀತಿಯ ತಿರುಳು ನಿನ್ನಾಣೆ ॥ ೧೩೯

ಒಡೆದುದ್ದಿದ ಕ್ರಮುಕಗಳನವನ ಬಾಯಿ
ಗೊಡನೂಡಿ ಲಲ್ಲೆ ಮಾತಾಡಿ ।
ಬಿಡದೆ ಕುಟುಕು ಗೊಂಡಾತನ ಗಲ್ಲವ
ಪಿಡಿದು ಮುದ್ದಿಪುದು ನೀನಬಲೆ ॥ ೧೪೦

ನೆರೆ ತವಕದೆ ಬಿಳಿ ಯೆಲೆಯ ಮೊಲೆಗಳ ಮೇ
ಲಿರುವ ವೈದಿಲೊಳು ಬೇಗೊರಸಿ ।
ಪಿರಿದು ಕೆಂಬಲ್ಲಿಂದ ಬಾಗಿಸಿ ಯಾತಗೆ
ಪರಮ ಪ್ರೀತಿಯುಲೂಡುವುದು ॥ ೧೪೧

ಶಶಿ ಕಮಲಕೆ ಸ್ನೇಹವ ಮಾಡಿ ಚೆಂದುಟಿ
ರಸವ ಸವಿದು ಚಪ್ಪರಿದು ।
ವಸನವನೀಡಾಡಿ ಯಾಲಿಂಗಿಸಿ ಮೋಹ
ಪಸರಿಪುದವಗೆ ಕೇಳಬಲೆ ॥ ೧೪೨

ತಳಿರ್ಬೆಳಪನ್ನ ತಾವರೆ ಕೆಂಪಡರ್ವನ್ನ
ಸಲೆ ಚಕ್ರವಾಕದ ಬಿಣ್ಪು ।
ತೊಲಗುವೆನ್ನಬರ ಮನ್ಮಥನಾಹವದೊಳ
ಗಲಿಸಬೇಡಬಲೆ ನಿನ್ನಾಣೆ ॥ ೧೪೩

ಚದುರೆ ಕೇಳೀವಿಧದಲಿ ನೀನು ನಡೆದೊಡೆ
ಮದ ದಂತಿ ಮುಂ ಬಾಗಿಲೊಳಗೆ ।
ಪದಪಿನೊಳಗೆ ಕಟ್ಟದಿರದು ನಿನ್ನಿಷ್ಟಾರ್ಥ
ಮುದದೆ ಕೈ ಸಾರುವುದೊಲಿದು ॥ ೧೪೪

ಎಂದು ಪ್ರವುಡೆ ಬಲು ಬುದ್ಧಿ ಪೇಳಲು ಬಾಲೆ
ಯಂದಾರು ಭುಜವಾಗೆ ಹಿಗ್ಗಿ ।
ಮುಂದಾ ರೀತಿಯೆ ಸರಿ ಸಿರಿವಂತೆ ಯಾ
ಗಂದೊಪ್ಪಿದಳು ಲೀಲೆಯಲಿ ॥ ೧೪೫

ಮತ್ತೊಂದೆಡೆಯಲಿ ಮುದಿ ಪಾರಿ ಮಗಳ ತ
ನ್ನೊತ್ತಿಗೆ ಕರೆದುಕೊಂಡಾಗ ।
ಬಿತ್ತರಿಸಿದಳೇಕಾಂತದೆ ಬಹು ಧನ
ವೆತ್ತಿ ಬರುವ ಮಾರ್ಗಗಳ ॥ ೧೪೬

ಕೊಡದೆ ಬೂಟಿಕ ವಾತಿನಲಿ ಮನ್ಮಥ ಕೇಳಿ
ಗೊಡನೈದುವ ಬೋಸರಿಗನ ।
ನಡೆ ನಾಳೆ ಕರೆವೆನೆಂದೆಬ್ಬಿಸಿ ಪೊನ್ನೀವ
ಕಡು ದಾತನ ಕರೆ ಮಗಳ ॥ ೧೪೭

ಮನೆಯಲ್ಲಿ ಮಂದಿ ಬಹಳ ಹೊನ್ನಿನ ವೆಚ್ಚ
ಘನವೆಂದವನೊಡನಾಡಿ ।
ಕನಸಿನಲಿ ನಿನ್ನನಗಲಿ ತಪ್ಪಿದೊಡೆ ನಮ್ಮ
ಜನನಿಯ ಮೇಲಾಣೆ ಯೆನ್ನು ॥ ೧೪೮

ವೀಳೆಯಕಿವು ಚೆಲುವಾಲಿಗೆ ಕ್ರಯಕಿದು
ಸಾಲಿಯ ಸೀರೆಗಿದೆಂದು ।
ಹೇಳಿ ನೀ ಮುದ್ದು ಮಾತಿಂ ಪೊನ್ನ ಸೆಳೆಕೊಂಡು
ಜಾಳಿಗೆಯನು ಕಟ್ಟು ಮಗಳೆ ॥ ೧೪೯

ಘನವಾದೊಡವೆ ಕೈ ಸೇರುವ ಪರಿಯಂತ
ಮನೆ ದೇವರೆಂದುವ ಚರಿಸು ।
ಅನುಗೆಡಲಾತನ ಹೊರಡಿಸಿ ಮತ್ತೊಬ್ಬ
ಧನವುಳ್ಳ ಪುರಷನ ಕರೆಕೊ ॥ ೧೫೦

ಬದ್ದ ನೋಡವನ ಕಲೆಯ ಕ್ರಮಗಳ ಬೆನ್ನ
ಗುದ್ದಿ ನೋಡವನ ಹರುಷವ ।
ಮುದ್ದು ಮಾತಿನಲಿ ಮೋಹವ ಬೀರಿ ಯವನೊಳ
ಗಿದ್ದ ಹಣವ ತೆಗೆ ಮಗಳೆ ॥ ೧೫೧

ಹೆಳವನಾಗಲಿ ಯಂಧನಾಗಲಿ ಬಹು ಪ್ರಾಯ
ಗಳೆದನಾಗಲಿ ನಮಗೇನು ।
ಸಲೆ ದ್ರವ್ಯ ಕೊಡುವನುತ್ತಮ ಕೊಡದಿಹ ಲೋಭಿ
ಚೆಲುವನಾದೊಡೆ ಫಲವೇನು ॥ ೧೫೨

ಆವಾವ ಜಾತಿ ಯಾದೊಡೆ ನಮಗೇನು ಪೊ
ನ್ನೀವವನುತ್ತಮ ಜಾತಿ ।
ಭಾವಜ ಸುಖವಿತ್ತು ಹಣವ ತೆಗೆವಳೀಗ
ಕೋವಿದ ಸೂಳೆ ಕೇಳ್ ಬಲೆ ॥ ೧೫೩

ಪ್ರಾಯದೆ ಹಣ ತೆಗೆಯದ ಸೂಳೆ ಕೃಷಿಯನಿ
ರ್ದಾಯವರಿಯದ ಪಾದಜರು ।
ಕಾಯ ವಿಡಿದ ಮೃತ ಜೀವಿ ಯಂದದೆ ಬಹು
ಳಾಯಸ ಗೊಳ್ವರು ಮಗಳೆ ॥ ೧೫೪

ನಿನ್ನ ಪ್ರಾಯದಲಿ ಹಣವ ಗಳಿಪೆನೆಂದು
ಮುನ್ನೂರು ಮಂಚವ ಮುರಿದೆ ।
ಎನ್ನಂತೆ ನೀನಿದ್ದೊಡೆ ಬಹು ಭಾಗ್ಯ ಸಂ
ಪನ್ನೆ ಯಾಗಿಹೆ ಧರೆಯೊಳಗೆ ॥ ೧೫೫

ತಾಳಿ ಹೊನ್ನುಂಗುರದವ ಬರೆ ಮೋಹದ
ಬೇಳುವೆಯನು ನೀ ತಳೆದು ।
ಮೇಲಾದೊಡವೆಯು ಸೆಳಕೊಂಡಾತನ
ಚಾಳಿಸಿ ಬಿಡು ನೀ ಮಗಳೆ ॥ ೧೫೬

ಅನವರತವು ಹಗಲಿರುಳೆನ್ನದೆ ಬಂದ
ಧನ ಹೀನನಹ ಮಗ್ನ ವಿಟನ ।
ಮನೆ ಗೆಲಸದ ಭಂಟನೆನಿಸಿ ಸಿಂಬಿಯು ಕೊಟ್ಟು
ಘನವಾಗೆ ನೀರ ನೀ ಹೊರಿಸು ॥ ೧೫೭

ಕೊಡಲೊಡವೆಯು ಕಾಣದೆ ಮೋಹಕೆ ಸಿಕ್ಕಿ
ಯೆಡೆ ಯೆಡೆಗೈದಿ ಬಂದವನ ।
ತೊಡೆ ಕೈ ಕಾಲನೊತ್ತಿಸಿಕೊಂಡು ನಿನ್ನಯ
ಪಡಿದಂಡಿಯು ಮಾಡು ಮಗಳೆ ॥ ೧೫೮

ಎನುತ ಬುದ್ಧಿಯು ಮಗಳಿಗೆ ಪೇಳೆ ಮುದಿ ಪಾರಿ
ಧನವುಳ್ಳ ವಿಟರನು ತಂದು ।
ತನು ಜಾತೆಗೆ ಕೂಡಿ ಹಣವನು ತೆಗೆದದೊಂ
ದನುವ ನಾನೇನ ಬಣ್ಣಿಸುವೆ ॥ ೧೫೯

ಬಳಿಕೊರ್ವ ಮುಗ್ಧಾಂಗನೆ ರತಿ ಕಲೆಗಳ
ತಳೆದು ಬರಲು ಸಖಿ ಕಂಡು ।
ಮೊಳೆ ನಗೆ ಮಿನುಗೆ ಹಾಸ್ಯವ ನುಡಿದಾಕೆಯ
ತಲೆ ಗುತ್ತಿಸಿದಳೇನನೆಂಬೆ ॥ ೧೬೦

ಎಲರಲೆ ಯಿಲ್ಲದೇಕೆಳವೆಳ್ಳ ನಡುಗಿತು
ಬಿಳಿಯ ಮೌಕ್ತಿಕದ ಮಣಿಗಳು ।
ಮೊಳೆತಿವೆ ಚಂದ್ರ ಮಂಡಲದಲ್ಲಿ ತಳರೊಳ
ಗಳವಟ್ಟಹ ತುಂಬಿ ಯೇನು ॥ ೧೬೧

ಪದುಮ ಕುಟ್ಮಲದೊಳಗೊಂದರ ಲೆಕ್ಕವ
ಹುದುಗಿಸಿ ಬರೆದವನಾರೊ ।
ಚದುರೆ ನೀ ಪೇಳನೆ ತಲೆವಾಗಿ ನಾಚಿದ
ಸುದತಿಯನಪ್ಪಿದಳಾಗ ॥ ೧೬೨

ಪ್ರಾಣೇಶನನಗಲಿದ ನೀರೆ ಧರ ರುದ್ರ
ವೀಣೆಯ ಕರದಲ್ಲಿ ಪಿಡಿದು ।
ಮಾಣದೆ ನುಡಿಸುತಿರಲು ಭೀತಿಯಿಂ ಪಂಚ
ಬಾಣನಲ್ಲಿಂ ತೆರಳಿದನು ॥ ೧೬೩

ವಿರಹಿಣಿ ಬಾಲ ಚಂದ್ರೋದಯದೊಳಗೆ ತ
ನ್ನರೆಯ ಬರಲು ಕಂಡಾಗ ।
ಪಿರಿದು ಕೋಪಿಸಿ ಜರೆದಾತನನಲ್ಲಿಂದ
ತೆರಳಿಸಿ ಬಿಟ್ಟಳೇ ವೇಳ್ವ ॥ ೧೬೪

ಬಡನೊಬ್ಬ ಧೂರ್ತ ನಾಯಕ ಮುನಿದೊಡವೆಯ
ಕೊಡದೆ ಜಗಳದ ಗಂಟಿಕ್ಕಿ ।
ಕಡೆಗೈದುತಿರೆ ಕಂಡಾ ಹೆಣ್ಣು ನಡಿಸಿದ
ಕಡು ಚದುರತೆಯನೇ ವೇಳ್ವ ॥ ೧೬೫

ಮುಂಗುರುಳಗರ ಕಣ್ಣಿನೊಳೊತ್ತಿ ಜಲವನು
ಹಿಂಗದೆ ತಂದುಕೊಂಡಾಗ ।
ಅಂಗನೆ ಪುಸಿಗೆ ದುಃಖಿಸುತ್ತೈದಿ ಯಾತನ
ಮುಂಗಡೆ ಯಡ್ಡ ಗಟ್ಟಿದಳು ॥ ೧೬೬

ಕರವ ಪಿಡಿಯೆ ಸಾರ್ ಸಾರೆಂದು ಜರೆದೊಡೆ
ಚರಣ ವಿಡಿದು ದುಃಖಿಸುತ ।
ಬರಿದೆ ನೀ ಮುನಿದಗಲಲು ನಿನ್ನ ಮನೆಯಿಂದ
ಹೊರಡಲೀಸುವ ಹೆಣ್ಣೆ ನಾನು ॥ ೧೬೭

ಜಾಣ ಸೇಕರ ನಿನ್ನಡೆಯೊಳಗೆಳ್ಳನಿ
ತೂಣೆಯು ವಿಡಿದ ಕಾರ್ಯಗಳ ।
ಕಾಣಿಸಿ ಕೊಂಡೆನಾದೊಡೆ ಕೇಳು ಮುಡಿ ಮೊಲೆ
ದಾಣವ ನಿನಗಿತ್ತಳಲ್ಲ ॥ ೧೬೮

ಹಣವೇನು ಬಾತೆ ನಿನ್ನಯ ಗುಣವೆಂಬುದು
ಮಣಿ ದಾರವಾಗೆನ್ನ ಮನಪ ।
ಕ್ಷಣದಲಿ ಬೀರು ಗೊಂಪುದು ಮತ್ತೊಬ್ಬರ
ನೆಣಿಕೆ ಗೊಂಡೊಡೆ ಕಾವನಾಣೆ । ೧೬೯

ಎನುತಾಗ ನಳ ತೋಳ ಪಾಶದೊಳಗೆ ತ
ನ್ನಿನಿಯನ ಬಿಗಿದು ಬಂಧಿಸುತ ।
ಮನೆಗೆಳದೊಯ್ದು ಮಂಚದೊಳಂಬಿಟ್ಟುಕೊಂ
ಡನುವಾದಳಂಗಜಾಹವಕೆ ॥ ೧೭೦

ಅಧರ ರದನದೊಳಗಿಟ್ಟು ತಾ ಹದವಾಗಿ
ಯೊದಗಿ ವಕ್ಷಸ್ಥಳಕಾಗ ।
ಎದೆಗಳ ಹೂಡಿ ನಿನ್ನಯ ಮುನಿಸನು ಕಳ
ವುದಕೆನ್ನಳವೆ ಯೆಂದಳಾಗ ॥ ೧೭೧

ಗುರು ಕುಚಗಳ ಕಳಶ ಸ್ಥಾಪನೆ ಮಾಡಿ
ವರ ಪುಳಕಾಂಬು ಸೇಚನದೆ ।
ಕೊರಳುಲಿ ಮಂತ್ರದೆ ಸುರತ ಸಾಮ್ರಾಜ್ಯದ
ಪಿರಿದು ಪಟ್ಟವ ಕಟ್ಟಿದಳು ॥ ೧೭೨

ನಗೆ ನುಡಿ ಸರಸ ಸಲ್ಲಾಪ ಮೋಹದೊಳಾಗ
ಮಿಗೆ ಮಗ್ನನ ಮಾಡಿಕೊಂಡು ।
ಬಗೆ ಬಗೆ ಬಂಧಕಳಿಸಿ ಬಹು ಹಣಗಳ
ತೆಗೆದಳೇನೆಂಬೆನಚ್ಚರಿಯು ॥ ೧೩೩

ಒಪ್ಪುವ ಪಲಿತ ಕಾಯದ ವಿಟ ರೂಪ ಕಂ
ದರ್ಪನೊರ್ವಳಿಗೊತ್ತೆ ಗೊಡಲು ।
ಅಪ್ಪ ನೀನೆನಗೆನಲಹುದು ನಿನ್ನನು ಬಿಗಿ
ಯುಪ್ಪಲೈತಂದವನೆಂದ ॥ ೧೩೪

ಸೆರಗು ವಿಡಿಯೆ ಸಾರ್ಸಾರೆಂಬ ಕರವನು
ಭರದೆ ತುಡುಕಲೊಡೆಮುರಿವ ।
ಪರಳು ಮೊಲೆಗಳ ಪಿಡಿಯುಬ್ಬು ನಿಟ್ಟುಸಿ ನೋಳ್ಪ
ತರಳ ವೆಣ್ಣುಗಳೊಪ್ಪಿದರು ॥ ೧೩೫

ಬಳಿಕೊಂದೆಡೆಯಲಿ ತಾಳ ಮದ್ದಳೆ ಗೀತ
ಗಳ ಮೇಳದರ್ತಿಯೊಳಾಗ ।
ಎಳೆ ವೆಂಗಳಿಗೆ ನಾಟ್ಯ ಕಲಿಸುವ ಭರತ ಜ್ಞ
ರುಲುಹೊಪ್ಪಿತಾ ಬೀದಿಯೊಳಗೆ ॥ ೧೩೬

ಶಕುನಿ ಮಂಚದ ರವ ಪಾರಿವಗಳ ರವ
ಚಕಿತ ಚಪಲ ನೇತ್ರೆಯರ ।
ವಿಕಸಿತ ಸಂಗೀತ ರವ ಚರಿಪರ ಶ್ರುತಿ
ಸುಖಕರವೇನ ಬಣ್ಣಿಸುವೆ ॥ ೧೩೭

ಒಂದೆಡೆಯೊಳಗೊರ್ವ ನಾರಿಯೊಡನೆ ವಿಟ
ಚಂದಿರ ಮುನಿದಲ್ಲಿಂದ ।
ಬಂದಾಗ ಮತ್ತೊಬ್ಬ ಗಣಿಕೆಗೊತ್ತೆಯನಿತ್ತು
ಕಂದರ್ಪ ಕೇಳಿಯೊಳಿರಲು ॥ ೧೩೮

ತವೆ ಕೆಳದಿಯರಿಂದದನರಿತವಳೆರ್ದ
ಭವನಕೆ ಬಂದಾನಾರಿ ।
ಅವಿರಳ ಕೋಪವ ತಾಳಿ ಮರ್ಸವ ಪೇಳಿ
ಬವರವನೆಸಗಿದಳಾಗ ॥ ೧೩೯

ಎಲೆ ಹೆಣ್ಣೆ ನನ್ನಿನಿಯನ ನಿನ್ನ ಮನೆಗೊ
ಯ್ದುಲರಂಬ ಕೇಳಿಯನಿತ್ತು ।
ನಲಿವೆ ಕೇಳ್ ನಿನ್ನ ಮುಂದಲೆ ಪೊದಲೊರ್ವಗೆ
ಸಲೆ ಕೋಳು ಹೋದುದನರಿಯಾ ॥ ೧೪೦

ನಾಯಕಿಯಾದೊಡೆ ಯದರ ಮಾರ್ಗವು ಬೇರೆ
ಯಾಯತವರಿಯದೆ ಹೀಗೆ ।
ನ್ಯಾಯವ ತಿಳಿಯದೆ ಮಾಯವ ಮಾಡಿದೆ
ದಾಯವು ತಿಳಿಯಿತು ನನಗೆ ॥ ೧೪೧

ಕೋಳುಹೋದವಳಗೊತ್ತೆಯನಿತ್ತು ಮನಸಿಜ
ಕೇಳಿಯನೆಸಗಿದಧಮನ ।
ಲಾಲಿಸಿ ಬಳಿಕಿನ್ನು ನಾ ನೆರೆದೊಡೆ ನನ್ನ
ಸೂಳೆತನಕೆ ಕುಂದು ಬಹುದು ॥ ೧೪೨

ಕುಂದುಕೊರತೆಯ ಹೊರುವ ಹೆಣ್ಣೆ ನೀನು ನಿ
ನ್ನಂದವು ನಾನರಿಯದುದೆ ।
ಹಿಂದೊರ್ವಗೆ ಪೊಲೆದುದಿಯು ಕೊಯ್ದಿತ್ತೆ ನಿ
ನ್ನಂದಿನ ಹೀನ ವೇನಾಯ್ತು ॥ ೧೪೩

ಪೊಲೆದುದಿ ಪ್ಯೆದಿಲ ಮರೆಯೊಳಿರುವುದೆಂದು
ಸಲೆ ನಾಚಿಕೆಯನು ತೊರೆದು ।
ಬಲಗ್ಯೆ ಬೆರಳನೊರ್ವನಿಗಿತ್ತೆ ಪೆಣ್ಣೆಯೆಂ
ದುಲಿದು ಭಂಗಿಸರೆ ಕಂಡವರು ॥ ೧೪೪

ಹುರಿಭಂಗಿಯ ಸೊಕ್ಕೇರಿ ನೀನೊತ್ತಿಯ
ನಿರದಿತ್ತ ವಿಟನನು ಮರೆತು ।
ಮರಳಿಯೊರ್ವನ ಕರೆದಿರ್ವರ್ಗೆ ಕದನವ
ಬರಿದೆ ಗಂಟಿಕ್ಕಿದ ಭಂಡೆ ॥ ೧೮೫

ಇದು ಭಂಡತನವೆ ಮಗ್ಗುಲೊಳಿದ್ದವನ ಕೂಟ
ಕೊದಗಲಾರದೆ ನಿದ್ದೆಗರೆದು ।
ವದನಕ್ಕೆ ಮಸಿ ಸುಣ್ಣವ ಬರೆಯಿಸಿಕೊಂಡ
ಚದುರೆ ವೆಣ್ಣಲ್ಲವೆ ನೀನು ॥ ೧೮೬

ಇಂತಿರ್ವರು ಮರ್ಮಗದನದೊಳಿರುತಿರೆ
ಯಿಂತೊರ್ವ ಮುದಿಪಾರಿ ಬಂದು ।
ಕಂತುಶಾಸ್ತ್ರಾಲಾಪದೊಳಗವರ ನೆರೆ
ಸಂತರ ಮಾಡಿದಳಾಗ ॥ ೧೮೭

ಒಡನೊಂದೆಡೆಯುಲಿ ಪಂಜರದರಗಿಳಿ
ಮಡದಿರನ್ನೆಯ ಕೂಡಾಗ ।
ಸಡಗರದಲಿ ಕೋವದುತ್ತರಗಳನೀವ
ಬೆಡಗನದೇನ ಬಣ್ಣಿಸುವೆ ॥ ೧೮೮

ಗಗನವ ತಬ್ಬಿ ತಾರೆಗಳ ಪೊಯ್ದೊಬ್ಬಿಸಿ
ನಗಕುಲಗಳನಲ್ಲಾಡಿ ।
ಮಿಗೆ ಕತ್ತಲೆಗೆ ಕೈಯಿಟ್ಟರು ಕಾವನ
ಜಗಳದಾಳೆಂದುದು ನಗುತ ॥ ೧೮೯

ಬತ್ತಿದ ಗಲ್ಲ ಹತ್ತಿದ ಮೊಲೆ ನೆಲದೊಳ
ಗೊತ್ತಿ ಹೂಡಿದ ಕೈಗೋಲು ।
ಹೊತ್ತ ಬೆಳ್ನರೆ ಕೂದಲಾ ಮುದಿ ಸೂಳೆಯರ
ಮೊತ್ತವೊಪ್ಪಿದುದಾಗಲ್ಲಿ. ॥ ೧೯೦

ಮಾಸಿದ ಸೀರೆ ಮಸಿಯ ತಿಲಕದ ಹೊರ
ಸೂಸುವ ಬಾಯ ಜೊಲ್ಲಿಂದ ।
ಕೇಶ ತುಂಬಿದ ಬೆಳ್ನರೆಯ ಹಾಸ್ಯದ ಮುದಿ
ವೇಶಿಯರೆಡೆ ಯಾಡುತಿಹರು ॥ ೧೯೧

ಕಣ್ಣವೆ ಬಿಳುಪೇರೆ ಕಪ್ಪ ಹತ್ತಿಸಿ ಮುಖ
ಕೆಣ್ಣಯ ಮಿಂಚುಗಳಿಕ್ಕಿ ।
ಹುಣ್ಣುಗಲೆಯ ಸೀರೆಯಲಿ ಮರಸಿಹ ಮುದಿ
ಪಣ್ಯಾಂಗನೆಯರೊಪ್ಪಿದರು ॥ ೧೯೨

ಬಿದ್ದ ಮೊಲೆಯ ರವಿಕೆಯೊಳೇರಿಸಿ ಕಟ್ಟಿ
ಯೊದ್ದು ಸುಮ್ಮಾನದಲಿ ನೆಲನ ।
ಶುದ್ಧಾಂಗದ ಪಾತ್ರವೆಣ್ಣುಗಳತ್ತಿವೆಂದು
ಹೊದ್ದ ವಿಟರ ನಗಿಸುವರು ॥ ೧೯೩

ಹರಯಗಳಿದ ಪೆಣ್ಣಿನ ಸಂಗಸುಖವೆಳ
ಹರಯದ ಹೆಣ್ಣಿನೊಳುಂಟೆ ।
ನೆರೆ ಪಕ್ವವಾದ ಫಲದ ಸವಿ ಕಸಿಗಾಯೊ
ಳಿರುವುದೆ ಹೇಳೆನುತಿಹರು ॥ ೧೯೪

ಮೆಟ್ಟದ ಚಮ್ಮಾರುಲಿಯ ಪೆರೆನೊಸಲೊಳ
ಗಿಟ್ಟ ಕಸ್ತೂರಿಯ ತಿಲಕದ ।
ಮುಟ್ಟ ಪಿಡಿದ ಕೈ ಸಾಣೆಯ ಕೊನಬುಗ
ಳಟ್ಟಣಿಸಿಹರು ಬೀದಿಯಲಿ ॥ ೧೯೫

ಸೂಳೆ ಬಾಟಿಕೆಯ ಜಗಳಕಾಗ ರತಿಶಾಸ್ತ್ರ
ದಾಳಾಪದ ನ್ಯಾಯಗಳ ।
ಹೇಳಿ ಬಿಡಿಸಿ ಕಲಹವ ನಿಲಿಸುವರ ಸ
ಮ್ಮೇಳದೆ ಬೀದಿಯೊಪ್ಪಿದುದು ॥ ೧೯೬

ತಗರು ಸಿವಲೆ ಕೋಳಿ ಕಾಳಗಗಳು ನೆರೆ
ಪಗಡೆ ಜೂಜುಗಳ ನೆವದಲಿ ।
ಬಗೆ ಬಗೆಯಲಿ ಸಿಂಗರಿಸಿ ಯಾ ಬೀದಿಯೊಳ್
ಸೊಗಸು ಗಾರರು ಚರಿಸುವರು ॥ ೧೯೭

ಈ ಪರಿಯಲಿ ವೇಶ್ಯಾ ವಾಟ ನವ ಪುಷ್ಪ
ಚಾಪನ ಬಂಡಾರದಂತೆ ।
ರೂಪು ವಡೆವ ಶ್ರೀರಂಗ ಪಟ್ಟಣದಲ್ಲಿ
ತಾ ಪಿರಿದಾಗಿ ರಂಜಿಸಿತು ॥ ೧೯೮

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದೆ ಸು ಧರ್ಮಾನುಬಂಧಿ ॥ ೧೯೯

೬ನೆಯ ಸಂಧಿ ಸಮಾಪ್ತಂ

---

# ಏಳನೆಯ ಸಂಧಿ.

(ಅರಮನೆಯ ವರ್ಣನೆ)

ಸೂಚನೆ || ಅರಮನೆ ರಂಗೇಶನ ಗುಡಿ ನರಸಿಂಹ
ನಿರುವ ಮಂದಿರವ ವರ್ಣಿಸುವೆ ||

ಮತ್ತೆ ಮೆರೆವ ಶಶಿ ರವಿ ವೀಧಿಗಳೊಳ
ಗಿತ್ತರದಲಿ ಸಾಲು ಗೊಂಡು |
ಸುತ್ತಣ ದೊರೆ ಮನ್ನೆಯರುಪ್ಪರಿಗೆಗ
ಳಿತ್ತುವು ಕಣ್ಗೆ ಕೌತುಕವ || ೧

ಸೊಗಸುವ ಸಾಲ ಹರ್ಮ್ಯಾಗ್ರದ ಕಳಸದೆ
ಝಗ ಝಗಿಸುವ ಹೊನ್ನ ಕಾಂತಿ |
ಗಗನ ಮಂಡಲದ ಸೂರ್ಯನ ದಿವ್ಯ ಕಿರಣವ
ಮಿಗುವುದದೇನ ಬಣ್ಣಿಪೆನು || ೨

ನೆಲ ಮಾಡದಗ್ರದೊಳೊಪ್ಪುವ ಮುತ್ತಿನ
ಪಳುಕಿನ ಧವಳ ವರ್ಣಗಳ |
ಬೆಳುದಿಂಗಳೆಂದಾಗ ಜೊನ್ನ ವಕ್ಕಿಗಳೈದಿ
ನೆಲಸಿದುವತಿ ಮುದದಿಂದ || ೩

ಮಿರುಗುವ ಸಾಲ ಸೆಜ್ಜೆಯಲಿ ತೆತ್ತಿಸಿದ ಕೆಂ
ಬರಲ್ಗಳ ದೀಧಿತಿ ಯೆಸೆಯೆ |
ಅರುಣಾಬ್ಜವೆಂದು ಮೋಹಿಸಿ ತುಂಬಿ ಹಿಂಡುಗ
ಳೆರಗುವುವತಿ ಸಂಭ್ರಮದಲಿ || ೪

ಮಿಸುಪ ಬೆಳ್ಳುಪ್ಪರಿಗೆಗಳೊಳು ಪಚ್ಚೆಯ
ಪೊಸತಾದ ಪಟಗಳೊಪ್ಪಿರಲು ।
ಉಸಿರಲಚ್ಚರಿ ತಮ್ಮ ಕುಲವೆಂದು ಗಿಳಿವಿಂಡು
ಮುಸುಕಿಹುವತಿ ಪ್ರೀತಿಯಿಂದ ॥ ೫

ನೆಲ ಮಾಡ ಬೆಳ್ಮುಗಿಲ್ ನವ ರತ್ನ ತೋರಣ
ಹೊಳವಿಂದ್ರ ಚಾಪಗಳೆಂದು ।
ಲಲನೆಯ ಕಣ್ಣಾಡಿ ಮಿಂಚೆಂದು ಚಾತಕ
ನಲಿವುವು ಮಳೆ ಗಾಲವೆಂದು ॥ ೬

ನೆಲೆಯುಪ್ಪರಿಗೆಗಳ ನಿರ್ಮಲ ಸ್ಫಳದೊಳು
ಸುಳಿವಂಗನೆಯರ ಸೋರ್ಮುಡಿಯು ।
ವಿಲಸಿತ ಕಾರ್ಗಾಲದ ಮುಗಿಲೆಂದಾಗ
ಸಲೆ ನಟಿಸುವುವು ಸೋಗೆಗಳು ॥ ೭

ಇತ್ತರದೊಳಗೊಪ್ಪುವ ರಾಜ ಗೇಹದ
ಮುತ್ತಿನ ಬಾಗಿಲಿದಿರೊಳು ।
ಚಿತ್ತರವಹ ಮಿಸುನಿಯ ನವಿಲುಯ್ಯಾಲೆ
ಯಿತ್ತುವು ಕಣ್ಗೆ ಕೌತುಕವ ॥ ೮

ಬಾಗಿಲ ಮುಂದಣ ನವಿಲುಯ್ಯಲನೇರಿ
ತೂಗುತಿರ್ಪಳ ವೆಣ್ಣುಗಳ ।
ಸೋಗೆ ಗಣ್ಮರಿ ಮೀನು ಸುಳಿದಾಡುವ ಜನ
ಸಾಗರದೊಳಗೊಪ್ಪುತಿಹುವು ॥ ೯

ತೇಜಿಗಳನು ಕುಣಿಸುವರು ಕಲಭವನು
ಮಾಜದೆ ಬೀದಿ ವರಿಸುವ ।
ರಾಜ ಕುಮಾರರ ಸೌಭಾಗ್ಯ ನೆರೆ ವಿ
ಭ್ರಾಜಿಸಿತಾ ಕೇರಿ ಯೊಳಗೆ ॥ ೧೦

ತಗರ ತಲೆಗೆ ಜಂಬೀರದ ಪುಳಿ ಯಿಟ್ಟು
ಮಿಗೆ ನಸೆ ಯೇರಿಸಿ ನಗುತ ।
ಜಗಳವ ಕಾದಿಸುತಿಹ ರಾಜ ಪುತ್ರರು
ಸೊಗಸಿದರಾ ಬೀದಿಯೊಳಗೆ ॥ ೧೧

ಕುಕ್ಕುಟಗಳ ಕಾಲ್ಗೆ ಚೀಲಾಯುಧವಿಕ್ಕಿ
ಸೊಕ್ಕು ಮದ್ದಿನ ಗುಟುಕಿತ್ತು ।
ಉಕ್ಕಂದದೆ ಕಾದಿಸಲಸು ಮಕ್ಕಳ ಮೊತ್ತ
ಕಿಕ್ಕಿರಿದೆಸೆದುದರ್ತಿಯೊಳು ॥ ೧೨

ನವ ರತ್ನ ಗೇಹದ ಬಾಗಿಲ ವೇದಿಯೊ
ಳವನೀಶ್ವರರ ನಂದನರು ।
ತವಕದೆ ಸಿಸಲೆ ಪಕ್ಕಿಗಳ ಕಾದಿಸುತಿಹ
ಸು ವಿಲಾಸವನೇ ವೇಳ್ವೆ ॥ ೧೩

ಗೌಜಲ ಪಕ್ಕಿಯು ಕಾಳಗವನು ಬಹು
ಮೋಜಿನಿಂದಲಿ ಮಾಡಿಸುವರು ।
ಈ ಜಗದಲ್ಲಿ ಯಿದಕೆ ಸಮನಿಲ್ಲೆಂದು
ಸೋಜಿಗಪಡುತಿರ್ಪರವರು ॥ ೧೪

ಜಾತಿಯು ಕುಕ್ಕುಟಗಳ ಕಾಲ್ಗೆ ಗಗ್ಗರ
ಪ್ರೀತಿಯಿಂದಲೆ ತಾವು ಹಾಕಿ ।
ರೀತಿಯನರಿತು ಕಾಳಗವನು ಬಿಡುತಿಹ
ರೀತೆರನೇನ ಬಣ್ಣಿಪೆನು ॥ ೧೫

ಗೊಳಿ ಕಾಳಗಗಳ ಧೂಳಿಯ ನೋದೊಳು
ಕೇಳಿಯು ಚೌಕವ ಮಾಡಿ ।
ಕಾಳಗವನು ಮಾಡಿಸುವ ರಾಜ ಪುತ್ರರ
ಸಾಲುಗಳಿರುತಿರ್ಪುವಲ್ಲಿ ॥ ೧೬

ಗರಡಿಯೊಳಗೆ ಸಾಧನ ಗೈದು ಗೇಹದೊ
ಳಿರುವ ಜಲವ ಮೇಲೆ ಧರಿಸಿ ।
ಮಿರುಪ ಕುಂಕುಮ ವಸನದ ಕೈ ಸಾಣೆಯ
ದೊರೆಗಳ ಕುವರರೈದಿಹರು ॥ ೧೭

ಪೇತು ಸಾಧನೆಗಳ ಜೋಕಿನ ಪಟವನ್ನು
ರೀತಿ ತಿಳಿದು ವರಸೆಗಳ ।
ನೂತನ ಕತ್ತಿ ಕಠಾರಿ ದೊಣ್ಣೆಯ ಸಾಧ
ಕೋತ್ತಮ ರಾಜ ಕುವರರು ॥ ೧೮

ಮುತ್ತಿನ ದಡ್ಡಿಯ ಪಲ್ಲಕ್ಕಿ ಯೇರಿ ತ
ಮ್ಮೊತ್ತಿನೊಳ್ಬಹ ಕೆಳದಿಯರ ।
ಮೊತ್ತದೆ ದೊರೆ ಕುವರಾರತಿಯುರಾ ಬೀದಿಯೊ
ಳರ್ತಿಯೊಳಡೆಯಾಡುತಿಹರು ॥ ೧೯

ದೊರೆಗೆ ಕಾಣಿಕೆ ಯೀವ ವಸ್ತು ವಾಹನಗಳ
ಪಿರಿದು ಸಂದಣಿಯ ಸಾಲಿನಲಿ ।
ಅರಮನೆಗೈದುವ ಮನ್ನೆಯರುಗಳಾಗ
ಮೆರೆದರು ತಂಡ ತಂಡದಲಿ ॥ ೨೦

ಪರಿ ಪೂರ್ಣ ಚಂದ್ರನ ಪ್ರಭೆಯ ಸೋಲಿಸುತಾಗ
ನೆರೆ ದಿವ್ಯ ಧವಳ ವರ್ಣದಲಿ ।
ನರಸ ಭೂ ವರನರಮನೆಯ ವಜ್ರದ ಕೋಟೆ
ಪರಿ ಶೋಭಿಸುವುದುನ್ನತದೆ ॥ ೨೧

ನರಸ ರಾಜೇಂದ್ರನ ಭಾಗ್ಯ ಲಕ್ಷ್ಮಿಯ ಮುಖ
ಸರಸಿಜದೆಸಳುಗಳಂತೆ ।
ಅರಮನೆಯತುಳ ಶಾಲಾಗ್ರದ ಮೆರೆವ ಪೊಂ
ಗರುವಿನ ತೆನೆಗಳೊಪ್ಪಿದುವು ॥ ೨೨

* ಈ ಪದ್ಯದ ಅರ್ಥವು ಅನನ್ವಿತವಾಗಿದೆ.

ರಜತಾದ್ರಿ ಪಲವು ರೂಪನು ತಾಳಿ ಭೂಪನ
ನಿಜ ಗೇಹ ಪ್ರಾಕಾರದೊಳಗೆ ।
ವಿಜಯ ಲಕ್ಷ್ಮಿಗೆ ಬೀಡಾರವಾದೊಲು ಹರ್ಮ್ಯ
ತ್ರಿ ಜಗಕಚ್ಚರಿಯ ಬೀರಿದುವು ॥ ೧೩

ಸಲೆ ನರಸೇಂದ್ರನ ಕುಲ ಛಲ ವಿತರಣ
ಬಲ ಧೈರ್ಯಗಳುನ್ನತಿಯ ।
ಗೆಲವಿಂದ ದಿಗ್ದೇಶಕರುಪುವಂತಾಗಲಾ
ನೆಲೆಯುಪ್ಪರಿಕೆಗಳೊಪ್ಪಿದುವು ॥ ೧೪

ನೆರೆ ಜಯ ಸಿರಿ ಭಾಗ್ಯ ಸಿರಿ ಶಾರದ ಲಕ್ಷ್ಮಿ
ಪಿರಿದಪ್ಪ ಧೈರ್ಯ ಲಕ್ಷ್ಮಿಯರು ।
ನರಸೇಂದ್ರಗೊಲಿದಿರಲವರ ಮುಖಾಬ್ಜದೊ
ಲ್ಮೆರೆದುವುಪ್ಪರಿಗೆ ಚೌದೆಸೆಯ ॥ ೧೫

ಇಂತೊಪ್ಪುತಿಹ ದಿವ್ಯ ಧವಳದುಪ್ಪರಿಗೆಗ
ಳಂತರಾಂತರದ ಭಿತ್ತಿಯಲಿ ।
ಸಂತೋಷದೆ ಮೋಹ ರಸವ ಸೂಸುತ ಚೆ
ಲ್ವಾಂತ ಪುತ್ತಳಿಗಳೊಪ್ಪಿದುವು ॥ ೧೬

ಭಾರತ ರಾಮಾಯಣ ಭಾಗವತದ ಶೃಂ
ಗಾರದ ಕಾವ್ಯ ನಾಟಕದ ।
ಚಾರುತರದ ಪೊನ್ನ ಪುತ್ತಳಿಗಳ ಶೃಂ
ಗಾರವನೇನ ಬಣ್ಣಿಸುವೆ ॥ ೧೭

ಅರಸಂಚೆ ಸೋಗೆ ನವಿಲು ಬಣ್ಣ ಗೋಗಿಲೆ
ಹರಿ ರಥಾಂಗದ ಪ್ರತಿಮೆಗಳು ।
ಮೆರೆದುವು ಚೌದೆಸೆಯುಪ್ಪರಿಗೆಗಳೊಳು
ಸ್ಮರ ಧೀರನ ಬಲದಂತೆ ॥ ೧೮

ಆನೆ ವರಾಹ ಕೊಳ್ಕ್ರೀಣ ಪೆರ್ಬುಲಿ ಸಿಂಹ
ವೇನೆಂಬೆ ಹರಿಣ ಭೇರುಂಡ ।
ನಾನಾ ಬಗೆಯ ಮೃಗಾಂಕಿತವೆಸೆದಿಹ
ವೇನ ಬಣ್ಣಿಪೆ ಹರ್ಮ್ಯಗಳಲಿ ॥ ೧೯

ಮಿರುಗುವ ಹೊಸ ಪೊನ್ನ ಕಂಬ ಪಟ್ಟೋಳಿಯು
ಸರ ಗೊಂಡೆಯುದ ಲೋವೆಯಿಂದ ।
ವರ ರತ್ನದ ಪ್ರತಿಮೆಗಳಿಂದ ಭೂಪನ
ಹಿರಿಯ ಹಜಾರವೊಪ್ಪಿದುದು ॥ ೨೦

ಸುರಪನಾಸ್ಥಾನ ಮಂಟಪದ ಶೃಂಗಾರದ
ಪರಿವಿಡಿಯನು ಸೋಲಿಸುತ ।
ಮಿರುಗುವ ಬಾಲಾರ್ಕ ತೇಜವ ಸೂಸುತ
ವರ ಚಿತ್ರ ಶಾಲೆ ಯೊಪ್ಪಿದುದು ॥ ೨೧

ಪಕ್ಷಿ ವಾಹನಗೆ ಪದ್ಮಜನೈದಿ ಕೌಶಲಾ
ಪೇಕ್ಷೆಯೊಳಗೆ ನಿರ್ಮಿಸಿದ ।
ರಕ್ಷಾ ಮಂಟಪವೆನೆ ದಿವ್ಯ ಕಾಂತಿಯಿಂ
ಲಕ್ಷ್ಮೀ ವಿಲಾಸ ವೊಪ್ಪಿದುದು ॥ ೨೨

ಭರ್ಗ ಸಖನ ಭಂಡಾರದ ನವ ರತ್ನ
ವರ್ಗದ ಬಿತ್ತಿಗಳಿಂದ ।
ದೀರ್ಘವಡೆದು ದಿವ್ಯ ಕಾಂತಿಯ ಬೀರುತ
ದುರ್ಗಾ ಮಂಟಪವಿಹುದು ॥ ೨೩

ಧಾರಿಣಿಗತಿ ಸೊಬಗಲಿ ಗಿರಿ ಸುತೆಯ ಶೃಂ
ಗಾರದ ಕಲ್ಯಾಣಗಳ ।
ಚಾರು ತರದ ಚೆಲ್ವ ಚಿತ್ತರದಿಂದಲಾ
ಶಾರದಾ ಮಂಟಪ ವಿಹುದು ॥ ೨೪

ನವ ರತ್ನಗಳ ಕಂಭ ಮಿಸುನಿಯು ಬೋದಿಗೆ
ತವೆ ಯಿಂದ್ರಗೋಪದ ಲೋವೆ ।
ಪವಳ ಮಣಿಯು ಮೇಲ್ಕಟ್ಟಿನ ಸೊಬಗಿಂದ
ಭುವನೇಶ್ವರಿ ಯೊಪ್ಪಿದುದು ॥ ೩೫

ಅರ ಗಿಳಿ ನವಿಲು ಕೋಗಿಲೆ ಕೊಂಚೆ ಕೊಳರ್ವಕ್ಕಿ
ಸುರ ನಾರಿಯುರ ವಿಲಾಸಗಳ ।
ಹರುಷದೆ ಬೀರುತ ಹೊಳೆವ ಪುತ್ತಳಿಗಳಿಂ
ವರ ನಾಟಕ ಶಾಲೆ ಯಿಹುದು ॥ ೩೬

ಕಂದರ್ಪ ರತಿಯು ವಿವಾಹೋತ್ಸವಕಜ್ಜ
ನಂದನ ಮಿಗೆ ವಿರಚಿಸಿದ ।
ಬಂಧುರ ವಡೆದ ಮೋಹನ ಶಾಲೆ ಯುಂನದೆ
ಯಿಂದಿರಾ ಮಂದಿರ ವಿಹುದು ॥ ೩೭

ಶೃಂಗಾರದಾಗರ ಸುಖ ಮಯು ಸಾಗರ
ಮಂಗಲಾರ್ಥಕೆ ನೆಲೆ ವೀಡು ।
ಕಂಗೊಳಿಸುವ ದಿವ್ಯ ಕಾಂತಿಯು ತೀಡುತ
ಬಂಗಾರ ಚೌಕಿ ಯೊಪ್ಪಿದುದು ॥ ೩೮

ಮುದವಡೆದೆಸೆವ ಚೌರಾಸೀತಿ ಬಂಧದ
ವಿಧದ ರತಿಯು ತೋರಿ ಮೆರೆವ ।
ಪುದುಗಿದ ನವ ರತ್ನದ ಪ್ರತಿಮೆಗಳಿಂದ
ಮದನ ವಿಲಾಸ ರಂಜಿಸಿತು ॥ ೩೯

ಬಳಸಿಕೊಂಡಿಹ ರತ್ನ ಜಾಳಾಂದ್ರ ಭಿತ್ತಿಯೊ
ಳಳವಟ್ಟು ಮೋಹವ ಬೀರ್ವ ।
ವಿಲಸಿತ ಪ್ರತಿಮೆಗಳಿಂದಾಗ ಸೌಂದರ್ಯ
ನಿಳಯು ರಾಜಿಸಿದುದತಿಯಲಿ ॥ ೪೦

ಸುಜನ ರಕ್ಷಾ ಮಣಿ ಕಂಠೀರವೇಂದ್ರನ
ಭುಜ ಲಕ್ಷ್ಮಿ ನಲಿದು ರಾಜಿಸುವ ।
ನಿಜವಾದ ನವ ರತ್ನ ಕಾಂತಿಯು ಬೀರುವ
ವಿಜಯ ಭವನ ವೊಪ್ಪುತಿಹುದು ॥ ೪೧

ದಿಟ್ಟಿಗೆ ನೂತನವಾದವರಂಜಿಯ
ಕಟ್ಟಿರಕದ ಭಿತ್ತಿಯಿಂದ ।
ಸೃಷ್ಟೀಶನ ರಾಣಿಯರ ನವ ರತ್ನದ
ತೊಟ್ಟಿಗಳಿಹುವರ್ತಿಯಲಿ ॥ ೪೨

ಮಿಸುನಿ ಗಂಬದ ಪಟ್ಟಸಾಲೆ ನಾನಾ ಬಗೆ
ಯೆಸೆವ ಮೇಲ್ಕಟ್ಟುಗಳಿಂದ ।
ಜಸವ ಬೀರಿದುವು ನಾಟಕ ಶಾಲೆ ಯುಬಲೆಯ
ರೆಸೆದಿಹ ಮಣಿ ಮಯ ಭವನ ॥ ೪೩

ಜ್ಯೋತಿಷ ಕಾವ್ಯ ನಾಟಕ ಶಾಸ್ತ್ರ ಸಂಗೀತ
ರೀತಿ ಕೋವಿದೆಯರೊಪ್ಪಿರುವ ।
ನೂತನವಹ ಭವನಗಳಾಗ ನವ ರತ್ನ
ಜಾತ ಬೀರುತಲೊಪ್ಪಿಹುವು ॥ ೪೪

ರಾಜೀವ ಮುಖಿಯರಾಭರಣದ ಕಾಂತಿ ವಿ
ಭ್ರಾಜಿಸಿ ಮೆರೆಯಲಾಸ್ಥಳದೆ ।
ರಾಜಶೇಖರ ಕಂಠೀರವ ಭೂಪನ
ಭೋಜನ ಶಾಲೆ ಯೊಪ್ಪಿಹುದು ॥ ೪೫

ಬಳಬೊಕ್ಕಸ ಪೂರ್ಣ ಭಂಡಾರದ ಪೊನ್ನ
ನಿಳಯಗಳತಿ ಸೊಬಗಿನಲಿ ।
ತೊಳಗಿದುವರಸನ ಸೌಭಾಗ್ಯದ ಬಲು
ಬೆಳಸನದೇನ ಬಣ್ಣಿಸುವ ॥ ೪೬

ಬಿಡದೊಪ್ಪುವೊಳ್ ಉಗ್ರಾಣ ನಾನಾ ಬಗೆ
ಷಡುರಸಾನ್ನಗಳ ಪಾಕಗಳ ।
ಕಡು ಚೆಲ್ವ ಗೃಹಗಳಂದರ ಮನೆಯೊಳು ಬಲು
ಬೆಡಗ ಬೀರಿದುವರ್ತಿಯಲಿ ॥ ೪೭

ಇಳೆಯೊಳೊಪ್ಪುವ ವೈರಿ ನೃಪರ ದಂಡಿಸಿ ನೆರೆ
ಸೆಳೆದು ತಂದಾಯುಧದ ಶಾಲೆ ।
ತೊಳಗಿದುವವನೀಶ್ವರನರ ಮನೆಯೊಳ
ಗಳವಟ್ಟು ಬಲು ಸೊಗಸಿಂದ ॥ ೪೮

ಪಾತಾಳ ಗಂಗೆ ಕಂಠೀರವೇಂದ್ರನ ಶೌರ್ಯ
ದಾತೃತ್ವಗಳ ನೋಡಲೆಂದು ।
ಪ್ರೀತಿಯಿಂದರ ಮನೆಯೊಳಗೈದಿದೊಲ್ಜನ
ನೂತನ ಗಾಲ್ವೆ ಯೊಪ್ಪಿದುದು ॥ ೪೯

ವರ ಪಾರಿಜಾತಾದಿ ಕುಸುಮದ ಪರಿಮಳ
ವೆರಸಿ ಮೆರೆವ ಚೈತ್ರ ರಥದ ।
ಪರಿವಿಡಿಯನು ತೋರುತೊಪ್ಪುವುದಂತಃ
ಪುರದಿರುವುದ್ಯಾನ ವನವು ॥ ೫೦

ತಾರೆಗಳತಿ ಶುಭ್ರವಿಡಿದಿರ್ದರೆಮ್ಮಂತೆ
ಸೌರಭ್ಯವಿಲ್ಲೆಂದು ಜರೆದು ।
ಸೇರದೆ ನಸು ನಗುವೊಲು ಬಿರಿ ಮುಗುಳ ಶೃಂ
ಗಾರದ ಮಲ್ಲಿಗೆ ಯಿಹುವು ॥ ೫೧

ಹರಿ ನಿನ್ನ ಸಗ್ಗವೆಂಗಳ ತನು ಕಾಂತಿಗಳ್
ಪರ ನಾಸಿಕದ ಸೊಬಗೆಮ್ಮ ।
ಅರಳೊಳಗಿದೆ ಯೆಂದು ತೋರ್ಪೊಲು ನಭಕುಬ್ಬಿ
ಮೆರೆದುವು ಸಂಪಗೆ ನಗುತ ॥ ೫೨

ಜೀವನದೊಳಗೆವ್ಮರಳನೊಂದಿಸಿ ನರೆ
ಸೇವಿಸಿದವರ ಶ್ರಮಗಳ ।
ಗಾವಳಿಯನು ಪರಿದಪೆವೆಂದು ನಲು ಗಂಪು
ತೀವಿದ ಪಾಟಲಿ ಯಿಹುವು ॥ ೫೩

ಪ್ರೀತಿಯಿಂ ಮಾಧವ ಸಂಗಗೊಳಿರೆ ಶಂಬಿ
ಘಾತಿಪುವೆಮ್ಮನೆಂದಂಜಿ ।
ಆತನ ವರ್ಜಿಸಿ ಮಾಗಿಯು ಕಳಗೊಂಡು
ಜಾತಿಯು ಪುಷ್ಪವೊಪ್ಪಿದುವು ॥ ೫೪

ಒಡನಾಗ ಸುರ ನರರಿಗೆ ಜಾಜಿ ಮಂದಾರ
ಕಡು ಪರಿಮಳವಿತ್ತುವೆಂದು ।
ಬಿಡದೆ ಪಾತಾಳಕೆ ಸೌರಭ್ಯವೀವಂತೆ
ಮುಡಿವಾಳ ಲಾಮಂಚವಿಹುವು ॥ ೫೫

ಉರಗೇಂದ್ರ ತನ್ನ ಲೋಕದ ಪರಿಮಳವನು
ನರರಿಗೆ ಕಳುಹಿದಂದದಲಿ ।
ಪರಿ ಪೂರ್ಣಮಹ ದಿವ್ಯ ವಾಸನೆಯಿಂದಲಿ
ಮರುಗದ ಮಸಗಳೊಪ್ಪಿದುವು ॥ ೫೬

ಉಳಿದ ನಾನಾ ಪರಿಮಳ ಪುಷ್ಪ ಲತೆ ಫಲ
ವೆಳಸಿದ ಕಲ್ಪ ವೃಕ್ಷಗಳು ।
ತೊಳಗುವ ರಾಜ ಕೇಳೀ ವನದೊಳಗಾಗ
ಬಳಸಿಹುದೇನ ಬಣ್ಣಿಸುವ ॥ ೫೭

ಇಂತೊಪ್ಪುವರ ಮನೆಯಲಿ ಭಾಗ್ಯ ಲಕ್ಷ್ಮೀ
ಕಾಂತನಾಗಿಯೆ ಹರುಷದಲಿ ।
ಕಂಬು ಸನ್ನಿಭ ಕಂಠೀರವ ನರಸೇಂದ್ರ
ಸಂತತ ಧರೆಯ ಪಾಲಿಸಿದ ॥ ೫೮

ಧರೆಯ ಸ್ಥೈರಣೆ ಘನ ರಾಜನ ದಾತೃತ್ವ
ವರ ದಿನ ಮಣಿಯ ಪ್ರತಾಪ ।
ಸುರ ನಾಥನ ದಿವ್ಯ ಭೋಗ ಕಂಠೀರವ
ನರಸ ರಾಜೇಂದ್ರಗೊಪ್ಪಿಹುವು ॥ ೫೯

ನರೆ ರಜತಾದ್ರಿಗೆ ಬೆರಗಿತ್ತು ಗಂಗೆಯು
ನಿಂದೋಡಿಸ್ಯೈರಾವತವ ।
ವರ ಬುದಿ ಹೀನನ ಮಾಡಿ ಭೂಪನ ಕೀರ್ತಿ
ಚರಿಸುತಿಹುದು ತ್ರಿಜಗದಲಿ ॥ ೬೦

ರವಿ ಕುಲದವನಿಪರುಗಳ ಪ್ರತಾಪವ
ತವೆ ರಾಮ ಕಥೆಯಲಿ ಕೇಳಿ ।
ಭುವನೇಶ ಕಂಠೀರವ ನರಸೇಂದ್ರನು
ತ್ಸಾದೊಳು ನಲಿವನೇ ಕೇಳ್ವ ॥ ೬೧

ಸೋಮ ವಂಶದ ರಾಯರುಗಳ ಸು ಧರ್ಮೋ
ದ್ದಾಮ ಸನ್ಮಾರ ವರ್ತನವ ।
ಪ್ರೇಮದೆ ಭಾರತದಲಿ ಕೇಳಿ ನಲಿವನಾ
ಭೂಮಿಪನತುಳ ಸಂತಸದೆ ॥ ೬೨

ಹಿರಿದು ಭಾಗವತ ಪುರಾಣ ಪ್ರಸಂಗವ
ಪರಮೋತ್ಸವದಲಿ ಕೇಳಿ ।
ಹರಿ ಹರ ಭಕ್ತಿಯೊಳಿರುವನಾ ನೃಪನ ಸು
ಚರಿತವನೇನ ಬಣ್ಣಿಸುವೆ ॥ ೬೩

ರಾಮ ಸಮಾನ ಸು ಶೌರ್ಯನುದಾರನು
ಭೀಮಾನುಜ ಬಲ ಯುತನು ।
ಸೋಮಾನ್ವಯ ಸುರ ಭೂಜನೀ ರಾಜನು
ಪ್ರೇಮದೆ ರಾಜಿಸುತಿಹನು ॥ ೬೪

ಪುಸಿ ನುಸುಳನ್ಯಾಯ ಠೌಳಿ ವಂಚನೆಗಳು
ವಸುಧೇಶನಾಳ್ವ ರಾಜ್ಯದಲಿ ।
ಮಿಸುಕಲಮ್ಮವು ನರಸೇಂದ್ರನಾಜ್ಞೆಯದೊಂ
ದೆಸಕವ ಬಣ್ಣಿಪರಾರು ॥ ೬೫

ಆರಡಿ ವರ ಮಧುಕರನೊಳು ಬೀಕ ಸ
ದಾರುಣತೆ ಪದ್ಮರಾಗದಲಿ ।
ತೋರಿಹುವಲ್ಲದೆ ನರಸೇಂದ್ರ ಪಾಲಿಪ
ಧಾರಿಣಿ ಜನದೊಳಗಿಲ್ಲ ॥ ೬೬

ನೀತಿ ವಿದ್ಯಾ ಪರಿಣತಿ ಬಹು ಧರ್ಮದ
ರೀತಿ ನಿತ್ಯೋತ್ಸವಗಳಲಿ ।
ಭೂತಳೇಶ್ವರನ ರಾಷ್ಟ್ರದ ಜನರಿರುವ ಸು
ಖಾತಿಶಯವನೇನೆಂಬೆ ॥ ೬೭

ಒಡನೆ ಭೂಮಿಯನಾಳುವ ಪ್ರಭು ಮನ್ನೆಯ
ಗಡಣ ಸಂತೋಷದೆ ಬಂದು ।
ಪೊಡವಿಪ ಕಂಠೀರವ ನರಸೇಂದ್ರನ
ಬಿಡದೋಲೈಪರತಿಹಿಯಲಿ ॥ ೬೮

ಸಿರಿ ಲಕ್ಷ್ಮಿ ಜಯ ಲಕ್ಷ್ಮಿ ಶಾರದಾ ಲಕ್ಷ್ಮಿಯಾ
ವರ ಕೀರ್ತಿ ಲಕ್ಷ್ಮಿಯರಂತೆ ।
ಪರಿ ಶೋಭಿಸುವ ರಾಜ ಪುತ್ರಿಯರನು ಭೂಪ
ಪರಿಣಯವಾಗಿ ರಂಜಿಸಿದ ॥ ೬೯

ಮಿಗೆ ಯೊಂದು ಶುಭ ದಿವಸದೆ ಗಿರಿ ರಾಜನ
ಮಗಳಂತೆ ಮಾಂಗಲ್ಯ ವೆರೆದ ।
ಸುಗುಣ ಸುಚರಿತ ಗಾತ್ರಿಯು ರಾಜ ಪುತ್ರಿಯ
ನಗುತ ವಿವಾಹವಾಗೆಸೆದ ॥ ೭೦

ಪತಿ ಭಕ್ತಿಗೆ ಪಾರ್ವತಿ ಯೆಂದು ಚಲುವಿನೊ
ಳತಿಶಯ ಸಿರಿ ದೇವಿ ಯೆಂದು ।
ವಿತತ ಜಾಣ್ಮೆಗೆ ಶಾರದೆ ಯೆಂದು ಭೂಪನ
ಸತಿಯ ಜಗವು ಪೊಗಳುವುದು ॥ ೨೧

ಇಳೆಗಚ್ಚರಿಯಾಗಿ ಪಂಚ ಕಲ್ಯಾಣವ
ತಳೆದು ಮಹಾ ವೈಭವದೆ ।
ಬೆಳಗುತ ಸಕಲ ಸಾಮ್ರಾಜ್ಯ ಲಕ್ಷ್ಮಿಯ ಕೆಳ
ಯೊಳಗೆ ರಂಜಿಸಿದ ಭೂಪಾಲ ॥ ೨೨

ಇಂತೊಪ್ಪುತಿಹ ಭೂವರನ ಭಕ್ತಿಗೆ ಮೆಚ್ಚಿ
ಸಂತೋಷವ ತಾಳಿ ನಗುತ ।
ಕಂತು ಜನಕ ಲಕ್ಷ್ಮೀ ನರ ಸಿಂಹ ಶು
ದ್ಧಾಂತದೊಳಗೆ ರಾಜಿಸಿದ ॥ ೨೩

ಸರಸಿಜ ಭವನ ನೇಮದೆ ಸುರವರ್ಧಕಿ
ಹರುಷದೊಳಗೆ ಕೈಗೈದ ।
ಪಿರಿದು ಸಿಂಗರ ಶಾಲೆ ಯೆನೆ ದಿವ್ಯ ಪ್ರಾಕಾರ
ಪರಿಶೋಭಿಸಿದುದರ್ತಿಯಲಿ ॥ ೨೪

ಮಿಸುನಿ ಗಂಬಗಳ ಮೇಲೆಸೆದಿಹ ಚೌಕದ
ಪೊಸ ನವ ರತ್ನ ಬೋದಿಗೆಯ ।
ಪ್ರಸರದ ಕಾಂತಿ ಚೌ ದೆಸೆಯ ಮುಸುಕಿ ತಮ
ದೆಸಕವ ಪರಿ ಹರಿಸಿಹುದು ॥ ೨೫

ಆವ ದಿಕ್ಕಿನಲಿ ನಿಟ್ಟಿಸಿ ನೋಡಲು ಚೆಲ್ವ
ದೇವ ಗಿರಿಯ ಪಟ್ಟೆಗಳ ।
ತೀವಿದ ಮೇಲ್ಕಟ್ಟಿನಿಂದ ಶ್ರೀ ನರ ಸಿಂಹ
ದೇವನ ನಿಳಯ ರಾಜಿಸಿತು ॥ ೨೬

ಮಿರುಪ ಮಾಣಿಕ ನೀಲ ಮೌಕ್ತಿಕಗಳ ಕಾಂತಿ
ಮೆರೆಯಲಾ ದೇವನ ಭವನ ।
ಸರಸತಿ ಯಮುನೆ ಗಂಗೆಗಳ ಸಂಗಮದಂತೆ
ಪರಿಶೋಭಿಸಿದುದೇ ವೇಳ್ವ ॥ ೭೭

ಥಳಥಳಿಪುದಯಾಚಲಾಗ್ರದೊಳಗೆ ಮೂಡು
ವೆಳನೇಸರಂತೆ ರಾಜಿಸುತ ।
ನಳಿನ ದಳಾಕ್ಷನ ಗುಡಿಯ ಶಿಖರದ ಮೇ
ಲಳವಟ್ಟುದು ಹೊನ್ನ ಕಳಸ ॥ ೭೮

ಬೃಂದಾವನ ಪೊನ್ನ ದೀಪ ಮಾಲೆಯ ಕಂಭ
ಬಂಧುರವಹ ಮಂಟಪಗಳು ।
ಇಂದೀವರಾಕ್ಷ ಶ್ರೀ ನರ ಸಿಂಹನ ದಿವ್ಯ
ಮಂದಿರದಿದಿರೊಳೊಪ್ಪಿಹುವು ॥ ೭೯

ಸುಲಲಿತೋತ್ಸವ ಮಂಟಪಗಳು ವಾಹನ
ನೆಲಸಿಹ ಮಣಿ ಮಂಟಪಗಳು ।
ಅಳವಟ್ಟು ದೇವನ ಗುಡಿಯ ಪ್ರಾಕಾರದೆ
ಥಳಥಳಿಸುತಲೊಪ್ಪಿಹುವು ॥ ೮೦

ಮಿರುಗುವ ಮಣಿ ಮಯ ಗರ್ಭಾಗಾರದೆ
ನೆರೆ ಭೂಷಣಾನ್ವಿತನಾಗಿ ।
ನರಸ ಭೂಪಾಲನಿಗಿಷ್ಟಾರ್ಥವೀಯುತ
ನರಸಿಂಹನಿರುವ ಲೀಲೆಯಲಿ ॥ ೮೧

ಹಸ್ತಿ ವರದ ಶ್ರೀ ಹರಿ ರವಿ ಕೋಟಿ ಗ
ಭಸ್ತಿ ವಿಶ್ರುತ ದಿವ್ಯಾಂಗ ।
ಕಸ್ತೂರಿ ರಂಗನಾಥನ ಚೆಲ್ವ ಗುಡಿಯ ಸು
ವಿಸ್ತಾರವನು ಬಣ್ಣಿಸುವೆನು ॥ ೮೨

ಸರಸಿಜ ಭವನ ನೇಮದಿ ಸುರ ವರ್ಧಕಿ
ಹರುಷದೊಳಗೆ ಕೈಗೈದ ।
ಪಿರಿದು ಸಿಂಗರ ಶಾಲೆ ಯೆನೆ ದಿವ್ಯ ಪ್ರಾಕಾರ
ಪರಿ ಶೋಭಿಸಿದುದರ್ತಿಯಲಿ ॥ ೮೩

ಬಾಲಾರ್ಕ ಬಿಂಬದೊಡನೆ ತೊಳಗುವ ಪೂರ್ವ
ಶೈಲ ರಾಜಿಸುವಂದದಲಿ ।
ಮೇಲಿಪ್ಪ ಚಿನ್ನದ ಕಳಸದಿಂ ಗೋಪುರ
ಥಾಳಸಿ ತುಡುಕಿತಂಬರವ ॥ ೮೪

ಸುರ ಪತಿ ಹರಿ ಸೇವೆಗೈದಿ ತಾ ಪಿಡಿದಿರ್ದ
ವರ ವಜ್ರ ದಂಡಾಯುಧವ ।
ಹರುಷದೊಳಿಂಬಿಟ್ಟೊಲು ದೀಪ ಮಾಲೆಯು
ಸು ರುಚಿರ ಕಂಭವೊಪ್ಪಿದುದು ॥ ೮೫

ಹರಿಯುದರದೊಳಿಹ ಹದಿನಾಲ್ಕು ಜಗಗಳ
ಪರಿ ಪರಿ ಯತುಳ ವಿಸ್ತಾರ ।
ಹೊರ ಹೊಮ್ಮಿ ತೋರ್ಪೊಲು ಬಹು ಬಗೆ ಪುತ್ತಳಿ
ಮೆರೆದುವೊಳ ಪ್ರಾಕಾರದಲಿ ॥ ೮೬

ವಾಹನ ಮಂಟಪವುತ್ಸವ ಮಂಟಪ
ಮೋಹನ ನಾಟ್ಯ ಮಂಟಪವು ।
ಊಹಿಸೆ ಕಡು ಚೆಲ್ವ ಚಿತ್ರ ಮಂಟಪ ಸ
ನ್ನಾಹದೆ ಮೆರೆದುವೇ ವೇಳ್ವ ॥ ೮೭

ಆವಾವ ದಿಕ್ಕಿನಲಿ ಪಟ್ಟೆಯ ಮೇಲ್ಕಟ್ಟು
ತೀವಿದ ಪೀತಾಂಬರದ ।
ಲೋವೆಗಳಿಂ ನವ ರತ್ನದ ಕುಚ್ಚಿಂದ
ದೇವಲ್ಯವೆಸೆದುದರ್ತಿಯಲಿ ॥ ೮೮

ಪರ ದಾರ ಗಮನನ ಧರಿಸಿದ ಪಾಪವ
ಹರಿ ಸೇವೆಯು ಮಾಡಿ ಪರಿಯೆ ।
ಎರಡು ರೂಪಾಂತ್ಯರಾವತವೆಂದೆನೆ
ಮೆರೆದುವು ಬಾಗಿಲಾನೆಗಳು ॥ ೪೯

ಅಂತರಾಂತರದ ಬಾಗಿಲ ಮಿಸುನಿಯು ದಂಡ
ವಾಂತಿಹ ದ್ವಾರ ಪಾಲಕರು ।
ಕಂತು ಪಿತನ ಸೇವಿಸುತ ಭಕ್ತಿಯಲಿ ಬಲು
ಸಂತೋಷದೊಳಿರುತಿಹರು ॥ ೯೦

ನಳಿನಾಕ್ಷ ರಂಗ ನಾಲಯದೊಳ ಪರಿಧಿಯು
ಪೊಳೆವ ಮಂದಿರಗಳೊಳಾಗ ।
ಚೆಲುವ ವರದ ರಾಜ ಮನ್ನಾರು ನರಸಿಂಹ
ಕೊಳಲ ಗೋಪಾಲರೊಪ್ಪಿವರು ॥ ೯೧

ವಾಮ ಭಾಗದಲಿ ಕಸ್ತೂರಿ ರಂಗ ನಾಯಕಿ
ಭೂಮಿ ದೇವಿಯರು ರಾಜಿಸುವ ।
ಹೇಮದ ಮಂದಿರವೆಸೆದುವು ನವರತ್ನ
ಧಾಮವೆ ಮಿಗೆ ಪಸರಿಸುತ ॥ ೯೨

ವಿಕಸಿತ ವಡೆದಂತರಾಳ ಗರ್ಭದ ಗೃಹ
ಶುಕನಾಸಿಯು ಮಂದಿರದೆ ।
ಬಕುತ ವತ್ಸಲ ಶ್ರೀ ರಂಗೇಶ ಸಾಪಸ್ತ್ರ
ಮುಖನ ತಲ್ಪದೊಳಸೆದಿಹನು ॥ ೯೩

ಝುಗಝುಗಿಪ ಪಳಿ ಪೀತಾಂಬರ ಮುಡಿಯೊಳು
ಸೊಗಸಾದ ರತ್ನ ಕಿರೀಟ ।
ಹೊಗರೊಗುವಾಭರಣದಲಿ ಪಶಿ ಮಂಗ
ಮಿಗೆ ಬೆಳಗಿದನು ದಿಕ್ತಟವ ॥ ೯೪

ಪೊಸ ಮುತ್ತಿನೊಡ್ಡೋಲಗದೆ ಯೋಗ ನಿದ್ರೆಯ
ಪಸರಿಸಿ ಲಕ್ಷ್ಮಿ ದೇವಿಯರು ।
ಕುಶಲದೆ ಪಾದ ಪದ್ಮವನೊತ್ತೆ ರಂಗೇಶ
ಜಸವ ಬೀರುತಲೊಪ್ಪಿದನು ॥ ೯೫

ಲೀಲೆಯಿಂ ಭಕ್ತರ ಪಾಲಿಪುದಕೆ ಶ್ರೀ
ಲೋಲನೈತಂದು ಪಟ್ಟಣವ ।
ಭೂಲೋಕವೈಕುಂಠವೆನಿಸುತೆ ಪ್ರೇಮದೆ
ಪಾಲಿಪ ಭಕ್ತ ವತ್ಸಲನು ॥ ೯೬

ಜಗವ ರಕ್ಷಿಪುದಕ್ಕೆ ಮಗಳ ವೇಕ್ಷ್ಮದೆ ನಿದ್ರೆ
ಸೊಗಸಿಂದ ಗೆಯ್ಯುವೆನಂತೆ ।
ಮಿಗೆ ರಾಜಿಪ ಶ್ರೀ ರಂಗ ಪಟ್ಟಣದಲ್ಲಿ
ಯೊಗುಮಿಗೆಯಿಂದ ರಾಜಿಪನು ॥ ೯೭

ಪರಿವ ಕಾವೇರಿ ಮಧ್ಯೋರ್ವಿಯೊಳಗೆನಿಲ್ಲು
ತೆರಗಿದ ಭಕ್ತರೊಳಘವ ।
ತರಿದು ಮುಕ್ತಿಯನೀವೆ ಖಗ ವಾಹನ ರಂಗ
ಪುರಿಯೊಳ್ತಾ ನೆಲಸಿರುವ ॥ ೯೮

ಸನ್ನುತದೆಂಬೆರುಮಾನಾರು ಹರುಷದೆ
ಪನ್ನೆರಡಾಳ್ವಾರುಗಳು ।
ಪನ್ನಗ ಶಯನಿಗೆ ಕರ ಕಮಲವ ಮುಗಿ
ದುನ್ನತ ತಪ ಗೆಯ್ಯುತಿಹರು ॥ ೯೯

ಅರುಣೋದಯದೆ ನಾನಾ ವಾದ್ಯ ರವದೊಳು
ಕರಿ ಶಿರಗಳ ಮೇಲಾಗ ।
ನರಸಿಂಹಗೆ ರಂಗೇಶಗೆ ಮಜ್ಜನ
ಪರಿಪೂರ್ಣದೆ ಬರುತಿಹುವು ॥ ೧೦೦

ಬಳಿಕುಪ್ಪವಡ ಮುಖ ಮಜ್ಜನ ಮೃಗಮದ
ತಿಲಕ ಸುಚೇಲ ಭೂಷಣದ ।
ಲಲಿತ ಸಿಂಗರ ಚೆಲ್ವ ಮುಡಿಯು ಪೂ ಮಾಲೆಯಿಂ
ನಳಿನಾಕ್ಷ ರಂಗನೊಪ್ಪಿಹನು ॥ ೧೦೧

ದೀಪಾರತಿ ಪರಿಮಳಿಸುವ ಸಾಂಬ್ರಾಣಿ
ಧೂಪ ವಾಸನೆ ದಿಕ್ತಟವ ।
ವ್ಯಾಪಿಸೆ ಬಹು ಬಗೆಯುಪಚಾರಗಳಿಂದ
ಶ್ರೀಪತಿ ರಂಗನೊಪ್ಪಿಹನು ॥ ೧೦೨

ಮಿರುಪ ಚಿತ್ರಾನ್ನ ನಾನಾ ಬಗೆ ಭಕ್ಷ್ಯಗ
ಳ್ಪರಿ ಪರಿ ಶಾಕ ಪಾಕಗಳ ।
ವರ ಪಕ್ವ ಫಲ ದಿವ್ಯ ಪಾನ ಪನ್ನೀರ್ಗಳ
ಸಿರಿಧರನಾರೋಗಿಸಿದನು ॥ ೧೦೩

ಕರ್ಪೂರ ವೀಳ್ಯವ ಕೈಗೊಂಡು ನಗುತ ಕಂ
ದರ್ಪನ ಪಿತನೊಪ್ಪುತಿರಲು ।
ತಪ್ಪದೆ ಮಂಗಳ ವಾದ್ಯದ ಬಲು ರ..
ವುಪ್ಪರಿಸಿದುವೆಂಟು ದೆಸೆಗೆ ॥ ೧೦೪

ಪಾವುಡ ಕುಂಚ ಕಾಳಂಜಿ ಕನ್ನಡಿ ನೆರೆ
ಹೂವಿನ ಬೀಸಣಿಗೆಗಳ ।
ಭಾವಕಿಯರು ಪಿಡಿದಾಕ್ಷಣ ಶ್ರೀ ರಂಗ
ದೇವನನೋಲೈಸುತಿಹರು ॥ ೧೦೫

ಹೊಳೆ.. ಪೊಂದಟ್ಟೆ ಯಾರತಿಗಳ ಪಿಡಿದಾಗ
ಲಲಿತಾಂಗಿಯರು ಸಾಲ್ಗೊಂಡು ।
ಸು ಲಲಿತ ಗಾನದೆ ಶ್ರೀ ರಂಗ ನಾಥನಿ
ಗೊಲಿದೆತ್ತಿದರೇ ವೇಳ್ಯ ॥ ೧೦೬

ಪರಿ ಪರಿ ಪಾತ್ರ ವೆಂಗಳು ಸಿಂಗರಿಸಿಯೆ
ಹರುಷದೊಳಗೆ ನಡೆತಂದು ।
ಕರದಭಿನಯ ಕಟ್ಟಳೆ ಕಳಾಸಿಕೆಯಿಂದ
ಸಿರಿಯರಸನನೋಲಗಿಪರು ॥ ೧೦೭

ಪಲ್ಲಕ್ಕಿ ಸೇವೆ ಪಕ್ಷೋತ್ಸವ ಮಾಸದೊ
ಳುಲ್ಲಾಸದ ಮೆರೆವಣಿಗೆ ।
ಫುಲ್ಲಾಸ್ತ್ರನಯ್ಯನಿಗೊಪ್ಪಿ ರಾಜಿಸಿದುವು
ಸಲ್ಲಲಿತದೊಳೀ ವೇಳ್ವ ॥ ೧೦೮

ಕರಿ ರಾಜ ತಿರು ನಾಳು ಬಾಸುರವಿಡಿದಿಹ
ಪಿರಿಯ ಸಂಕ್ರಮ ತಿರು ನಾಳು ।
ವರ ರಥ ಸಪ್ತಮಿಯುತ್ಸವ ತಿರು ನಾಳು
ಮೆರೆದುವು ರಂಗೇಶಗಾಗ ॥ ೧೦೯

ಬಿಡದೊಪ್ಪುವ ಕೋಡೆ ತಿರು ನಾಳು ಮಧು ಮಾಸ
ದೊಡೆಯನುತ್ಸವ ತಿರು ನಾಳು ।
ಸಡಗರದಲಿ ಸಿರಿ ಧರ ರಂಗ ಧಾಮನಿ
ಗೆಡೆ ವಿಡದೊಪ್ಪಿದುವಾಗ ॥ ೧೧೦

ಇಂತಪ್ಪ ಮಂಗಳೋತ್ಸವ ದಿವ್ಯ ಸೇವೆಯ
ಕಂತು ಪಿತಗೆ ಭಕ್ತಿಯಲಿ ।
ಸಂತತ ಕಂಠೀರವ ರಾಜ ನಡಿಸುತ
ತ್ಯಂತ ಸೌಖ್ಯದೊಳೊಪ್ಪುತಿಹನು ॥ ೧೧೧

ಅಗರದ ಕೇರಿಯ ತಿರು ವೇಂಗಳೇಶ್ವರ
ಸೊಗಸುತಕ್ಕಿಯ ಕೇರಿಯೊಳಗೆ ।
ನಗ ಧರ ತಿರುಮಲೇಶ್ವರ ಬೇಟೆ ರಾಯರು
ಮಿಗೆ ಕಾದಿಹರು ಪಟ್ಟಣವ ॥ ೧೧೨

ಹೊರ ಕೇರಿಯ ಗಂಗಾಧರ ವೀರೇಶ
ವೊರಡಿಯ ತಿರುಮಲ ರಾಯ ।
ನರಸಿಂಹ ಮೂರ್ತಿ ಬಾಗಿಲ ವೇಂಕಟೇಶ್ವರ
ರಿರುವರು ಬಹುಳ ಲೀಲೆಯಲಿ ॥ ೧೧೩

ದೊಡ ಹಂಪಯ್ಯನ ಮಠ ಮೂಲೆಯ ಮಠ
ಕಡು ವಿರಕ್ತರ ದಿವ್ಯ ಮಠವು ।
ಎಡೆ ವಿಡದೊಪ್ಪುವ ದಾಸೋಹದ ಮಠ
ಸಡಗರದಿಂದಲೊಪ್ಪಿಹುವು ॥ ೧೧೪

ಹಲವು ಮಾತೇನೀ ಶ್ರೀರಂಗ ಪಟ್ಟಣ
ಕಳವಡದ ಪುರ ತ್ರಿಜಗದ ।
ನೆಲದೊಳಗಿಲ್ಲೆಂದು ಗಡಿಯಾರ ಜಾಗಟೆ
ಯುಲಿವುದು ಗೋಪುರದೊಳಗೆ ॥ ೧೧೫

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪಸಂಪದದೇಳಿಗೆಯ ಸಂಧಿ
ಮುದದೆ ಸು ಧರ್ಮಾನುಬಂಧಿ ॥ ೧೧೬

೭ನೆಯ ಸಂಧಿ ಸಮಾಪ್ತಂ.

---

# ಎಂಟನೆಯ ಸಂಧಿ.

## ನಿತ್ಯೋತ್ಸವ ದೋಲಗದ ವರ್ಣನೆ.

ಸೂ|| ಭೂ ಲೋಲ ನರಸೇಂದ್ರನ ನಿತ್ಯೋತ್ಸವ
ದೋಲಗ ಸಿರಿಯ ಬಣ್ಣಿಸುವೆ ||

ಮನಸಿಜನಳಿಯನವ್ವೆಯು ಭಾವನ ಕೂಡೆ
ಜನಿಸಿದವಳ ವಲ್ಲಭನ |
ಘನ ಹರುಷದೆ ಸಲಹಿದ ದೇವನ ಪಾದ
ವನಜಗಳಿಗೆ ನಮಿಸುವೆನು || ೧

ಬಳಿಕ ಶ್ರೀ ರಂಗ ಪಟ್ಟಣದೆ ಸಂತೋಷವ
ತಳೆದತಿ ಸರ್ವ ಸಂಭ್ರಮದೆ |
ಚಲದಂಕ ಕಂಠೀರವ ನರಸೇಂದ್ರ ಭೂ
ತಳವ ಪಾಲಿಸುತಿರರ್ತಿಯಲಿ || ೨

ಸಲೆ ಯೊಂದು ದಿವಸದೊಳಗೆ ರವಿ ಪಶ್ಚಿಮ
ಲಲನೆಯ ರತಿ ಕೇಳಿಗೊಲಿದು |
ನಲವಿಂದ ತೆರಳಲು ಸಂಜೆ ದಾರಕೆ ರಾಗ
ಗಳ ತಾಳಿ ಮೆರೆದುವೇಪೇಳ್ವೆ || ೩

ಪೊಡವಿಪ ನರಸ ರಾಜೇಂದ್ರನೋಲಗದ ಬ
ಲ್ಪಡಗರವನು ನೋಡಲೆಂದು |
ಒಡನತಿ ಹರುಷದೆ ಪೂರ್ವ ಚಂದ್ರನು ಮೂಡ
ಗಡೆಯೊಳುಪ್ಪಿದನರ್ತಿಯಿಂದ || ೪

ಆ ವೇಳೆಯಲಿ ದೊರೆ ರಾಯ ಕಂಠೀರವ
ಭೂಪರನೋಲಗ ಶಾಲೆ ।
ತೀವಿ ಮೆರೆವ ನವ ರತ್ನದ ವರ ಸು ಪ್ರ
ಭಾವವ ಬೀರಿತು ಜಗಕೆ ॥ ೫

ಇದು ಸೌಭಾಗ್ಯ ಲಕ್ಷ್ಮಿಯ ದಿವ್ಯ ಸದನವೊ
ಇದು ಮಧು ನೃಪನ ನಿಳಯವೊ ।
ಇದು ಶಾರದೆ ನೆಲಸಿರುವ ಮಂಟಪವೆನೆ
ಮುದದಿಂದ ಮೆರೆದುದಾಸ್ಥಾನ ॥ ೬

ನವ ನಾರೀ ಕುಂಜರ ಪಂಚ ನಾರೀ
ಭವ ತುರಂಗದ ಹೊನ್ನ ಕಂಭ ।
ಭುವನೇಶ್ವರನೋಲಗ ಶಾಲೆಯಲಿ ನೆರೆ
ಖವಖವಿಸಿದುವರ್ತಿಯಲಿ ॥ ೭

ಹರಿಯ ನಾಟಕ ಮನಸಿಜನ ವಿಲಾಸದ
ಪರಿವಿಡಿಗಳ ಪುತ್ಥಳಿಗಳು ।
ಮೆರೆಯುವೋಲಗ ಶಾಲೆಯ ಚೌ ದೆಸೆಗಳ
ಸು ರುಚಿರ ಭಿತ್ತಿಯೊಳಿಹುವು ॥ ೮

ಆವ ದಿಕ್ಕಿನಲಿ ನೋಡಲು ಥಳ ಥಳಿಸು...
ತೀವಿದ ಮಿಸುನಿ ಪಟ್ಟಿಗಳು ।
ದೇವಾಂಗ ವಸನ ಬಿಗಿದ ಮೇಲ್ಕಟ್ಟಿನ
ಭಾವವನೇನ ಬಣ್ಣಿಸುವೆ ॥ ೯

ಮುತ್ತು ರತ್ನಗಳ ಗೊಂಚಲು ಕಡು ಪರಿಮಳ
ವೆತ್ತಿಹ ಜಾಜಿ ಸಂಪಗೆಯ ।
ವೊತ್ತದ ಪೂ ಮಾಲೆ ಯೋಲಗ ಶಾಲೆಯ
ಸುತ್ತಲೊಪ್ಪಿದುವರ್ತಿ* ಯಲಿ ॥ ೧೦

---

* ತವೆ.

ಪನ್ನೀರ ಚಳೆಯು ಕಸ್ತೂರಿಯು ಸಾರಣೆ ಮುತ್ತಿ
ನುನ್ನತ ರಂಗ ವಲ್ಲಿಗಳ ।
ಚೆನ್ನಾದ ಕುಂಕುಮ ಗಾರಣೆಯಿಂದ ಸಂ
ಪನ್ನತೆ ವಿಡಿದುದಾಸ್ಥಾನ ॥ ೧೧

ಅಗರು ಚಂದನ ಯಕ್ಷ ಕರ್ದಮ ಮೃಗ ಮದ
ಸೊಗಸು ಕರ್ಪೂರ ತುಂಬಿ ಮೆರೆವ ।
ಮಿಗೆ ಭರಣಿಯ ಮುಚ್ಚುಳನುಗಿದಂದದೆ
ಮಗ ಮಗಿಸಿದುದಾಸ್ಥಾನ ॥ ೧೨

ಒಡನೊಪ್ಪುವ ಹಂಸ ತೂಳದ ತಲ್ಪವ
ಕಡು ಚೆಲ್ವ ಮಿಸುನಿ ಮಂಚದಲಿ ।
ಮಡಿಸಿ ಹಚ್ಚಡಿಸಿ ರತ್ನದ ಬಟ್ಟುವೊರಗ ಸಂ
ಗಡಿಸಿದರತಿ ಮುದದಿಂದ ॥ ೧೩

ತುಂಗ ವಿಕ್ರಮ ರಿಪು ನೃಪ ಗಜ ಹರ್ಯಕ್ಷ
ಮಂಗಳೋತ್ಸವದೊಳಗೊಲಿದು ।
ಸಿಂಗರಿಸಿಯೆ ಓಲಗಕೈತರುವ ಬೆ
ಡಂಗನದೇನ ಬಣ್ಣಿಸುವೆ ॥ ೧೪

ಮುತ್ತಿನ ಪಲ್ಲಕ್ಕಿಯನೇರಿ ಶ್ರೀಪುರು
ಷೋತ್ತಮನೈದುವಂದದಲಿ ।
ಅರ್ತಿಯೊಳಗೆ ಕಂಠೀರವ ನರಸ ಭೂ
ಪೋತ್ತಮ ನಗ ತೈತಂದ ॥ ೧೫

ಬಳಸಿ ಯೈತಹ ಮಂತ್ರಿ ಮನ್ನೆಯ ಸುಭಟ ಸಂ
ಕುಳದ ಸಂದಣಿಯೊಳಗೊಲಿದು ।
ಇಳೆಯೊಳ್ಮ ಕಂಠೀರವ ರಾಜ ನೋಲಗ
ಕಳವಟ್ಟು ಬಂದನರ್ತಿಯಲಿ ॥ ೧೬

ನೆರೆ ತಮ್ಮ ದೊರೆ ಮನಸಿಜ ದಿವ್ಯ ದೇಹವ
ಧರಿಸಿ ಭೂ ತಳಕೈತರಲು ।
ವರ ಮಂತ್ರಿ ಚಂದ್ರನೈತಂದೊಲು ಮುತ್ತಿನ
ಬಿರುದಿನ ಛತ್ರವೊಪ್ಪಿದುದು ॥ ೧೭

ಬಾಲಾರ್ಕನು ಬಹು ರೂಪಾದಂದದೊ
ಳಾಲವಟ್ಟವು ಸೇಲಲೊಳಗೆ ।
ಭೂ ಲೋಲ ಕಂಠೀರವ ನರಸೇಂದ್ರನು
ತ್ತೋಲಗ ಶಾಲೆಗೈತಂದ ॥ ೧೮

ಕೊಂಬು ಕೊಳಲು ನಾಗಸರ ಭೇರಿ ತಂಬಟೆ
ಬೊಂಬುಳಿ ಬುರುಗು ಡಿಂಡಿಮದ ।
ಮುಂಬರಿದೆಸೆವ ರವಗಳಾಕಾಶವ
ತುಂಬಿದುವೇನ ಬಣ್ಣಿಸುವೆ ॥ ೧೯

ಅರಿ ರಾಜ ಗಿರಿ ವಜ್ರ ದಂಡ ಸ್ನೇಹಿತ ನೃಪ
ಸರಸಿಜ ವನ ಮಾರ್ತಂಡ ।
ನರಸ ರಾಜೇಂದ್ರ ಚಂದ್ರನು ಜಯ ಜಯತೆಂದು
ನೆರೆ ಪೊಗಳಿದರು ಪಾಠಕರು ॥ ೨೦

ಒಡನೆ ವಾಚಿಪ ವರ ಮಂಗಳಾಷ್ಟಕ ರವ
ಕಡು ವಿಜಯವ ಸಾರುತಿರಲು ।
ಪೊಡವಿಪ ನರಸೇಂದ್ರ ಸಿಂಹ ಪೀಠದ ಮೇಲೆ
ಸಡಗರದೊಳಗೆ ರಂಜಿಸಿದ ॥ ೨೧

ಪೊ ಕರ್ಪೂರ ಮಲಯಜ ತೈಲ ವಾಸನೆ
ಮುಸುಕಿ ಮೋಹಿಸಲಂಬರವ ।
ದೆಸೆ ದೆಸೆಗಳ ಬೆಳಗುತ ದೀವಟಿಗೆಗ
ಳೆಸೆದುವಗಣಿತವರ್ತಿಯುಲಿ ॥ ೨೨

ದೊರೆ ರಾಯನ ಸಮ್ಮುಖದೆ ಹೊಸ ಹರೆಯದ
ತರುಣಿಯರುಗಳ ಹಸ್ತದಲಿ ।
ಮಿರುಪ ಮಿಸುನಿಯ ಬೊಂಬಾಳ ದೀವಟಿಗೆಗ
ಳ್ಸುರುಚಿರ ಪ್ರಭೆಯ ಸೂಸಿದುವು ॥ ೨೩

ನೆಲೆ ಮೊಲೆ ಯುಲುಗೆ ಕಣ್ಗಳ ಕಾಂತಿ ದೆಸೆಗಳ
ಬೆಳಗಲು ಬೆರಳ ಮುದ್ರಿಕೆಯ ।
ಹೊಳಹು ದೋರುತ ಶುಭ್ರ ಚಮರವ ಡಾಳಿಸು
ತೆಳ ವೆಂಗಳಸೆದರರ್ತಿಯಲಿ ॥ ೨೪

ಒಡನೈತಂದ ರೋಲಗಕೆ ಸಮ್ಮೋಹನ
ಪಿಡಿದ ಗಾಯಕರು ಕವಿಗಳು ।
ಪೊಡವಿಪ ಕಂಠೀರವನಾಸ್ಥಾನದ
ಸಡಗರದೊಳಗೊಪ್ಪಿದರು ॥ ೨೫

ವೇದ ವಿದರು ಶಾಸ್ತ್ರಜ್ಞರು ಬಹು ಮಂ
ತ್ರೋದಯಾಢ್ಯರು ಭ್ರಾಂತಿಗಳು ।
ವಾದಿಸುತಿಹ ತಾರ್ಕಿಕರು ವಾಚಕರು ವಿ
ನೋದಿಗಳಸೆದರರ್ತಿಯಲಿ ॥ ೨೬

ಕರಣಿಕರಾಪ್ತ ಮಂತ್ರಿಗಳು ರಾಯಸಗಳ
ಬರೆದೋದುತಿಹ ಬಲ್ಲವರು ।
ದೊರೆ ರಾಯ ನರಸ ರಾಜೇಂದ್ರನಾಸ್ಥಾನದೆ
ಪರಿ ಶೋಭಿಸಿದರುಬ್ಬಿನಲಿ ॥ ೨೭

ದಳ ಪತಿ ಮನ್ನೆಯ ಮಂಡಲಿಕರು ನೆರೆ
ತುಳಿಲಾಳು ರಾಯ ರಾವುತರು ।
ಇಳೆಯಾಣ್ಮ ಕಂಠೀರವೇಂದ್ರಗೆ ವರಕರ
ನಳಿನವ ಮುಗಿಯುತೊಪ್ಪಿದರು ॥ ೨೮

ಚಾಮರ ಕುಂಚ ಕಾಳಾಂಜಿ ಪಾಸಡೆ ವರ
ಹೇಮ ದರ್ಪಣಗಳನಾಂತು ।
ಭೂಮಿಪ ನರಸೇಂದ್ರನಿದಿರೊಳೊಳಗದರ
ಸ್ತೋಮವೆಸೆದುದು ಸಾಲ್ವಿಡಿದು ॥ ೧೯

ತೆಲುಗ ಮನ್ನೆಯ ಸಾಲಿದೆ ತಿರು ಕೊಂಕಣ
ಸಲೆ ಕೊಂಗ ತಿಗುಳ ಕೊಡಗರು ।
ಗಲಭೆಯ ಮಾಣು ಮಾಣೆಂಬವಸಂದದ
ರುಲುಹೊಪ್ಪಿತಾಸ್ಥಾನದೊಳಗೆ ॥ ೨೦

ಕನಕ ಕಾಂತಿಯ ಪಸರಿಸುತಿಹ ನಿರಿ ಗಾಸೆ
ಮಿನುಗುವ ಮಣಿ ಭೂಷಣದ ।
ವನಿತೆಯರಧಿಕ ಸಂಭ್ರಮದೆ ಕೋಲಾಟವ
ಜನಪನೋಲಗದೊಳಾಡಿದರು ॥ ೨೧

ಬಿರುದಿನ ಪಾತ್ರದ ಸಾರಿಯ ಮೇಳದ
ತರುಣಿಯರತಿ ಹರುಷದಲಿ ।
ಪರಿ ಪರಿ ಕೋಪು ಕಳಾಸಿಕೆಗಳ ತೋರಿ
ಭರದಲಿ ನಟಿಸಿದರಾಗ ॥ ೨೨

ತುಂಬುರ ಪಿಡಿದು ಗಾನಾಮೃತವನು ಕಿವಿ
ಗಿಂಬಾಗಿ ಸವಿ ದೋರಿಸುತ ।
ಮುಂಬರಿದೆಸೆವ ಗಾಯಕರು ಪಾಡುವ ಸಂ
ರಂಭವನೇನ ಬಣ್ಣಿಪೆನು ॥ ೨೩

ವರ ವೈಣಿಕ ಬಯಕಾರರು ಹರುಷದೆ
ಕೊರಳ ಬೆರಳನೊಂದು ಗೂಡಿ ।
ದೊರೆ ರಾಯ ಕಂಠೀರವನಂಕ ಮಾಲೆಯ
ಪಿರಿದಾಗಿ ಪಾಡುತೊಪ್ಪಿದರು ॥ ೨೪

ಭರತ ಪುರಾಣ ನಾಟಕ ನೀತಿ ಶಾಸ್ತ್ರ ಬಂ
ಧುರವಹ ತರ್ಕ ಶಬ್ದಗಳ ।
ನರೆದು ನಿರ್ಣೈಸಿ ತೋರಿಸುವ ವಿದ್ವಾಂಸರ
ಪರಿವಿಡಿ ಮೆರೆದುದೇನೆಂಬೆ ॥ ೩೫

ಭಾರತ ರಾಮಾಯಣ ಪುಣ್ಯ ಕಥೆಯ ವಿ
ಸ್ತಾರವ ಗಾನ ರಸದಲಿ ।
ಸಾರತರಂದೆ ನಲಿದೋದಿ ಮೆರೆವ ಚೆಲ್ವ
ಭಾರತಿಗಳು ರಾಜಿಸಿದರು ॥ ೩೬

ಕಟ್ಟಾಣಿ ಮುತ್ತ ಸೇರಿಪ್ಪೊಲು ದೇಸಿಯ ರಾಜ
ಪಟ್ಟದ ಸವಿ ನುಡಿಗಳನು ।
ಸೃಷ್ಟೀಶ್ವರಗೆ ಬಿನ್ನೈಸುತ ಮಂತ್ರಿಗ
ಳಟ್ಟಣೆಸಿಹರೆಡ ಬಲದ ॥ ೩೭

ಸೆಳದರಿ ನೃಪರ ದುರ್ಗಗಳ ಠಾಣೆಯುವನು
ಬಲಿದು ಬಹುಳ ಧನಗಳನು ।
ತಳುವದೆ ತಂದೀವೆನು ಜೀಯ ಬೆಸಸೆಂಬ
ದಳ ಪತಿಯುಲಿ ಹೆಚ್ಚಿ ತಾಗ ॥ ೩೮

ಕಡಿದು ರಿಪುಗಳ ಶಿರವನಾನೆ ಕುದುರೆಯ
ಗಡಣಗಳನು ಬೇಗ ಪಿಡಿದು ।
ಪೊಡವೀಶ ನಿಮಗೊಪ್ಪಿಸುವೆವೆಂಬ ನುಸ್ನಯ
ರೆಡೆವಿಡದೆಸೆದರೋಲಗದೆ ॥ ೩೯

ತೂಳಿಸಿ ಕುದುರೆಯ ವೈರಿ ಮಾರ್ಬಲಗಳ
ಧೂಳಿ ಪಟವ ನೆರೆ ಮಾಡಿ ।
ಕೋಳ ತಂದೊಪ್ಪಿಸುವೆವುವೆಂಬ ರಾವುತ
ರಾಲಾಪಗಳೊಪ್ಪಿದುವು ॥ ೪೦

ಬೀದಿವರಿಪ್ರತಾನೆಗಳ ರಿಪು ಬಲವನು
ಭೇದಿಸಿ ಕಾಲ್ಗೊಲೆಗಳಲಿ ।
ಸಾದಿಸಿ ಕೊಲುವೆವು ಜೀಯ ನೀ ಬೆಸಸೆಂಬ
ಜೋದರಂಬ್ಬರಗಳೊಪ್ಪಿದುವು ॥ ೪೧

ಪಂಠಿಸಿದರಿಗಳ ತಲೆಯನರಿದು ಕಾಳ
ಕಂಠಗೆ ವನ ಮಾಲೆ ಯಿತ್ತು ।
ಭಂಟರಾಗಿಹೆವೆಂಬರುಲುಹು ರಾಜಿಸಿದುದು
ವೊಂಟಿಗರಾದ ನಾಯಕರ ॥ ೪೨

ಧುರ ಮಂಡಲದೆ ದೇವರ ಪಾದ ಪದ್ಮವ
ಹರುಷದೆ ಕಾದು ಬೆಸಸಿದ ।
ಪಿರಿದು ಸೇವೆಯ ಮಾಳ್ಪೆವೆಂಬೂಳಿಗದರ
ಬಿರುದಿನ ನುಡಿಗಳೊಪ್ಪಿದುವು ॥ ೪೩

ಪರಿಮಳಿಸುವ ದಿವ್ಯ ಸಾಂಬ್ರಾಣಿಯ ಧೂಪ
ದುರುತರ ಸೌರಭ್ಯವಾಗ ।
ಪುರವಾಸ್ಥಾನವ ಪೊರೆದೆಂಟು ದೆಸೆಯಲಿ
ಪರಿಶೋಭಿಸಿದುದೇ ವೇಳ್ಯ ॥ ೪೪

ದಿಕ್ಕು ದಿಕ್ಕಿನ ದೊರೆಗಳ ರಾಯ ಭಾರಿಗ
ಳಕ್ಕರು ಮಿಗಿಲೈತಂದು ।
ಹೊಕ್ಕಾಸ್ಥಾನವ ನೋಡಿ ತಲೆಯ ತೂಗಿ
ಯುಕ್ಕಿದರತಿಹರುಷದಲಿ ॥ ೪೫

ಬಿರುದಂತೆಂಬರ ಗಂಡ ಸೆಣಸಿದ ನೃಪ
ಪರಿಪೂರ್ಣ ತಿಮಿರ ಮಾರ್ತಂಡ ।
ದುರ ಗಲಿ ಕಂಠೀರವ ನರಸೇಂದ್ರ ಭೂ
ವರನೊಪ್ಪಿದನು ಸೊಬಗಿಂದ ॥ ೪೬

ರಾಮನ ಶೌರ್ಯ ಭೀಮನ ಶಕ್ತಿ ದಿನಮಣಿ
ಯಾ ಮಹಾ ದಿವ್ಯ ಪ್ರಕಾಶ ।
ಭೂಮಿಪ ಕಂಠೀರವ ನರಸೇಂದ್ರನ
ಪ್ರೇಮದೆ ಕೆಳಗೊಂಡಿಹುವು ॥ ೪೭

ಇಂತೊಪ್ಪುವೆತುಳ ವೈಭವದೊಳಾಸ್ಥಾನದೆ
ಸಂತೋಷವ ತಾಳಿ ನಗುತ ।
ಕಂತು ಸನ್ನಿಭ ಕಂಠೀರವ ನರಸೇಂದ್ರ
ಸಂತತ ಸೌಖ್ಯದೊಳಸೆದ ॥ ೪೮

ಓಲಗ ಪರಿವ ಸಮಯದಲಿ ನಗುತಾಗ
ವೀಳಯವುಡುಗೊರೆಗಳನು ।
ಮೇಲೆ ಸಭೆಗೆ ಸೂಸಿ ಬೀಳ್ಕೊಟ್ಟು ವೊಳರಾಣಿ
ಯೋಲಗ ಶಾಲೆಗೈತಂದ ॥ ೪೯

ಅಂತರಾಂತರದ ಪೊಂಬಾಗಿಲೊಳಗೆ ನೀಲ
ಕುಂತಳೆಯರು ನಸು ನಗುತ ।
ಸಂತೋಷದೆ ಮುತ್ತಿನಾರತಿಗಳ ಭೂ
ಕಾಂತನಿಗೊಲೆದೊಪ್ಪಿದರು ॥ ೫೦

ಕಳಾಂಜಿ ಕುಂಚ ಹಡಪ ಪಾವುಗೆ ರತ್ನ
ದಾಲವಟ್ಟವು ಬೊಂಬಾಳ ।
ಸಾಲ ದೀವಟಿಗೆ ವಣ್ಗಳು ಭೂಪನಿದಿರಿನೊಳ್
ಮೇಳದೊಳಸೆದರತಿಯಲಿ ॥ ೫೧

ಕರ ಕಂಜ ಮುಗಿದುವು ನಯನ ನೀಲೋತ್ಪಲ
ವರಳಿದುವಂಗನಾಜನದ ।
ದರ ಹಾಸ ಚಂದ್ರಿಕೆ ಮೆರೆದುವು ನರಸೇಂದ್ರ
ಪರಿಪೂರ್ಣ ರಾಜನೈತರಲು ॥ ೫೨

ಮೆರೆವ ತಾರೆಗಳ ಸಮೂಹದೊಡನೆ ಬಹು
ಮಿರುಪ ರಾಕಾ ಚಂದ್ರನಂತೆ ।
ತರುಣಿರನ್ನೆಯರ ಮೊತ್ತದಲಿ ನಾಟಕ ಶಾಲೆ
ಗರಸನೈತಂದನರ್ತಿಯಲಿ ॥ ೫೩

ನವ ರತ್ನ ಖಚಿತ ತಲ್ಪದಲಿ ಸಂಭ್ರಮದೆ ಶ್ರೀ
ಧವನೊಪ್ಪುವಂದದೆ ನಗುತ ।
ಭುವನೇಶ ಕಂಠೀರವ ನರಸೇಂದ್ರನು
ತ್ಸವದೊಳಗೊಲಿದು ರಂಜಿಸಿದ ॥ ೫೪

ಆಸಮಯದಲಿ ತೂರ್ಯ ತ್ರಯಮಂಗಳ
ಘೋಷವೆಸೆಯೆ ನಸು ನಗುತ ।
ಭೂಸುರ ಬಿರುದಿನ ನಾಟ್ಯ ವಧುಗಳು ಸಂ
ತೋಷದೆ ನಡೆತಂದರೊಲಿದು ॥ ೫೫

ತೊಳಗುವ ನವ ರತ್ನ ಗಾಸೆಯ ಸರ್ವಾಂಗ
ಕಳವಟ್ಟ ಮಣಿ ಭೂಷಣದ ।
ಥಳ ಥಳಿಸುವ ಮುದ್ದು ಮೊಗದ ನರ್ತಕಿಯರು
ಘಳಿಲನೆ ನಡೆತಂದರಾಗ ॥ ೫೬

ಉಡಿಯ ಸುತ್ತಿದ ವಲ್ಲಿ ಪಾಟನ ಕರದಲಿ
ಪಿಡಿದು ರಂಜಿಪ ರನ್ನ ಸೆಳೆಯ ।
ಕಡು ಜಾಣ ಭರತಾಚಾರ್ಯನು ರಾಜಿಪ
ಬೆಡಗನದೇನ ಬಣ್ಣಿಸುವೆ ॥ ೫೭

ತವೆ ಮಣಿಮಯ ಕಾಂಡಪಟದ ಮರೆಯೊಳಾಗ
ದಿವಿಜ ನಾರಿಯರ ಚೆಲ್ವಿಂದ ।
ಅವಿರಳ ಭರತ ಶಾಸ್ತ್ರಾಧಿದೇವಿಯರಂತೆ
ಯುವತಿ ರನ್ನೆಯರೊಪ್ಪಿದರು ॥ ೫೮

ತಾಳ ಮದ್ದಳೆ ಮುಖವೀಣೆ ಯಾವುಜ ಗೀತ
ದಾಳಾಪ ನಾಟ್ಯ ವಧುಗಳ ।
ಕಾಲ ಗೆಜ್ಜೆಯ ರವ ಗತಿ ಗೂಡಿ ಶ್ರುತಿಗೆ ವಿ
ಶಾಲದ ಸೊಗಸ ಬೀರಿದುವು ॥ ೫೯

ಸುರುಚಿರ ಸೂತ್ರ ಧಾರಕ ತತ್ತಕಾರವ
ವಿರಚಿಸಿ ಜವನಿಕೆದೆಗೆಯೆ ।
ಭರತ ಶಾಸ್ತ್ರಾಗಮವಿಡಿದು ಸುಪಾತ್ರೆಯ
ರುರು ಪುಷ್ಪಗಳ ಸೂಸಿದರು ॥ ೬೦

ನರಸಿಂಹ ಸ್ತುತಿ ಗೀತ ಪ್ರಬಂಧವ
ಪಿರಿದು ಸುಳಾದಿ ತಾಳದಲಿ ।
ಕರದಭಿನಯಗೂಡಿ ಕಡು ಕುಶಲದೆ ನಾಟ್ಯ
ದಿರವ ಮೆರೆದರಂಗನೆಯರು ॥ ೬೧

ವಿಲಸಿತ ಕರ ಭೇದ ದೃಷ್ಟಿ ಭೇದವು ನೆರೆ
ಯೊಲವು ದೋರುವ ಶಿರ ಭೇದ ।
ಸು ಲಲಿತ ಸ್ಥಾನಕ ಭೇದ ಚಾರಿಯಭೇದ
ದಲಿ ಭಾವಗಳ ತೋರಿದರು ॥ ೬೨

ಮೆರೆವಂಗ ಪ್ರತ್ಯಂಗೋಪಾಂಗ ಬಹು ಚಾಳಿ
ವರ ದೇಶಿ ಕೋಲು ಚಾರಿಗಳ ।
ಹಿರಿದಂಗಹಾರ ಮಂಡಲ ಕರ ಕ್ಷೇತ್ರದ
ಬಿರುದಿನ ನಾಟ್ಯವಾಡಿದರು ॥ ೬೩

ರಂಭಾ ನಾರಿಯು ಪಾತ್ರದ ಪರಿಣತಿ
ಯಂಬುಜಾನನೆಯೂರ್ವಶಿಯು ।
ಮುಂಬರಿದೆಸೆವ ಕಟ್ಟಣಿಗಳ ಗತಿಯ ನಿ
ತಂಬಿನಿಯರುಗಳಾಡಿದರು ॥ ೬೪

ಕಡೆಗಣ್ಣ ಳ ಹೊಳಹಿನ ಬಳ್ಳಿ ಮಿಂಚಿನ
ತೊಡವುಲಿಗಳ ಘನ ರವದ ।
ಮುಡಿಯ ಮುಂಗಾರ ಮೇಘದೆ ಸೋಗೆ ನವಿಲಾಟ
ದಡವ ತೋರಿದ ರಂಗನೆಯರು ॥ ೬೫

ಪಿರಿದು ಪ್ರಬಂಧಜಕ್ಕಿಣಿ ರಾಜ ಕೀರನ
ಮೆರೆವ ಕಟ್ಟಳೆಯಾಟಗಳ ।
ದೊರೆ ರಾಯ ನರಸ ರಾಜೇಂದ್ರಗೆ ಸಂತಸ
ದೊರೆಯಲಾಡಿದರಂಗನೆಯರು ॥ ೬೬

ಗಿರಿ ಸುತೆ ಶಚಿ ಶಾರದೆಯರಂಗನೆಯರ
ಬಿರುದಿನ ಪಾತ್ರಕ್ಕೆ ಮೆಚ್ಚಿ ।
ಕರೆವ ಪೂಮಳೆ ಯೆನೆ ಸೂತ್ರಾಭ್ರಗಳಿಂದ
ಪರಿಮಳ ಪುಷ್ಪ ಸೂಸಿದುವು ॥ ೬೭

ಜನ ಪತಿ ತರುಣಿ ರನ್ನೆಯರ ನಾಟ್ಯಕೆ ಮೆಚ್ಚಿ
ಕನಕ ರತ್ನಾಭಿಷೇಕಗಳ ।
ಘನ ಹರುಷದೆ ಮಾಡಿಸಿ ಸಂತೋಷದ
ವನಧಿಯೊಳೋಲಾಡಿಸಿದ ॥ ೬೮

ಭರತಜ್ಞ ಮೇಳ ಗಾರರಿಗೆ ಭೂಷಣಗಳ
ಸುರುಚಿರ ವಸನ ಕರ್ಪುರದ ।
ಪರಿಮಳ ವೆರೆದ ವೀಳಯಗಳನಿತ್ತಾಗ
ನರಸ ರಾಜೆಂದ್ರ ಮನ್ನಿಸಿದ ॥ ೬೯

ಆಸಮಯದೊಳೂರ್ವ ನಾರಿ ಭಾಗವತ ವಿ
ಲಾಸದ ಪುಣ್ಯ ಕಥೆಗಳ ।
ಭಾಸುರ ಗಾನ ರಸದೊಳೋದಿ ಬಹು ಸಂ
ತೋಷವನಿತ್ತಳರಸಗೆ ॥ ೭೦

ಮತ್ತೊರ್ವಳು ಭಾರತದ ಕಥೆಯು ಬಲು
ಬಿತ್ತರದಲಿ ನಲವಿಂದ ।
ಬತ್ತೀಸ ರಾಗದೊಳೋದಿ ಭೂಪಾಲನ
ಚಿತ್ತಕ್ಕೆ ಬಂದಳೇ ವೇಳ್ವ ॥ ೩೧

ಕಾಮಿನಿಯೊರ್ವಳು ನಗುತಾಗ ಹರುಷದೆ
ರಾಮಾಯಣ ಪುಣ್ಯ ಕಥೆಯು ।
ಪ್ರೇಮದೊಳೋದಿ ಕಂಠೀರವ ನರಸೇಂದ್ರ
ಭೂಮಿಪಾಲನ ಮೆಚ್ಚಿಸಿದಳು ॥ ೩೨

ನಗುತೊರ್ವ ನೀರೆ ಚಿಂತಾಮಣಿ ಮೊದಲಾದ
ಬಗೆ ಬಗೆ ತರ್ಕ ಶಾಸ್ತ್ರಗಳ ।
ಅಗಣಿತವಾಗಿ ಬಣ್ಣಿಸಿ ನರಸೇಂದ್ರಗೆ
ಮಿಗೆ ಹರುಷವ ಬರಿಸಿದಳು ॥ ೩೩

ಕರದೊಳು ಪಿಡಿದು ವೀಣೆಯು ವಾಣಿಯಂದದೆ
ಕೊರಳು ಬೆರಳನೊಂದುಗೂಡಿ ।
ಹರುಷದೆ ಪಾಡಿ ಗಾನಾಮೃತವನು ಕರ್ಣ
ಕಿರದೆ ಸೂಸಿದಳೊರ್ವ ನೀರೆ ॥ ೩೪

ಬಾಲ ಶಾರದೆಗಳೆನಲು ತುಂಬುರವೆನಾಂತು
ಲೋಲಾಕ್ಷಿಯರಿರ್ವರಾಗ ।
ತಾಳ ನಿರ್ಣಯದೆ ಕಂಠೀರವ ನೃಪನಂಕ
ಮಾಲೆಯ ಪಾಡಿದರೊಲಿದು ॥ ೩೫

ತುರುಕರಾಡ್ಬಲ ವಾರ್ಧಿ ಬಾಡಬ ದ್ರಾವಿಡ
ಧರಣೀಶ ತಿಮಿರ ಮಾರ್ತಂಡ ।
ನೆರೆ ಯಾಂಧ್ರ ಮನ್ನೆಯ ದಳವುಳ ಕಾರನೆಂ
ದಿರದೆ ಪಾಡಿದರಂಗನೆಯರು ॥ ೩೬

ಧಾಳಿಯೊಳಗೆ ವೈರಿ ನೃಪರ ದುರ್ಗಂಗಳ
ಧೂಳಿಗೋಟೆಯು ಕೊಂಡ ಧೀರ ।
ಪೇಳಲಳವೆ ನಿನ್ನ ಶೌರ್ಯದಿರವನೆಂದು
ನೀಲಾಳಕಿಯರು ಪಾಡಿದರು ॥ ೭೭

ಹಗಲು ಲಗ್ಗೆಯೊಳರಿ ನೃಪರ ದುರ್ಗವ ಕೊಂಡ
ಜಗಕತಿ ಕೀರ್ತಿ ಪ್ರಚಂಡ ।
ಪಗೆ ರಾಯ ಗಿರಿ ವಜ್ರ ದಂಡ ಕಂಠೀರವ
ನಿಗೆ ಜಯತೆಂದು ಪಾಡಿದರು ॥ ೭೮

ಅಂದಿನ ನರಸಿಂಹ ಮೂರ್ತಿಯಲ್ಲದೆ ನೀ
ನಿಂದಿನ ನರ ಭೂಮಿಪನೆ ।
ಕಂದರ್ಪ ಲಾವಣ್ಯ ಜಯತೆಂದು ನಾರೀ
ವೃಂದ ನಲಿದು ಪಾಡಿದರು ॥ ೭೯

ನೋಡಿದಂಗನೆಯರ ನೇತ್ರ ಚಕೋರಕೆ
ಕೂಡೊಪ್ಪುತಿಹ ಪೂರ್ಣ ಚಂದ್ರ ।
ರೂಢಿಪ ದಾನ ಚಿಂತಾಮಣಿ ಜಯತೆಂದು
ಪಾಡಿದರತಿ ಚಪಳೆಯರು ॥ ೮೦

ನಗುತಾಗ ನಾನಾ ಬಗೆ ವಿದ್ಯದಬಲೆಯ
ರಿಗೆ ಬಹು ಭೂಷಣವಿತ್ತು ।
ಸುಗುಣ ಶೇಖರ ನರಸೇಂದ್ರ ಭೋಜನ ಶಾಲೆ
ಗೊಗುವಿಂಗೆ ಹರುಷದೆ ಬಂದು ॥ ೮೧

ಚರಣ ಪಲ್ಲವಗಳ ತೊಳೆದು ದುಕೂಲದ
ಸೆರಗಿನೊಳೊರಸಿ ನಾರಿಯರು ।
ಭರದೆ ಕೈಲಾಗೀಯೆ ನವ ರತ್ನ ಪೀಠದೊ
ಳರಸನೊಪ್ಪಿರ್ದನರ್ತಿಯಲಿ ॥ ೮೨

ಖವಖವಿಸುವ ಸಾಲು ದಿವ್ಯ ಜ್ಯೋತಿಗಳಾ
ಭವನವ ತೀವಿಕೊಂಡಿರಲು ।
ತವೆ ಮಿಸುನಿಯ ಹರಿವಾಣ ಬಟ್ಟಲುಗಳ
ಯುವತಿಯರಳವಡಿಸಿದರು ॥ ೮೩

ಪರಿ ಪರಿಯುಪ್ಪಿನ ಕಾಯಿ ಹಪ್ಪಳ ಸವಿ
ವೆರಸಿದ ಶುಭ್ರ ಬಾಳಕವ ।
ಪಿರಿದೆನಿಸುವ ಭಯ ಭಕ್ತಿಯಿಂದರಸಗೆ
ತರುಣಿಯರೆಡೆ ಮಾಡಿದರು ॥ ೮೪

ತಾಳದ ಸೀಕರಣೆ ಕಸರಿ ಪಚ್ಚಡಿಗಳು
ಮೇಲಾದ ಷಡು ರಸಗಳನು ।
ಶಾಲಿಯ ದಿವ್ಯಾನ್ನ ಸದ್ಯೋಘೃತಗಳ
ಲೋಲಾಕ್ಷಿಯರು ಬಡಿಸಿದರು ॥ ೮೫

ಮಿಸುನಿಯ ವಣ್ಣದ ತೊಗರಿಯ ಬೇಳೆಯ
* ಕುಶಲದ ಸೂಪ ಶಾಕಗಳ ।
ಶಶಿಮುಖಿಯರು ಸಂತೋಷದೆ ಬಡಿಸಿದ
ರೊಸೆದು ಭೂಪಾಲನಿಗಾಗ ॥ ೮೬

ಸಣ್ಣ ಸೇವಗೆ ಹಾಲುಂಡೆ ಜೇನ್ಗೂಡ ಶುಭ್ರ
ವಣ್ಣದುದ್ದಿನ ಸವಿ ಗಡುಬು ।
ಬಣ್ಣಿಸೆ ಹೂರಣ ಗಡುಬು ಭೂಪಗೆ ಮುದ್ದು
ವೆಣ್ಣುಗಳೆಡೆ ಮಾಡಿದರು ॥ ೮೭

ಕೀಲಸಾಗರ ಸಂಜೀವನಿ ಮೊದಲಾದ
ಸಾಲ ಸವಿಯ ರೊಟ್ಟಿಗಳ ।
ನೀಲ ಕುಂತಳೆಯರು ನಗುತಾಗ ನರಸಭೂ
ಪಾಲನಿಗೆಡೆ ಮಾಡಿದರು ॥ ೮೮

---

* ಹೆಸರಿನ

ಉಂಡಲಿಗೆಯು ಕರಿಗಡುಬು ರಾಜಿಪ ಕಟ್ಟು
ಮಂಡಿಗೆ ಬಿಸಿಯ ದೋಸೆಗಳ ।
ಪುಂಡರೀಕಾಕ್ಷಿಯರ್ಕೈದಿ ನೀಡಿದರಾಗ
ಚಂಡವಿಕ್ರಮನಿಗರ್ತಿಯಲಿ ॥ ೨೯

ಮೆರೆವ ಸಣ್ಣಕ್ಕಿಯ ಪಾಯಸ ಸೊಜ್ಜಿಗೆ
ಮೆರೆದ ಸಕ್ಕರೆಯ ಪಾಯಸವ ।
ಪಿರಿದು ಗೌಲೆಯ ಪಾಯಸಗಳ ತಂದಾಗ
ಸರಸಿಜಾಕ್ಷಿಯರು ನೀಡಿದರು ॥ ೩೦

ಚಿಲುಪಾಲು ತಂಬಾಲು ಕೆನೆವೆರಸಿದ ಪಾಲು
ಸುಲಲಿತ ಬಟ್ಟವಾಲುಗಳ ।
ಸಲೆ ಕಟ್ಟುಮೊಸರುಗಳ್ ಗಟ್ಟಿಮಜ್ಜಿಗೆಗಳ
ಲಲನೆಯರುಣಬಡಿಸಿದರು ॥ ೩೧

ದಳಪತಿ ಸಹ ಬಂಧುಗಳು ಕೂಡಿ ಪಂತಿಯೊ
ಳೊಲಿದು ಭೋಜನವನು ಮಾಡಿ ।
ಇಳೆಯಧಿಪತಿ ಕಂಠೀರವ ನರಸೇಂದ್ರ
ಬಲು ಹರುಷದೊಳುಪ್ಪಿದನು ॥ ೩೨

ಭೋಜನಾಂತರದೆ ಕೈತೊಳೆದು ಕರ್ಪೂರದ ಸ
ಮಾಜವೀಳ್ಯವನಿತ್ತು ನಗುತ ।
ತೇಜದಿಂದವರ ಬೀಳ್ಕೊಟ್ಟಾಗ ಸಜ್ಜೆಯ
ರಾಜಮಂದಿರಕೈತಂದ ॥ ೩೩

ಸಿರಿಗೂಡಿ ನರಹರಿ ಶೇಷತಲ್ಪದೊಳಾಗ
ಹರುಷದೆ ರಾಜಿಸುವಂತೆ ।
ನರಸರಾಜೇಂದ್ರನು ಸಂತೋಷದೆ ತಾ
ಮೆರೆದನೇನೆಂಬೆನಚ್ಚರಿಯ ॥ ೩೪

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೊಳಗೆಯು ಸಂಧಿ
ಮುದದೆ ಸುಧರ್ಮಾನು ಬಂಧಿ ॥ ೯೪

೮ನೆಯ ಸಂಧಿ ಸಮಾಪ್ತಂ

---

# ಒಂಭತ್ತನೆಯ ಸಂಧಿ

## ಮದನ ಮೋಹಿನೀ ಕಥೆ

**ಸೂಚನೆ** || ಮದನ ಮೋಹಿನಿ ಯೆಂಬ ವಾರಾಂಗನೆ ಯೊರ್ವ
ಚದುರ ವಿಟನ ಮೋಹಿಸಿದಳು ||

ಇಂತಪ್ಪ ಸಕಲ ವೈಭವದಲಿ ಸೌಭಾಗ್ಯ
ಕಾಂತೆಗೆ ನಾಯಕನಾಗಿ |
ಕಂತು ಸನ್ನಿಭ ಕಂಠೀರವ ನರಸೇಂದ್ರ
ಸಂತೋಷದೊಳೊಪ್ಪುತಿರ್ದ || ೧

ರಾಜಾಧಿರಾಜನಾಶ್ರಿತ ಜನ ವರ ಕಲ್ಪ
ಭೂಜ ಸತ್ಕೀರ್ತಿ ಸಮಾಜ |
ರಾಜ ವಂಶಾಬ್ಧಿ ಚಂದ್ರಮ ಕಂಠೀರವ
ರಾಜ ಶೇಖರನೊಪ್ಪುತಿರ್ದ || ೨

ಸ್ಥಿರ ಧರ್ಮ ಮಾರ್ಗದೊಳಗೆ ಸರ್ವ ದೇಶಕ್ಕೆ
ಕರುಣೋದಯ ಚಿತ್ತನಾಗಿ |
ಪುರುಷೋತ್ತಮನಂತೆ ದೊರೆ ರಾಯ ನರಸೇಂದ್ರ
ಮೆರೆದನೇ ವೇಳ್ವನಚ್ಛರಿಯ || ೩

ಆ ಸಮಯದೆ ಮಧು ನೃಪ ವನ ರಾಷ್ಟ್ರ ವಿ
ಲಾಸವ ನೋಡಲುಜ್ಜುಗಿಪ |
ಭೂಸುರ ಜಯ ಭೇರಿಯ ರವವೆನೆ ಪಿಕ
ಘೋಷಗಳಸೆದುವರ್ತಿಯಲಿ || ೪

ಗಿಳಿಗಳುಗ್ಗಡಿಸೆ ಕೇಕಿಗಳು ಕೈವಾರಿಸೆ
ವಿಲಸಿತ ಭ್ರಮರ ಝೇಂಕರದ |
ಬಲು ದಮನಗಳಬ್ಬರದಿಂದ ಮಧು ನೃಪ
ಸಲೆ ವನ ರಾಷ್ಟ್ರಕೈತಂದ || ೫

ತಳಿರ ಸತ್ತಿಗೆ ಹೊಂಬಾಳೆಯ ಚಾಮರ
* ವೆಳಲತೆ ಮೊಟ್ಟುವ ಪೊದೆಯು |
ಕುಳಿರೆಲರಾಲವಟ್ಟಲೆಗಳಿಂ ಮಧು ರಾಜ
ತಳರ್ದ ನಂದನ ರಾಜ್ಯಕಾಗ || ೬

† ಅರಿ ಹಿಮ ಕೂಟನನಡಗಿಸಿ ಜಾಜಿಯ
ಬಿರುದನೀಡಾಡಿಸಿ ನಗುತ |
ವರ ಕೌಮುದಿ ಯೆಂಬ ಧವಳ ದಂತಿಯನೇರಿ
ಭರದೆ ಬಂದನು ಮಧು ರಾಜ || ೭

ಬಲು ನಾಳಕೇರ ಕಳಸ ಹೊಂದಾವರೆ
ಬೆಳಪ ಕನ್ನಡಿ ಮೊಂದಳಿರ |
ಸಲೆ ತೋರಣದೆ ಮಾಧವನನು ವನ ಲಕ್ಷ್ಮಿ
ನಲಿದಿದಿರ್ಗೊಂಡಳರ್ತಿಯಲಿ || ೮

ಕೇತಕಿಯರಳ ಧೂಳ್ಗಳ ಚೆಲ್ಲಿಕೊಳುತಳಿ
ವ್ರಾತಕಲರ ಮಧು ಮದವ |
ಪ್ರೀತಿಯಿಂದೀಯುತನಿಲದಂತಿ ವನದೊಳ
ಗಾತುರದಲಿ ಚರಿಸಿದುದು || ೯

ಇಂದು ನಾಳಿನೊಳು ಕಾಮನು ವನ ಕೇಳಿಗೆ
ಬಂದಪ ಕಾದಿರೆಂದಾಗ |
ಮಂದಾನಿಲಗೆ ಚೈತ್ರ ತಳವಾರಿಕೆಯನಿ
ತ್ತಂದದೊಳೆಸೆದನೇ ವೇಳ್ವ || ೧೦

* ಎಳಲತೆವೆಟ್ಟುಪವರೆಯು | ಕುಳಿರೆಲರಾಲವಟ್ಟಲಗಳಿಂ. † ಅರಿಹೇಮಂತನ.

ಉಲಿವ ಕೋಗಿಲೆ ಕೃತಕಾದ್ರಿಯೊಳಾಡುವ
ಕಲಕಂಠ ಕವೆಲಕೆರಗುವ ।
ಅಳಿ ವಿಂಡುಗಳರಸಂಚೆಗಳಸೆದುವು
ವಿಲಸಿತ ಚೈತ್ರ ಮಾಸದಲಿ ॥ ೧೧

ಬಿಸಿಲು ಗುದುರೆ ಯೇರಿ ಬೇಸಗೆ ರಾಜನಂ
ದೆಸಗಿ ದುವ್ವಾಳಿಸಲಾಗ ।
ವಿಸುಗುವ ಖುರ ಧೂಳಿ ಯೆಂಬೊಲು ಸುಳಿ ಗಾಳಿ
ಪಸರಿಸಿತಾ ಕಾಲದೊಳಗೆ ॥ ೧೨

ಪೂಸುವ ಸಿರಿ ಗಂಪ ಪಾಸುವ ತಳಿರ್ಗಳ
ಸೂಸುವ ಪನಿ ಸಿರಿಯೆಳಪ ।
ಓಸರಿಸದೆ ನೆಳಲುಗಳ ಸಾರುವ ದೇಶ
ದೇಶದ ಜನಗಳೊಪ್ಪಿದರು ॥ ೧೩

ಈ ಪರಿಯೊಳಗಿಹ ಮಧು ಮಾಸದಲಿ ಪುಷ್ಪ
ಚಾಪನಧಿಕ ವಿರಹಿಗಳ ।
ಕೋಪದೆ ಕುಬುಬಿರಿದೆಸೆಯುತ ಮನಕತಿ
ತಾಪವನಿತ್ತನೇ ವೇಳ್ಯ ॥ ೧೪

ಬಳಿಕಿಂತಿಹ ಮಧು ಮಾಸದೆ ಪಟ್ಟಣ
ದೊಳಗಿಹ ಪಣ್ಯಾಂಗನೆಯರ ।
ಕುಲಕತಿ ಕಟ್ಟಾಣಿ ಮದನ ಮೋಹಿನಿ ಯೆಂಬ
ಲಲನೆ ಯೊಪ್ಪಿದಳರ್ತಿಯಲಿ ॥ ೧೫

ತಾವರೆ ಗಂಧ ತ್ರಿ ಜಗದೊಳು ರಾಜಿಪ
ಭಾವಕಿಯರ ಚಲುವಿಕೆಯ ।
ತೀವಿ ತಂದಾಕ್ಷಣ ಕರುವಿಟ್ಟೆರೆದಿಹ
ಜೀವ ಪುತ್ಥಳಿಯಂತಿಹಳು ॥ ೧೬

ರತಿಯೂರ್ವಶಿ ರಂಭೆ ಮೇನಕಿಯರ ನೆರೆ
ಪ್ರತಿದೋರಲಿವಳ ಚೆಲ್ವಿಕೆಗೆ ।
ಮತಿಗೆ ಮಾಂಗಲ್ಯಕೆ ಚದುರತೆಗೆಣೆಯಲ್ಲ
ಕ್ಷಿತಿಯೊಳು ಮತ್ತೊರ್ವರುಂಟೆ ॥ ೧೭

ಮದನ ವಿಯೋಗಿಗಳೆದೆಯ ಥಟ್ಟಿಗಿದೆಚ್ಚ
ಪದುಮಾಸ್ತ್ರದಲಗಿನಗ್ರದಲಿ ।
ಪುದಿದ ಕೆಂನೀರೆನಲಲತಿಗೆಯುಗುರ್ಗಳಂ
ಪದ ವೆರಳಸೆದುವಂಗನೆಯ ॥ ೧೮

ಮದನ ಶಬರ ಸಂಯಮಿ ಮೃಗಗಳಿಗಾಗ
ಕದುಬಿ ಪೂಡಿದ ಪೂ ಸರಕೆ ।
ಪುದುಗಿದ ಮಿಂಟೆಗಳೆನೆ ಪರಡುಗಳತಿ
ಮುದವನಿತ್ತುವು ನೋಳ್ಪರಿಗೆ ॥ ೧೯

ಕಾಮನ ಕೂರಂಬಿನ ಬತ್ತಳಿಕೆಯ
ಭಾವವ ಜರೆದು ಚೆಲ್ವಿಂದ ।
ಭಾಮೆಯ ಚಾರು ಜಂಘೆಗಳತಿ ಕಾಂತಿಯು
ತೀವಿಕೊಂಡೆಸೆದುವರ್ತಿಯಲಿ ॥ ೨೦

ಶಂಬರ ವೈರಿಯೊಂದೆಂಬ ಕುಂಭಿಯ ಕಟ್ಟ
ವಿಂಬಿನ ಮಣಿಗಂಭದಂತೆ ।
ಅಂಬುಜನೇತ್ರೆಯ ಪೊಂಬಾಳೆದೊಡೆಗಳು
ತುಂಬಿದುವು ಕಣ್ಗೆ ಕೌತುಕವ ॥ ೨೧

ಕೆಂದಾವರೆಯ ಬಂಡುಣಿಸಿಗೆಳಸಿ ಯೈ
ತಂದಿಹ ಮದಹಂಸೆಯಂತೆ ।
ಚೆಂದದ ಮುತ್ತಿನ ಪಾಯಿವಟ್ಟದ ಪದ
ದ್ವಂದ್ವವೆಸೆದುವೆಂದವಳ ॥ ೨೨

ಹೇಮಾಚಲ ರತ್ನ ತಟದಿಂದ ಭೂಮಿಗೆ
ತಾ ಮನೋಹರವಾದಂತೆ ।
ಕಾಮಿನಿ ರನ್ನೆಯ ಪೂರವಾರು ಕಾಂಚೀ
ದಾಮ ವೆರಸಿ ರಾಜಿಸಿತು ॥ ೨೩

ಪಿರಿದು ನೋಳ್ಪರ ದಿಟ್ಟಿಗೆ ಕಾಮನ ರೂಪ
ಧರಿಸಿಕೊಂಡತಿ ಸೊಬಗಿಂದ ।
ತರುಣಿಯುರುಗಳ ಸೀಮಂತ ಮಣಿಯ ಚೆಲ್ವ
ಹರಿಮಧ್ಯ ಮೆರೆದುದರ್ತಿಯಲಿ ॥ ೨೪

ಲಾವಣ್ಯ ರಸ ಪೂರಿತ ಕಾಸಾರದೊ
ಳಾವರ್ತೋರ್ಮಿಗಳಂತೆ ।
ಭಾವೆಯ ತೆಳ್ವಸಿರೊಳು ನಾಭಿ ತ್ರಿವಳಿಯು
ತೀವಿಕೊಂಡೆಸೆದುದೇ ವೇಳ್ವ ॥ ೨೫

ನೆಟ್ಟನಿವಳ ಮೊಲೆಗಳು ವಿಟರಕ್ಷಿಯ
ದಿಟ್ಟಿ ತಾಕಲು ಜಾರದಂತೆ ।
ತೊಟ್ಟನೆ ನೀಲದ ಸರಳಜನಾಧಾರ
ವಿಟ್ಟೊಲು ಬಾಸೆ ರಂಜಿಸಿತು ॥ ೨೬

ಚಿತ್ತಜ ಸುಕುಮಾರ ನಲಿದಿಟ್ಟಾಡುವ
ಮುತ್ತಿನ ಚಂಡುಗಳನಲು ।
ಅತ್ಯುನ್ನತದೊಳು ರಾಜಿಸಿ ತರುಣಿಯ
ವೃತ್ತಕುಚಗಳೊಪ್ಪಿದುವು ॥ ೨೭

ಸುಲಲಿತ ಲಾವಣ್ಯ ಸುಧೆಯ ಪೊಂಗಳಶಗ
ಳಲಿ ತುಂಬಿ ಮುದ್ರೆಯ ಬಲಿದು ।
ಜಲಜ ಸಂಭವನವಳುರದೊಳಿಂಬಿಟ್ಟೊಲು
ನೆಲೆ ಮೊಲೆ ಮೆರೆದುವರ್ತಿಯಲಿ ॥ ೨೮

ಕಂದರ್ಪ ನಗುತ ಲಾಲಿಸುತ ಸಂತಸದೊಳು
ಚಂದದೆ ಪಿಡಿದು ರಾಜಿಸುವ ।
ಇಂದೀವರವಾಂತ ಲತೆ ಯೆನೆ ತತ್ಕರ
ದಿಂದೊಪ್ಪಿದುವು ನಳ ತೋಳು ॥ ೨೯

ಬಿಡದೆ ಜಿತೇಂದ್ರಿಯ ನಿಕರವ ಮಿಗೆ ಕಟ್ಟಿ
ಕೆಡಹುವ ಸ್ಮರ ಪಾಶದಂತೆ ।
ಮಡದಿರನ್ನೆಯ ಬಾಹು ವಲ್ಲರಿ ನೋಳ್ಪರ್ಗೆ
ಕಡು ಚೆಲ್ವಿಕೆಯ ಬೀರುತಿಹುವು ॥ ೩೦

ಲಲನೆಯ ಲಾವಣ್ಯಾಂಬುಧಿಯೊಳು ಪುಟ್ಟಿ
ಥಳಥಳಿಸುವ ಶಂಖದಂತೆ ।
ನಳನಾಕ್ಷಿಯ ನುಣ್ಗೊರಳು ನೋಳ್ಪರ ಕಣ್ಗೆ
ಸುಲಲಿತೋತ್ಸವವಿತ್ತುದಾಗ ॥ ೩೧

ಮುಖ ಚಂದ್ರನೊಳಗೆ ರಾಜಿಪ ವಟಫಲ ಮಿಗೆ
ಚಕಚಕಿಪಂದದೊಳಾಗ ।
ಅಕಳಂಕರೂಪೆಯ ರದನಚ್ಛದ ವಿಟ
ಶುಕಗಳ್ಗೆ ಸುಖ ಗೊಡುತಿಹುದು ॥ ೩೨

ಸರಸಿಜ ಗಂಧಿಯ ವದನ ನಂದನದಲಿ
ನೆರೆ ಪೂತು ಸಾಲುಗೊಂಡೆಸೆವ ।
ಪಿರಿದು ಮೊಲ್ಲೆಯ ಮುಗುಳುಗಳನೆ ಮೀರೆದುವು
ಮಿರುಗುವ ದಂತ ಪಙ್ಕ್ತಿಗಳು ॥ ೩೩

ಲಲಿತ ಚಂಪಕವನಾಸ್ವಾಬ್ಜದೊಳಿಂಬಿಡ
ಲಳಕಾಳಿಗೆ ಪಗೆ ಯೆಂದು ।
ಸುಲಲಿತ ತಿಲ ಕುಸುಮವೆನಜನಿಟ್ಟೊಲು
ಹೊಳವ ನಾಸಿಕ ರಂಜಿಸಿತು ॥ ೩೪

ಅಸಿಯುಳ ದಿಟ್ಟಯುಂಗಜ ಪಿಡಿದಿಡುವಿಟ್ಟ
ಬಿಸಜಗಂಧಿಯು ನಿಡುಪುರ್ಬುರ್ |
ಕುಸುಮಶರನ ಸಿಂಗಾಡಿಯುಬ್ಬೆನಲಾ
ಶಶಿಮುಖಿ ಯೆಸೆದಳೇ ವೇಳ್ವ || ೩೫

ತರುಣಿಯು ಕದಪು ಕಂದರ್ಪ ರತಿಯು ಕೈಯು
ಮಿರುಪ ದರ್ಪಣಗಳ ಕದಪು |
ಪೆರೆನೊಸಲಿನ ಸುಳಿಗುರುಳ ಸೊಂಪಿನ ಚೆಲು
ವರಳುಗಣ್ಣಬಲೆ ಯೊಪ್ಪಿದಳು || ೩೬

ಕಾವ ರಾಯನ ಪಟ್ಟದಾನೆ ಯೆಂದೆನಲಾ
ಭಾವಕಿ ಯೌವನ ಮದವ |
ತೀವಿದ ವಿಟದುಂಬಿಗೀಯುತ ಸನ್ಮೋಹ
ನಾವಳಿಯೊಳಗೊಪ್ಪಿದಳು || ೩೭

ಇಂತಪ್ಪ ಮದನಮೋಹಿನಿ ನಾರೀಜನ
ಚಿಂತಾಮಣಿ ಕೆಳದಿಯರ |
ತಿಂತಿಣಿ ಸಹಿತ ಸಂಭ್ರಮದೊಳಗಿರಲೊರ್ವ
ಕಾಂತೆ ಯೈತಂದಳು ನಗುತ || ೩೮

ಬರಲಾತ್ಮ ಸಖಿಯು ಮುಖಾಬ್ಜವನೀಕ್ಷಿಸಿ
ಕರವಿಡಿದೊಡನೆ ಕುಳ್ಳಿರಿಸಿ |
ಪಿರಿದು ಮನ್ನಿಸುತ ಕರ್ಪೂರ ವೀಳ್ಯವನಿತ್ತು
ಸರಸದೆ ನುಡಿದಳಿಂತೆಂದು || ೩೯

ಬಾರೆಲೆ ವರ ಚಿತ್ರಲೇಖೆ ಯೀ ಭುವನದೆ
ಚಾರುತರದ ಚೆಲ್ವಿಕೆಯ |
ನೀರರ ಸುಗುಣ ವಿಸ್ತಾರರ ಮೋಹನಾ
ಕಾರರ ಬಗೆಯ ಪೇಳೆನಗೆ || ೪೦

ಎನ್ನಯ ರೂಪಿಗೆ ತಕ್ಕಂಥ ಪುರುಷನ
ನನ್ನಿಯಿಂದಲಿ ಪೇಳಲೀಗ ।
ಉನ್ನತವಾದಾಭರಣವ ಕೊಡುವೆನು
ನನ್ನಾಣೆ ಸುಳ್ಳ ನಾ ಪೇಳೆ ॥ ೪೧

ಕಾಮನ ಪೋಲುವ ಸೋಮವದನನನು
ಕೋಮಲಾಂಗಿಯೆ ಕರೆತರಲು ।
ಪ್ರೇಮದಿಂ ಮುತ್ತಿನ ಹಾರವನೀವೆನು
ತಾಮಸಗೆಯ್ಯದೆ ಪೋಗಿ ॥ ೪೨

ತರುಣೀಮಣಿಯೆ ಯೆನಗೆರಕವಾಗಿರುವನ
ಕರೆತಂದರೆ ನೀರೆ ನಿನಗೆ ।
ಪರಿಪರಿ ಸೀರೆ ರವಿಕೆ ಯಿತ್ತು ಪೊರೆವೆನು
ಗುರುಕುಚದಬಲೆ ನೀ ಕೇಳ್ ॥ ೪೩

ಮೆರೆವ ಚಪ್ಪನ್ನ ದೇಶದ ರಾಜಪುತ್ರರ
ಪಿರಿದು ಚೆಲ್ವಿಕೆಯು ಪ್ರೌಢತೆಯು ।
ಸಿರಿಯು ಸಂಭ್ರಮವ ನೀನರಿದಿರೆನಗೆ ಮನೋ
ಹರುಷದೊಳುಸಿರಬ್ಜನೇತ್ರೆ ॥ ೪೪

ಚಿತ್ರೈಸು ಮದನಮೋಹಿನಿ ಚೆಲುವಿನ ಕರು
ವೆತ್ತಿಹ ಗಂಡು ಪುತ್ಥಳಿಯು ।
ಬಿತ್ತರವೆಡೆದೀ ಪಟ್ಟಣದೊಳಗೊರ್ವ
ನುತ್ತಮನಾಯಕನಿಹನು ॥ ೪೫

ರೂಪಜಯಂತನೆನಿಪ ಪೆಸರವನಿಷ್ಟು
ಚಾಪ ಚಂದ್ರಮ ಸುಮನಸನು ।
ಚಾಪಲನೇತ್ರೆ ಕೇಳ್ಚೆಲುವಿಕೆಗೆಣೆ ಯಿಲ್ಲ
ನೀ ಪುಣ್ಯವತಿ ಚಿತ್ರೈಸು ॥ ೪೬

* * * *

ಇಂತಪ್ಪ ರಾಜನ ಕೂಡಿದ್ದರೆ ನೀನು
ಕಂತುವಿನರಸಿ ನೀನೆನಿಪೆ ।
ಸಂತಸವಾಗಿಹುದನು ವೆಂದು ಕಾಂಬೆನೊ
ದಂತಿ ಗಮನೆ ನೇತ್ರದಿಂದ ॥ ೪೭

ಧರೆಯು ಮೇಲಣ ಪುರುಷರ ರೂಪು ನಾ ಪೇಳ್ವ
ಗರುವನ ಮೆರೆವ ಚೆಲ್ವಿಕೆಗೆ ।
ಸರಿಯಿಲ್ಲ ನೀ ನಿಟ್ಟಿಸೆ ನಿನ್ನ ಸ್ಮರ ವೀರ
ನುರವಣಿಸುತ ಬಾಧಿಸುವನು ॥ ೪೮

ನಿಟ್ಟಿಸಿ ನೋಡಿದ ಪೆಣ್ಗೆ ದಶಾವಸ್ಥೆ
ಹುಟ್ಟುವುದಬಲೆ ಚಿತ್ತೈಸು ।
ಸೃಷ್ಟಿಯೊಳಾವ ಸುಕೃತದೊಳವನ ತಾಯಿ
ಕಟ್ಟರಕದಲಿ ಪಡೆದಳೂ ॥ ೪೯

ಅವನಂಗ ಸಂಗ ಸೌಖ್ಯವ ಪಡೆದಿಹ ಪೆಣ್ಣು
ಭುವನದೊಳಾವ ಪುಣ್ಯವನು ।
ತವೆ ರಚಿಸಿಹಳೂ ನಾನೇನೆಂಬೆ ನೋಡಲು
ದ್ಭವಿಸಿತುತ್ಸವವೇನಬಲೆ ॥ ೫೦

---

* ನವ ಮನ್ಮಥಾಕಾರನ ಸಂಗಕ್ಕೋಸ್ಕರ
ಯಿಳೆಯೊಳಿರುವ ಸ್ತ್ರೀಯರೆಲ್ಲ ।
ಮುದದೊಳು ಇಷ್ಟದೇವರ ಪ್ರಾರ್ಥನೆಯನು
ಯಿರುಳು ಹಗಲು ಮಾಡುವರು ॥
ಚಾಮುಂಡೇಶ್ವರಿ ಕರುಣದೆ ಯಿಾ ಮಹಾ
ರಾಜನ ಸುಖವ ಕರುಣಿಸೆ ।
ಮಾಜದೆ ನಿನಗೆ ಕುಂಕುಮಾರ್ಚನೆಯನು ಸು
ಪ್ರೇಮದೆ ಮಾಡಿಪೆವೆಂದು ॥

ಪ್ರಕ್ಷಿಪ್ತಗಳಂತೆತೋರುವ ತಪ್ಪಾಗಿರುವ ಈ ಎರಡುಪದ್ಯಗಳು ಮೂಲ ಪ್ರತಿಯಲ್ಲಿ ೪೬ನೆಯ ಪದ್ಯದಮುಂದೆ ದೊರೆಯುತ್ತವೆ.

ವಂಚನೆಯೇಕವನನು ಕಂಡ ನೀರೆಯು
ಪಂಚೇಂದ್ರಿಯು ಪಿಡಿದೆಳದು ।
ಮುಂಚುತಲಿವೆ ಕೂಟಕೆ ನಿನ್ನೊಳನಗೆ ಪ್ರ
ಪಂಚವಿನ್ನೇಕೆ ನಿನ್ನಾಣೆ ॥ ೫೧

ರೂಪಿಗೆ ದಿಟ್ಟಿ ತಕ್ಕಿಗೆ ತನು ಸರಸಾ
ಲಾಪಕೆ ಕಿವಿ ಜಿಹ್ವೆಗಧರ ।
ಆ ಪುರುಷನ ವ್ಯಗಂಪಿಗೆಸೆವ ಮೂಗು
ತಾ ಪಿರಿದಾಗೆಳಸುತಿವೆ ॥ ೫೨

ಕಡೆಯು ಮಾತೇನು ನಿನ್ನಯು ರೂಪು ಜಾಣ್ಮೆಗೆ
ಪಡಿಯುವನೆಂದೀಗ ಮನವ ।
ಹಿಡಿದೆನ್ನ ಮೋಹವನೀಡಾಡಿ ನಿನ್ನೊಳು
ನುಡಿದೆ ನಿಜವನಬ್ಜನೇತ್ರೆ ॥ ೫೩

ಎನಲಂದವಳ ನುಡಿಯು ಕೇಳಿ ಕಿವಿ ವೇಟ
ಕೊನರಿ ಕೋಮಲಿಸೆ ಬೇಗದಲಿ ।
ತನು ನವಿರ್ಗುಡಿಗಟ್ಟಿ ಮದನ ಮೋಹಿನಿಯಾಗ
ವಿನಯದಿಂದುಸಿರ್ದಳಾ ಸಖಿಗೆ ॥ ೫೪

ಲಲನೆ ನೀನುಸಿರಿದ ರೂಪ ಜಯಂತನ
ಚಲುವಿಕೆಯೆನ್ನಕ್ಷಿಗಳಿಗೆ ।
ಸಲೆ ಗೋಚರವೆಂದಿಗಾಗುವುದೆಂಬುದ
ನೊಲಿದು ಪೇಳನಗೆ ನಿಶ್ಚಯದೆ ॥ ೫೫

ಆದರೆ ಕೇಳಬುಜಾಕ್ಷಿ ನಾಳಿನ ಸೂ
ರ್ಯೋದಯಕವನೀ ಪುರದ ।
ಮಾಧವನುತ್ಸವವನು ನೋಡಲು ನಮ್ಮ
ಬೀದಿಯೊಳಗೆ ಬರುತಹನ ॥ ೫೬

ಆ ವೇಳೆಯಲಿ ಸಿಂಗರಗೈದು ನಿನ್ನಯ
ಭಾವದ ಬಗೆದೋರಿಯುವನ ।
ಕಾವನಂಬಿಗೆ ಮೆಯ್ಯೊಡ್ಡಿಸಿ ಸೆಳದು ಸಂ
ಭಾವಿಸು ಮೋಹರತಿಯೊಳು ॥ ೫೭

ಎಂದವಳಾಡಿದ ನುಡಿಗೆ ಮನದೊಳಾ
ನಂದವಡೆದು ಲಲಿತಾಂಗಿ ।
ಅಂದಿನ ದಿನವ ಕಳೆಯಲಾಗ ರವಿ ನಡೆ
ತಂದನು ಪೂರ್ವಾಚಲಕೆ ॥ ೫೮

ಬಳಿಕಾಗ ದಶಮಿಯ ದಿಂಡಿನುತ್ಸವದಲಿ
ನಳಿನಾಕ್ಷ ಪಶ್ಚಿಮ ರಂಗ ।
ಥಳಿಲನೆ ಸರ್ವಸಂಭ್ರಮವ ಬೀರುತ್ತಲಾ
ಪೊಳಲೊಳು ಮೆರೆಯುತ್ತೈತಂದ ॥ ೫೯

ಬುರುಗಿನ ಪೆರ್ಗೊಂಬಿನ ಕಾಳೆ ಜಾಗಟೆ
ಬಿರುದಿನ ವಾದ್ಯಮೌರಿಗಳ ।
ಕರಿಗಳ ಮೇಲೊಪ್ಪುವ ದಮಾನಗಳ
ಬ್ಬರವೆಸೆದುದು ಪುರದೊಳಗೆ ॥ ೬೦

ತಾಳಮದ್ದಳೆ ಶಂಖನಾದ ಭಾಗವತರ
ಮೇಳದ ಸಂಪ್ರದಾಯಗಳ ।
ಆಳಾಪಗಳಿಂದ ಶ್ರೀಹರಿ ಸಕಲಸಂ
ಮೇಳದೆ ಮೆರೆದನರ್ತಿಯಲಿ ॥ ೬೧

ಆಲವಟ್ಟವು ಸಾಲುಸತ್ತಿಗೆ ಚಿಮ್ಮುವ
ವಾಲಚಿತ್ರದ ಪಟದಿಂದ ।
ಬಾಲೆಯರಾಡುವ ಬಹುಬಗೆ ಪಾತ್ರದ
ಕೋಲಾಟವೆಸೆದುವರ್ತಿಯಲಿ ॥ ೬೨

ಸಿಂಗರವಡೆದಿಹ ಪುರಜನ ಬಹು ಬಗೆ
ಹೆಂಗಳು ವಿಪ್ರನಾರಿಯರು ।
ಜಂಗುಳಿ ಡವಳ ಶೋಭಾನವ ಪಾಡುತ
ರಂಗನುತ್ಸವದೊಳ್ಳೈದಿದರು ॥ ೬೩

ರಾಜಕುಮಾರರು ಮಂತ್ರಿ ಮನ್ನೆಯರ ಸ
ಮಾಜ ವಿಟರು ವಿದೂಷಕರು ।
ಶ್ರೀ ಜಗನ್ಮಯನನೋಲೈಸುತೈತಹ ಬಲು
ತೇಜವನೇನ ಬಣ್ಣಿಸುವೆ ॥ ೬೪

ಅವರೆಡೆಯೊಳಗೆ ತಾರಾಗಣ ಮಧ್ಯದೆ
ಖವಖವಿಸುವ ಚಂದ್ರನಂತೆ ।
ತವಕದೆ ರೂಪ ಜಯಂತ ಸಖರ ಕೂಡಿ
ಸು ವಿಲಾಸದೊಳೈತಂದ ॥ ೬೫

ಕೇಳದಳಲ್ಲಿಯುಬ್ಬರ ಚಿತ್ರರೇಖೆ ನೀ
ಹೇಳೆಂದು ಕೆಳದಿಯನವಳು ।
ಪೇಳಲಳವೆ ಪಕ್ಷಿಮರಂಗನುತ್ಸವ
ದೇಳಿಗೆಯೊಂದು ಸಿರಿದಳು ॥ ೬೬

ತರುಣಿ ನಾನುಸಿರಿದ ಚಲುವರೆರೆಯನೀಗ
ಬರುತಿಹನೇಳು ಸಿಂಗರಿಸು ।
ಕರಿಸು ಮೇಳದ ಸಖಿಯರ ಕೂಡಿ ಹರ್ಮ್ಯಾಗ್ರ
ನಿರದೇರಿ ನೋಡು ನೀನವನ ॥ ೬೭

ಎನಲಾ ಮಾತಿಗೆ ಹರುಷಾಶ್ರುವಿನಿಂದ
ಘೊನಲುವರಿಯೆ ಪುಳಕಾಂಬು ।
ವನಿತೆ ಮಂಗಳ ಮಜ್ಜನವ ಮಾಡಿ ಸಿಂಗರ
ಕನುವಾದಳೇನ ಬಣ್ಣಿಸುವೆ ॥ ೬೮

ಅಗಿಲು ಚಂದನ ಕಸ್ತೂರಿ ಕುಂಕುಮ ವ್ಯೆಗೆ
ತಿಗುರಲು ದೆಸೆ ದೆಸೆಗಳನು ।
ಮಘಮಘಿಸುತಲಾಗ ಮದನಮೋಹಿನಿ ಚೆಲ್ವಿ
ನೊಗುಮಿಗೆಯೊಳಗೊಪ್ಪಿದಳು ॥ ೧೯

ಮುತ್ತಿನ ಮುಂಟಿಕೆ ಕಾಲ ಪೆಂಡೆಯ ಮುದ
ವೆತ್ತ ನೂಪುರ ಹೊನ್ನ ದಾರ ।
ಉತ್ತಮ ಮಿಸುನಿಯ ಗಂಟೆ ಸರಗಳಿಂದ
ಮತ್ತೇಭ ಯಾನೆ ಯೊಪ್ಪಿದಳು ॥ ೨೦

ಚಾರುತರದ ದಿವ್ಯ ಧವಳ ದುಕೂಲವ
ಸೇರಿದ ಕಾಂಚಿಯ ದಾಮ ।
ತೋರ ಮುತ್ತಿನ ಕಂಠ ಮಾಲೆ ಚೌಸರದಿಂದ
ಪಾರಿಜ ಗಂಧಿ ಯೆಸೆದಳು ॥ ೨೧

ನವ ರತ್ನದ ಪುಸ್ತಿ ಕಟ್ಟಾಣಿ ಮುತ್ತಿನ
ಖಮಖಮಿಸುವ ಪಂಚ ಸರದ ।
ಅವಳಿ ಮಾಲೆಯ ಮಧ್ಯಕಮರಿದ ಪದಕದೆ
ಕುವಲಯ ನೇತ್ರೆ ಯೊಪ್ಪಿದಳು ॥ ೨೨

ಅಸಿಯ ಬೆರಳ ಳುಂಗುರ ಥಳಥಳಿಸುವ
ಹೊಸ ಹೊನ್ನ ಗೌಳ ಸರಗಳ ।
ಎಸೆವ ಮುತ್ತಿನ ಚೆಲ್ವ ಕಡಗ ಕಂಕಣದಿಂದ
ಶಶಿಮುಖಿ ಮೆರೆದಳರ್ತಿಯಲಿ ॥ ೨೩

ರನ್ನದ ಬಳೆ ತೋಳ ತಾತಿ ಮೋಹನದ
ತ್ಯುನ್ನತ ಭುಜಕೀರ್ತಿಯಿಂದ ।
ಕನ್ಯಾ ಜನ ಚಿಂತಾಮಣಿ ರೂಪ ಸಂ
ಪನ್ನೆ ಮೆರೆದಳೊಲವಿನಲಿ ॥ ೨೪

ಹರಳೋಲೆ ಕಟ್ಟಾಣಿ ಮುತ್ತಿನ ಮೆಂಟೆಯು
ಮಿರುಗುವ ಚೆನ್ನ ಸರಗಳು ।
ತುರುಗಿದ ದಿವ್ಯ ಕಾಂತಿಯು ಮೂಕುತಿಯಿಂದ
ಸರಸಿಜಗಂಧಿ ಯೊಪ್ಪಿದಳು ॥ ೭೫

ಪೆರೆನೊಸಲಿನ ರತ್ನದ ಬೊಟ್ಟು ತಿಲಕ ಬಂ
ಧುರದ ಮುತ್ತಿನ ಕುಚ್ಚಿನಿಂದ ।
ತರುಣಿ ಮೋಹನವರಗಿಣಿ ಸೌಂದರ್ಯದ
ಸರಣಿ ಯೊಪ್ಪಿದಳಾ ವೇಳೆ ॥ ೭೬

ಮಲ್ಲಿಗೆಯರಳ ಮಾಲೆಗಳಿಂದ ವೇಣೀ
ವಲ್ಲರಿ ತುಡುಕೆ ಹಿಂಮುಡಿಯು ।
ಸಲ್ಲಲಿತಾಂಗಿ ಸಾಮಜಯಾನೆ ಬಹು ಬಗೆ
ಯಲ್ಲಿ ಸಿಂಗರಗೈದಳಾಗ ॥ ೭೭

ಕರಗ ಕಾಳಾಂಜಿ ಕೈ ಪಿಡಿ ಬಾಸಣಿಗೆ ಬಂ
ಧುರದಾಲವಟ್ಟ ಚಾಮರದ ।
ಸುರುಚಿರ ರತ್ನದ ಹಡಪ ಗಿಂಡಿಗಳ ಸಿಂ
ಗರದ ನಾರಿಯರ್ಕೈದಿದರು ॥ ೭೮

ಮುಡಿಯು ಕಟ್ಟುವರು ದಿವ್ಯಾಂಗಕಾಭರಣವ
ತೊಡಿಸುವ ಮೋಹಿವೆಣ್ಣುಗಳು ।
ಬಿಡದಾಗ ಪರಿಮಳವನು ತಿಗುರುವ ಹೆಂಗ
ಳೊಡನೈತಂದರರ್ತಿಯಲಿ ॥ ೭೯

ಮೂಡುವ ಮೊಲೆಯು ಮಿಸುನಿ ಮಿಂಟೆಯಂದದೆ
ಕೂಡೊಪ್ಪುವ ಮುದ್ದು ಮೊಲೆಯು ।
ದೂಡಿಪ ಬೆಳಗಾಯಿ ಬೊಗರಿ ಮೊಲೆಯು ಚೆಲ್ವ
ಗಾಡಿ ಕಾತಿಯರ್ಕೈದಿದರು ॥ ೮೦

ಕಂಗೊಳಿಸುತಿಹೊಪ್ಪಿಡಿ ನಡುವಿನ ಚೆಲ್ವಿ
ನುಂಗುರ ವಿಡಿಯು ನಡುವಿನ ।
ಸಿಂಗಾರದ ಸೆಳ ನಡುವಿನ ಬಲು ಮೋಹ
ನಾಂಗಿಯರ್ಕೈತಂದರಾಗ ॥ ೮೧

ಕನ್ನೈದಿಲುಗಳಸಳು ಗಣ್ಣ ಕಾಂತಿಯಿಂ
ದುನ್ನತವೆಹ ಮಿಂಚು ಗಣ್ಣ ।
ಚೆನ್ನಾಗಿ ಮೆರೆದಿಹ ತಾವರೆ ಗಣ್ಣಿನ
ಹೆಣ್ಣು ಗಳೈದಿತೊಗ್ಗಿನಲಿ ॥ ೮೨

ನೋಡುವ ನಗುವ ಕೈ ವೊಯ್ಯುದ್ದರೆ ಚೆಲ್ವ ಸೂ
ತಾಡುವ ಮೋಹದೇಳ್ಗೆಯುಲಿ ।
ಪಾಡುವ ಸಖಿಯರ ಮೊತ್ತದೊಳಗೆ ನೆಲೆ
ವಾಡವನೇರಿದಳಾಗ ॥ ೮೩

ನೀಲ ಕುಂತಳಗಳ ತಿದ್ದುತ ಮೊಲೆಗಳ
ಮೇಲುದು ಜಾರೆ ಸೇರಿಸುತ ।
ಬಾಲೆಯರುಗಳ ಕೈ ವಿಡಿದುಪ್ಪರಿಗೆಗೆ
ಲೋಲ ಲೋಚನೆ ಯೈದಿದಳು ॥ ೮೪

ಕಡೆಗಂಗಳ ಹೊಳಹಿನ ಕಾರ ಮಿಂಚಿನ
ಮುಡಿ ಮೇಘ ಮೈದೊಡವೊಳಪು ।
ಬಿಡದಿಂದ್ರ ಚಾಪದಂತಿರಲಾಗ ಕಾರ್ಗಾಲ
ದೊಡತಿಯೊಲವಳು ನಡೆದಳು ॥ ೮೫

ರಂಗನಾಥನ ಸೇವೆ ಮಾಡಿ ಯೂರ್ವಶಿ ದಿ
ವ್ಯಾಂಗನೆಯರುಗಳೊಪ್ಪಿನಲಿ ।
ಹಿಂಗದೆ ತನ್ನ ನಲೆಗೆ ಪೋಪೊಲು ಮೋಹ
ನಾಂಗಿ ಯೇರಿದಳುಪ್ಪರಿಗೆಯು ॥ ೮೬

ನೆಲೆ ಮಾಡದ ನವ ರತ್ನದ ಭಿತ್ತಿಯೊ
ಳೆಳವಟ್ಟ ವೇದಿಕೆಯೊಳಗೆ ।
ಕೆಳದಿಯರೊಡಗೂಡಿ ಸುಳಿದಾಡುವ ಜನ
ಜಲಧಿಯನಿರದೀಕ್ಷಿಸಿದಳು ॥ ೮೭

ಬಿಳಿ ಮುಗಿಲಿಂದೈದಿದ ಬಳ್ಳಿ ಮಿಂಚಿನ
ಹೊಳಹಿನ ನೆಲ ಮಾಡವೇರ್ದ ।
ಕಳಸ ಕುಚಗಳ ಕಾಮಿನಿಯಕ್ಷಿಗಳ ಕಾಂತಿ
ಬಳಸಿ ಮುತ್ತಿತು ನೆರವಿಗರ ॥ ೮೮

ಏನಿದಚ್ಚರಿಯೆಂದು ನೆರವಿಗರ್ಬೆಳಕ ಸು
ಮ್ಮಾನದೆ ಮೇಗ ನಿಟ್ಟಿಸುತ ।
ಮಾನಿನಿಯಾಸ್ಯೇಂದು ಮಂಡಲವನು ಕಂ
ಡಾನಂದವಿಡಿದು ನುಡಿದರು ॥ ೮೯

ರತಿ ದೇವಿಯೊ ರಂಭೆಯೊ ಸುರ ನಾಥನ
ವಿತತ ಪಟ್ಟದ ವರ ಸತಿಯೊ ।
ಕ್ಷಿತಿಯೊಳುತ್ತಮ ನಾಯಕಿ ಯಿವಳಾರೆಂ
ದತಿಶಯದಿಂದ ನೋಡಿದರು ॥ ೯೦

ಸುರ ಲೋಕದ ನಾರಿಯರ ಲಾವಣ್ಯವ
ಸರಸಿಜ ಭವ ತಂದು ನಗುತ ।
ಹರುಷದೆ ಕರುವಿಟ್ಟ ಪುತ್ತಳಿ ಯಲ್ಲದೆ
ನರ ಲೋಕದ ಪೆಣ್ಣಲ್ಲ ॥ ೯೧

ಕೆಂದಾವರೆ ಯಿದೆ ಕೊಳನಿಲ್ಲ ಸೌರಭ್ಯ
ಬಂಧೂಕವಿದೆ ಬನವಿಲ್ಲ ।
ಕುಂದದೆ ಹೊಳೆದಾಡುತಿವೆ ಬಾಳ ಮೀನ್ಗಳು
ಸಿಂಧುವಿಲ್ಲೆಂದು ನೋಡಿದರು ॥ ೯೨

ಚಕಚಕಿಸಿದುವು ತಾರಾಳಿ ಸರೋಜಗ
ಳ್ವಿಕಸಿತವಾದುವಿದೇನು ।
ಮಕರಕೇತುವಿನ ಮೋಹಿನಿಯು ವಿಲಾಸದ
ಮುಖ ಚಂದ್ರನುದಯಿಸಲಾಗ ॥ ೯೩

ಅಲುಗದೆವೆಗಳಲ್ಲಾಡದ ಮೈ ಮುಂಗ
ಕೊಳೆಯದ ಕಾಲ್ಕದಪಿನಲಿ ।
ನೆಲಸಿದ ಕೈ ನೆಟ್ಟ ದಿಟ್ಟಿಯು ಕಾಮುಕ
ರಲಸದೀಕ್ಷಿಸಿದರಂದವಳ ॥ ೯೪

ಸರಸಿಜ ಗಂಧಿಯು ದಿವ್ಯಾಂಗ ಲಾವಣ್ಯ
ಶರಧಿಯೊಳ್ಸರವಿಗರಕ್ಷಿ ।
ವರವಿಮಾನಗಳು ನೆರೆ ಪೊರಳುತ ತೆರಳುತ
ಮರಳಿ ಮುಳುಗುತೊಪ್ಪಿದುವು ॥ ೯೫

ಈ ಪರಿಯೊಳಗೊಪ್ಪುತಿಹ ಪೌರ ಜನಂನಾ
ಚಾಪಲ ನೇತ್ರೆಯೀಕ್ಷಿಸುತ ।
ರೂಪ ಜಯಂತನ ನೋಳ್ಪ ಬಲೆಮ್ಮೋಹದಾ
ಳಾಪದೊಳ್ಸೆದಳೇ ವೇಳ್ವ ॥ ೯೬

ಅನಿತರೊಳಾತ್ಮ ಸಖರ ಮೇಳದೊಳಗಾಗ
ಮನಸಿಜ ನರರೂಪ ತಾಳಿ ।
ತನುವಿಡಿದೈತರುವಂದದೊಳಾ ಕ್ಷಣ
ಕೊನಬುದೋರುತಲೈತಂದ ॥ ೯೭

ಹಾರ ಕಡಗ ಕಂಠಮಾಲೆ ಕರ್ಣದೊಳಿಹ
ತೋರ ಮುತ್ತಿನ ಚೌಕುಳಿಯು ।
ಸೇರಿದ ಹೊಸ ಹೊನ್ನ ಕಟಿಸೂತ್ರದ ಶೃಂ
ಗಾರ ನಾಯಕನೈತಂದ ॥ ೯೮

ಮೆಟ್ಟಿದ ಪೊನ್ನ ಪಾವುಗೆ ಕರದೊಳಗಳ
ವಟ್ಟ ಸಂಪಗೆಯ ಪೂ ಚಂಡು ।
ತೊಟ್ಟ ಮುತ್ತಿನ ವೈರಣಿಯಿಂದ ಚೆಲುವಿನ
ಕಟ್ಟೆರಕದೆ ನಡೆತಂದ ॥ ೯೯

ಕಂಡಳವಳು ಕಡು ತವಕದೆ ಕುಸುಮ ಕೋ
ದಂಡನ ಪಳಿವ ಚೆಲ್ವಿಕೆಯ ।
ಗಂಡು ಗಾಡಿಯ ನೆರೆ ರೂಪ ಜಯಂತನ
ಪುಂಡರೀಕಾಕ್ಷಿಯುಂದಾಗ ॥ ೧೦೦

ನಿಟ್ಟುಸಲವಳ ಮೈ ರೋಮಾಳಿ ನೆರೆ ಗುಡಿ
ಗಟ್ಟ ಕಂಪನವೇರೆ ಯಾಗ ।
ಬಟ್ಟಿಡುವಾನಂದಾಶ್ರುವಿನೊಳಗಂದು
ತೊಟ್ಟನೆ ಸಖಿಯು ಕೇಳಿದಳು ॥ ೧೦೧

ಎಲೆ ಚಿತ್ರರೇಖೆ ನಿಟ್ಟುಸು ನೀ ಪೇಳದ
ಚೆಲುವರೆರೆಯನಿವನಹುದೆ ।
ಸಲೆ ಯೆನ್ನ ಮನವೀತಗೆ ಕೋಳು ಹೋದುದು
ನೆಲೆಯನುಸಿರು ನೀರಜಾಕ್ಷಿ ॥ ೧೦೨

ನೋಡಲು ನರ ಜನ್ಮದೊಳಗಿಂತು ಸೊಬಗಿನ
ರೂಢಿ ವಿಡಿದ ನೀರುಂಟೆ ।
ಕೂಡೆಯಾ ಪುರುಷನ ನಿರ್ಮಿಸಿದಜನ ಕೈ
ಗಾಡದ ಬಗೆ ಯಿನ್ನೆಂತೊ ॥ ೧೦೩

ರತಿ ಪತಿ ಯೆಂಬನೆ ದಿವ್ಯಾಂಗವಿವಗು
ನ್ನತವಾಗಿ ರಾಜಿಸುತಿಹುದು ।
ಕ್ರತು ಭುಜರೊಡೆಯನೆಂಬನೆ ಮೈ ಗಣ್ಣಿಲ್ಲ
ಕ್ಷಿತಿಯೊಳಿಂತವನಾರುಸಿರು ॥ ೧೦೪

ಕಾವನ ಕೆಂದಳಿರಂಚಿನ ಭಾವದ
ಠೀವಿಯು ಜರೆದು ರಂಜಿಸುವ ।
ತೀವಿದ ಪಾದ ಪದ್ಮಗಳ ಚೆನ್ನಿಗನಿವ
ನಾವ ದೇಶದ ಸುಕುಮಾರ ॥ ೧೦೫

ಶೃಂಗಾರ ಶಾಲಿಯು ಕೋಮಲ ಗರ್ಭದ
ರಂಗು ವಿಡಿದ ಮೊತ್ತದಂತೆ ।
ಜಂಘೆಗಳಿಂದ ರಾಜಿಸುವನಾರೀತನ
ಸಂಗಕೆಳಸಿತೆನ್ನ ಮನವು ॥ ೧೦೬

ಸ್ಮರ ಕರಿ ಕರದಂತೆ ರಂಜಿಸುತಿಹ ಬಂ
ಧುರ ವಿಡಿದೂರು ದ್ವಯದ ।
ಗರುವನಾರುಸಿರೀತನ ಕೂಡಬೇಕೆಂಬ
ಪಿರಿದಾಸೆ ಪುಟ್ಟಿದುದೆನಗೆ ॥ ೧೦೭

ಪುಷ್ಪ ಶರನ ಕಾಂತೆ ನಲಿದಾಡುವ ಜಾರು
ಗುಪ್ಪೆಯಂದದಲಿ ರಂಜಿಸುತ ।
ಒಪ್ಪುವ ಪೊರವಾರ ನೀರನ ಕರೆ ಬಿಗಿ
ಯಪ್ಪಿಕೊಂಬನು ಬೆಚ್ಚಂತೆ ॥ ೧೦೮

ಲಾವಣ್ಯ ಲಕ್ಷ್ಮಿ ನಲಿದು ಕ್ರೀಡಿಸುತಿಹ
ತಾವರೆ ಗೊಳದಂದದಲಿ ।
ಠೀವಿಯು ತೋರುವ ಪೊಕ್ಕುಳ ಕುವರನ
ಭಾವವನುಸಿರೆನಗಬಲೆ ॥ ೧೦೯

ನೆರೆ ಮೋಹಿ ಪೆಣ್ಗಳ ದಿಟ್ಟಿಗಳ್ ನಟಿಸುವ
ಪಿರಿದು ರಂಗ ಸ್ಥಳದಂತೆ ।
ವರ ವಕ್ಷ ಸ್ಥಳದವನಾರೆಂಬುದ
ನರಿಪೆನಗಂಬುಜ ವದನೆ ॥ ೧೧೦

ನಳಿ ತೋಳು ಸೆಳ್ಳಂಗುರ್ಕರ ಭುಜ ದಂಡದ
ತಳ ತಳಿಸುವ ನುಣ್ಗೊರಳ |
ಚೆಲುವನ ಬಗೆ ಸೋಲಿಸಿತೆನ್ನ ಕರೆತಂ
ದುಳುಹು ಕಾಮನ ಕಯ್ಯ ಗಿಣಿಯೆ || ೧೧೧

ಮಿರುಪ ಚಂಪಕದ ನಾಸಿಕದ ಶೃಂಗಾರದ
ಸುರುಚಿರ ವಿಡಿದ ಕರ್ಣಗಳ |
ಪಿರಿದು ಭೂಷಣ ಕಾಂತಿ ಗೂಡಿದ ಕದಪಿನ
ಗರುವನಾರೆನಗೆ ಪೇಳಾಳಿ || ೧೧೨

ಕೆಂದಾವರೆಯೆಸಳ್ಗಣ್ಣ ಪವಳ ಮಣಿ
ಯಂದದೆ ಮಿರುಪ ಚೆಂದುಟಿಯ |
ಕುಂದ ರದನ ಪಙ್ಕ್ತಿಯ ಚೆನ್ನಿಗನಾ
ರಿಂದೀವರಾಕ್ಷಿ ಪೇಳೆನಗೆ || ೧೧೩

ಹೊಗರು ಮೊಗಕೆ ಪೆಣ್ಗಳ ದಿಟ್ಟಿ ತಾಕದೊ
ಲ್ತೆಗೆದ ಕತ್ತುರಿ ರೇಖೆಯಂತೆ |
ಸೊಗಸುವ ಬವರಿಜು ಸವಿಗಾರನಿವನಾರು
ನಗೆ ಬೇಡುಸಿರೆನಗಬಲೆ || ೧೧೪

ಇಟ್ಟ ಕತ್ತುರಿಯ ತಿಲಕ ಮೊಳೆ ದೋರುತ
ಪುಟ್ಟುತಿಹೆಳ ಮೀಸೆಗಳ |
ಕಟ್ಟರಕದ ಚೆಲುವನ ಕಂಡು ಮೈ ಜುಮ್ಮೆ
ದಟ್ಟಿತು ಕೆಳದಿ ನಿನ್ನಾಣೆ || ೧೧೫

ಪಿರಿದು ನಿಟ್ಟಿಸಿದ ಮಾತ್ರದೊಳನಗತಿ ಮೋಹ
ವೆರಸಿ ಮೈ ಪುಳಕಿತವಾಯ್ತು |
ಕರೆದು ಮನ್ನಿಸಿ ಕೂಡಿದೊಡೀ ಕುಮರನ
ಸುರತದ ಸುಖವಿನ್ನೆಂತೊ || ೧೧೬

ನಾರಿ ನಾನರಿಯದ ಚೆಲುವರು ಭುವನವಿ
ಸ್ತಾರದೊಳಿಲ್ಲ ನಿನ್ನಾಣೆ ।
ಮಾರ ಮಾನಿಸ ರೂಪ ತಾಳ್ದನ್ನ ಮನವನು
ಸೂರೆಯ ಕೊಂಡನಬ್ಜಾಕ್ಷಿ ॥ ೧೧೭

ಅನವರತದೊಳೀತನ ತೆಕ್ಕೆಯೊಳಿಪ್ಪ
ವನಿತೆಯು ಸುಕೃತದೇಳಿಗೆಯು ।
ಮನವರಿಸುವೊಡಳವಲ್ಲವೆನ್ನಯ ಪುಣ್ಯ
ದನುವಿನ ಬೆಳಸೆಂತಿಹುದೊ ॥ ೧೧೮

ನೀರನ ಮೊಗದೊಳು ಮೊಗವಿಟ್ಟು ನುಂಡಾಡಿ
ಮೀರಿದ ಚೆಂದುಟಿ ರಸವ ।
ಹೀರಿ ಹಿಪ್ಪೆಯ ಮಾಡಿದಲ್ಲದೆನ್ನಯ ಜಿಹ್ವೆ
ಮೇರೆಗೆ ನಿಲದೆಲೆ ಕೆಳದಿ ॥ ೧೧೯

ಮುದದಿಂದ ಗಿಳಿ ತೊಂಡೆ ಹಣ್ಣಿನ ರಸವನು
ಕದುರ್ಕಿರಿದೊಡನೆ ಪೀರ್ವಂತೆ ।
ಚದುರನಧರಸುಧೆಯಿಂಟಿ ಚಪ್ಪರಿಪಾ
ವಿಧವೆನಗೆಂದಿಗಾಗುವುದೊ ॥ ೧೨೦

ಅವನ ಲಲ್ಲೆಯ ಮುದ್ದು ನುಡಿಯನಿನ್ನೆಂದಿಗೆ
ಕಿವಿ ಲಾಲಿಸಿ ಕೇಳಿ ನಲಿದು ।
ತವೆ ಹರುಷದ ಸಫಲತೆಯನು ಪಡೆವುದೊ
ಕುವಲಯ ನೇತ್ರೆ ಪೇಳನಗೆ ॥ ೧೨೧

ಆತನ ತನು ವಲ್ಲಿಯೊಳಿಹ ಪರಿಮಳ
ವ್ರಾತವೆನ್ನಯ ನಾಸಿಕದ ।
ನೂತನದೆಲೆಗೊಡಗೂಡುವ ತೆರನನು
ಪ್ರೀತಿಯೊಳೆನಗುಸಿರಬಲೆ ॥ ೧೨೨

* ಸಖನ ಮೆಂಚದಲಿ ಕುಳ್ಳಿರಿಸಿ ತಕ್ಕೈಸಿಕೊಂಡು
ಮುಖ ಕೊರಳುರ ತೋಳ್ತೊಡೆಯು ।
ನಖದಗ್ರದಿಂದಿರಿದಿರಿದು ನಿಟ್ಟಿಸಿ ಸೋಳ್ಪ
ಸುಖವೆನಗೆಂದಿಗಾಗುವುದೊ ॥ ೧೨೩

ನೆಲೆ ಮೊಲೆದುದಿಯೊಳಗಿರಿದು ಮೆಲ್ಲದೆಮನು
ತೊಳಪ ಕಂಕಣದ ಕೈಯಿಂದ ।
ಘಲಿರೆನಿಸುತ ಬೆನ್ನ ನಸು ತಾಡನ ಗೈವ
ಸಲೆ ಸೈಪೆಂತೊದಗುವುದೊ ॥ ೧೨೪

ಮಡಿಚಿದೆಲೆಯು ಗಳಗೆಯು ಕೆಂಬಲು ದಿ
ಗಡಸಿ ಬಾಯೊಳು ಬಾಯಿಗೂಡಿ ।
ತುಡುಕುತ್ತ ಸವಿ ಮುತ್ತನಿಪಗೀವ ಪುಣ್ಯವ
ಪಡೆವುದೆಂದಿಗೆ ನಾನಬಲೆ ॥ ೧೨೫

ಮರೆಯು ಮಾತೇಕೀ ಕುವರನ ಸವಿ ಕೂಟ
ಕೆರಗಿದ ಮನದ ದೀಪನವ ।
ನೆರೆ ಯಿಾತನ ಸುರತದೆ ತೃಪ್ತಿವಡಿಸೆಂ
ದೆರಗಿದಳವಳಡಿಗಳಿಗೆ ॥ ೧೨೬

ಎತ್ತಿ ನೆಗಪಿ ಯಾ ಮದನಮೋಹಿನಿಯನು
ಮತ್ತಾಗ ತೊಡೆಯೊಳಂಬಿಟ್ಟು ।
ಉತ್ತಮ ನಾಯಕಿ ನೀನಿಂತು ಮದನಗೆ
ಚಿತ್ತವ ಮಾರುಗೊಡುವುದೆ ॥ ೧೨೭

ಪರ ಪುರುಷರ ನಾನಿದುವರೆಗಾದರು
ನೆರೆಯುಲಿಲ್ಲದ ಕಾರಣದೆ ।
ದುರುಳ ಮಾರನುವೆನ್ನ ಯೆದೆಗೆ ಸರಳನೂಡಿ
ಪರಿಪಾಟ್ಲ ಮಾಡಿದನಬಲೆ ॥ ೧೨೮

* ಶಕುನಿ.

ನಾರಿ ಕೇಳೀ ಸುಕುಮಾರನ ವೃತ್ತಾಂತ
ಚಾರು ಚೆಲ್ವಿಕೆಯು ಸಂಭ್ರಮವ ।
ಓರಂತೆ ಮನವೊಲಿದುಸಿರುವೆನತಿವಿ
ಸ್ತಾರದೊಳಗೆ ಲಾಲಿಪುದು ॥ ೧೩೯

ಸ್ಮರನತಿ ಚೆಲುವನೆಂದೆಂಬ ಸಾದೃಶ್ಯವ
ಧರೆಗೆ ವಿಸ್ತರಿಸಿ ತೋರ್ಪಂತೆ ।
ನೆರೆ ಧಾತ ನಿರ್ಮಿಸಿದವನಿವ ನಾಡಾಡಿ
ನರನಲ್ಲ ನಾರಿ ಚಿತ್ತೈಸು ॥ ೧೪೦

ಅನಿಮಿಷ ಪತಿ ಸುತ ನರ ಲೋಕದ ಭೋಗ
ದನುವನೀಕ್ಷಿಸಬೇಕೆನುತ ।
ಜನಿಸಿದ ನರ ರೂಪಿನೊಳಗೆಂಬೊಲು ತನ್ನ
ಮನಕೆ ತೋರಿದೆ ಮೋಹನಾಂಗಿ ॥ ೧೪೧

ಉತ್ತರದರಸಿನ ಮಗ ಭೂ ಲೋಕದ
ಮತ್ತ ಗಾಮಿನಿಯರ ಸೊಬಗ ।
ಒತ್ತಿ ನೋಡುವೊಡೈತಂದನೆಂಬೊಲು ತನ್ನ
ಚಿತ್ತಕೆಳಸಿದೆ ಲಲಿತಾಂಗಿ ॥ ೧೪೨

ಪರಿಪೂರ್ಣ ಶಶಿ ಕಳಂಕುಗಳ ಕಳೆದು ತನ್ನ
ವರ ಚೆಲ್ವಿಕೆಯ ತೋರಲೆಂದು ।
ಪುರುಷಾವತಾರದೆ ಧರೆಗಿಳಿದೆಸೆದಿಹ
ಪರಿಯೆಂಬೊಲಿದೆ ರೂಪಿವಗೆ ॥ ೧೪೩

ಅಲ್ಲದೊಡೀ ರೂಪೀ ಜಾಣ್ಮೆ ಯೀ ನಡೆ
ಯುಲ್ಲಾಸವೀ ಕುವರನಲಿ ।
ಪಲ್ಲೈಸಲರಿಯದು ನೀ ಮೋಹಿಸಿದೆ ನಿ
ನ್ನಲ್ಲಿ ತಪ್ಪಿಲ್ಲ ಕೇಳಬಲೆ ॥ ೧೪೪

ನೋಡದ ಪೆಣ್ಗಳನರಿಯೆ ಹೆಣ್ಗಳ ಕಣ್ಣಿ
ನೀಡಿಗೆ ಗುರಿಯಾದೊಡಿವನ ।
ಕೂಡಾಗ ಮನದನುಭವ ರತಿಯೊಳಗೋ
ಲಾಡದ ನಾರಿಯರುಂಟೆ ॥ ೧೩೫

ಅನಿಮಿಷಾಂಗನೆಯರೀ ಕುವರನ ರೂಪಿಗೆ
ಮನಸೋತೆವೆಯಿಡೆ ಮರೆದು ।
ಘನ ಮಾರ್ಗದಲಿ ರಾಜಿಪರೀ ಮಾನುಷ
ವನಿತೆಯು ಮೋಹವಚ್ಚರಿಯೆ ॥ ೧೩೬

ಉರಗ ನಾರಿಯರೀತನ ಗಾಡಿಗೆ ಸೆರೆ
ಮರುಳಾಗಿ ಯುನ್ನವ ತೊರೆದು ।
ಮರುತಾಹಾರದೆ ಪಾತಾಳ ಲೋಕದೊ
ಳುರುತರ ತಪ ಗೆಯ್ಯುತಿಹರು ॥ ೧೩೭

ಎಂದವಳಾಡಿದ ಮಾತಿಗೆ ಪ್ಯೈ ನವಿ
ರ್ಮೊಂದುವರಿದು ಗುಡಿಗಟ್ಟೆ ।
ಕುಂದದ ಗದ್ಗದದುಬ್ಬುಹಿಂದ ಸಖಿಯೊಡ
ನೆಂದಳು ಮಾರುತ್ತರವ ॥ ೧೩೮

ಏನುಜ್ಜುಗದಿಂದಲೀತನ ಸೆರೆ ಸಂ
ಧಾನವ ಮಾಡಿ ನನ್ನಡೆಗೆ ।
ನೀನೈದಿಸುವೆಯಾ ಬಗೆಯು ಪೇಳನಲಾ
ಮಾನಿನಿ ನುಡಿದಳಿಂತೆಂದು ॥ ೧೩೯

ಆತನ ಮನಸಿನ ಬಗೆಯರಿಯದೆ ನಾರಿ
ಸೋತಳು ನೀ ತಳರೆಂದು ।
ಕಾತರಿಸಿಯೆ ಕರೆದೊಡೆ ಪರಿ ಹಾಸ್ಯದ
ಮಾತಲ್ಲದೆ ಸೊಗಸಲ್ಲ ॥ ೧೪೦

ಅರಸಿಕೊಂಡವನಿದ್ದೆಡೆಗೆ ಪೋಗಿ ನಾರಿ ನಾ
ನೆರೆ ಮೋಹಿಸಿದೆ ನಿನಗೆಂದು ।
ಕರೆದೊಡೆ ಕಾತುರ ಪುಟ್ಟಲರಿಯುದಿದು
ಗರುವಿಕೆ ಯುಲ್ಲ ಕೇಳಬಲೆ ॥ ೧೪೧

ಅಂದಮರಾವತಿಯೊಳಗರ್ಜುನನಿದ್ದ
ಮಂದಿರಕೂರ್ವಶಿಯೈದಿ ।
ಕಂದರ್ಪನ ಬಾಧೆಗೊಳಗಾದೆ ಕೂಡೆಂದು
ಮುಂದುಗೆಟ್ಟುದ ಕೇಳ್ದರಿಯ ॥ ೧೪೨

ಭಾರತದೊಳಗಂಬೆಯೆಂಬಳು ಗಂಗಾಕು
ಮಾರನಿದ್ದೆಡೆಗೈತಂದು ।
ಮಾರ ಕೇಳಿಗೆ ಕರೆಯಲು ವೊಲ್ಲದಿರಲು ವಿ
ಕಾರಿಯಾದುದ ಕೇಳ್ದರಿಯ ॥ ೧೪೩

ವ್ಯಾಸನಂದನನಿರ್ದ ಬಳಿಗೆ ರಂಭಾ ನಾರಿ
ಮೋಸಪಡೆದು ನಡೆತಂದು ।
ಪೂಸರನಾಗಮುಕವನ ಕರೆದು ಪರಿ
ಹಾಸಕಕೊಳಗಾದಳವಳು ॥ ೧೪೪

ಇಂತಳಿ ಜಸಕೊಳಗಾಗಬೇಡಬಲೆ ನಿ
ನ್ನಂತರಂಗವ ಬಳ್ವಿಡಿದು ।
ಚಿಂತೆಯನುಳಿದಿರು ನಾಲ್ಕೆಂಟು ದಿನದೊಳು
ಕಂತು ಸನ್ನಿಭನ ನಾ ತಹೆನು ॥ ೧೪೫

ಎಳೆಹುಲ್ಲ ಸವಿದು ನೀರ್ಗುಡಿವ ತಾಪಸನನಂ
ದಲರಂಬಿಗೆ ಗುರಿ ಮಾಡಿ ।
ಎಳೆತಂದರಬಲೆಯುರವರ ಮಾಯದ ಬಲೆ
ಗೊಳಗಾಗದ ಧೀರರುಂಟೆ ॥ ೧೪೬

ವನದೊಳು ತಪಸಿರ್ದ ವಿಶ್ವಾಮಿತ್ರನ
ಘನ ಮೋಹ ಪಾಶದೆ ಬಿಗಿದು ।
ಮನಸಿಜನಲೆಗೈದಿಸಿದಳೂರ್ವಶಿ ನಮ
ಗನುಗೆಡದಿಹರಾರು ಜಗದೆ ॥ ೧೪೭

ಪರಸು ಋಷೀಶ್ವರ ಪಾರಾಶರ ವ್ರತಿ
ಸ್ಮರನ ಬಾಣಕೆ ಗುರಿಯಾಗಿ ।
ಹರುಗೋಲೊಳಗಂಬಿಗಿತ್ತಿಯು ನೆರೆದನೀ
ನರ ಮನುಷ್ಯರ ಪಾಡೇನು ॥ ೧೪೮

ಅದರಿಂದ ನಮ್ಮಯ ಬಲು ಮೋಹಕೊಳಗಾಗಿ
ಹದಗೆಡದಿಹ ನೀರರಿಲ್ಲ ।
ಮದನಮೋಹಿನಿ ಕೇಳು ನಿನ್ನರಿಕೆಯನಾ
ಮುದದೆ ಸಲಿಸುವೆನಂಜದಿರು ॥ ೧೪೯

ಎಂದಾತ್ಮ ಸಖಿ ಯಾಡಿದ ಸವಿ ನುಡಿಗಾ
ನಂದ ಪಡೆದು ಮನದೊಳಗೆ ।
ಕುಂದದೆ ಮದನಮೋಹಿನಿ ನಸು ನಗುತಿಂ
ತೆಂದು ನುಡಿದಳುತ್ತರವ ॥ ೧೫೦

ಎಲೆ ನಾರಿ ನೀನಾತನ ತರುವನ್ನಕ
ಸಲೆ ಸೈರಿಸದೆನ್ನ ಮನಸು ।
ಅಲರಂಬನ ತಾಪವ ಪರಿಹರಿಪೊಂ
ದಳವ ಮಾಡೆಂದುಸಿರಿದಳು ॥ ೧೫೧

ನಾರಿ ಕೇಳಿನಿತು ಕಾಮನ ಖಂಡೆಯುದ ಬಲು
ಧಾರೆಗಿತ್ತೊಡಲ ನೀನೀಗ ।
ಧೀರತ್ವವಳಿದು ಮೇರೆಯ ಮೀರಿ ಬಲು ಮೋಹ
ವಾರಿಧಿಯೊಳು ಮುಳುಗುವುದೆ ॥ ೧೫೨

ಕೃತಕವಲ್ಲಾತನ ನೋಡಿದ ಮಾತ್ರದೊ
ಳತನುವಿಗೊಡಲನೊಪ್ಪಿಸಿದೆ ।
ರತಿ ಸುಖವಿತ್ತಗಲೊಡ್ಡೆ ನಿನ್ನ ಭಾವದ
ಗತಿಯು ಘಾಡಿಕೆ ಯೆಂತಹುದೊ ॥ ೧೫೩

ನೀನರಿಯದ ರತಿ ಶಾಸ್ತ್ರ ಮೋಹನ ಮಂತ್ರ
ವಾನಂದ ಭೂಮಿಯೊಳಿರುವ ।
ಮಾನಿನಿಯರಿಗುಂಟೆ ಮತಿವಂತೆ ಮದನನ
ಬಾಣ ತಲ್ಪದೊಳೊರಗುವರೆ ॥ ೧೫೪

ಮನವೆಳಸಿದ ಮೋಹವ ತೋರದೆ ಕ
ಣ್ಗೊನೆಯೊಳಿಟ್ಟುಸುತಿಚ್ಛೆಯರಿತು ।
ಇನಿಮಾತಿನಿಂದ ಸೋಲಿಸಿ ಕೂಡಿ ಯುವನಿಂದ
ಘನ ಸುಖವಡೆಯಬೇಕಬಲೆ ॥ ೧೫೫

ಮೇಲಿಕ್ಕಿದ ಹೆಣ್ಣು ಹಾಗವಡೆಯಳಂ
ಬಾಳಾಪದ ಗಾದೆಯರಿತು ।
ತೂಳಿಸಿ ಮೋಹವ ಕಾಣಿಸುವುದು ಪ್ರೌಢ
ಲೋಲಾಕ್ಷಿಯರ ಮತವಲ್ಲ ॥ ೧೫೬

ಅದರಿಂದ ನಾರಿ ಕೇಳ್ನಿನ್ನಯ ಧೈರ್ಯವ
ಕದಲಿಸದಿರು ಕಾಮ ಶರಕೆ ।
ಎದೆಗೊಡದಿರು ದೇವರ ಕೃಪೆ ಯಿದ್ದೊಡೆ
ಚದುರನೀರಿರುಳಿಗೈತಹನು ॥ ೧೫೭

ಉಲಿದೂರರಿದುಬ್ಬಸವಟ್ಟು ರಚ್ಛೆಗೆ
ಸಲೆ ಸಂದಿಹ ಬೆಲೆ ವೆಣ್ಣು ।
ಬಲು ರಸಿಕರು ಭಾವಿಸರಾಕೆಗಳ ಜಸ
ನೆಲೆಗೊಂಬುದಲೆ ಚಿತ್ತೈಸು ॥ ೧೫೮

ನಾನಾ ವಿಧದಿನಾ ರಾಜಗೆ ಪ್ರೇಮವ
ದಾನಂದದೆ ಬರುವಂತೆ ।
ಸಾನುರಾಗದೆ ಕರೆತರುವೆನು ನಿನ್ನಾಣೆ
ಯೇನು ಸಂದೆಯ ಬೇಡ ಮನಕೆ ॥ ೧೫೯

ಎಂದೆಂಬಾಳಿಯನಿದಿರೆದ್ದು ಬಿಗಿಯಪ್ಪಿ
ಮುಂದುವರಿವ ತವಕದಲಿ ।
ಕುಂದದೆ ದೈನ್ಯ ವಚನದಿಂದ ಸಖಿಗಿಂ
ತೆಂದಳೇನೆಂಬೆನಚ್ಚರಿಯ ॥ ೧೬೦

ಹಸಗೆಟ್ಟೆನು ಧೃತಿ ಕುಂದಿತು ಕಾವನ
ಮಸೆಗೋಲು ನಾಂಟಿದುವೆದೆಯ ।
ಬಿಸಜ ಲೋಚನೆ ನೀನೊಲಿದಂತೆ ಮಾಡೆಂ
ದೊಸೆದೆರಗಿದಳವಳಡಿಗೆ ॥ ೧೬೧

ತಲೆ ಪಿಡಿದೆತ್ತಿ ತಕ್ಕೈಸಿ ತನ್ನಯ ತೊಡೆ
ಯೊಳಗೆ ಕುಳ್ಳಿರಿಸಿಕೊಂಡಾಗ ।
ಲಲನೆ ಪೇಳ್ದಿರುಳಿಗವನ ತಾರದಿರೆ ಯಿವು
ವೊಲೆ ಯಲ್ಲ ಮದಿ ಸೋರೆಗಾಯಿ ॥ ೧೬೨

ಬಿಡು ಮನದಾಂದೋಳವ ಪಂಪಾಂಬೆಯ
ಕಡು ಕೃಪೆಯಾಯಿತು ನಿನಗ ।
ನಡೆ ಮಜ್ಜನ ಭೋಜನಕೆ ಶೃಂಗಾರದ
ತೊಡವುಗಳಿಡು ನೀ ಬೇಗ ॥ ೧೬೩

ಎಂದಾಕೆಯ ಸಂತೈಸಿ ಯುವಳುಗೂಡಿ
ಮಿಂದುಟ್ಟು ಮಡಿ ವರ್ಗವನು ।
ಚಂದದೆ ಬಳಕಿರುತಿರೆ ದಿನ ನಾಯಕ
ನಂದು ಸಾರಿದನಸ್ತ ಗಿರಿಯ ॥ ೧೬೪

ಮುಂದೇಹ ದನುಜರೊಡನೆ ಕಾದಲು ರಕ್ತ
ಬಿಂದು ವ್ಯೈ ಸೋಂಕಿ ಕೆಂಪಾಗೆ ।
ಮುಂದದ ತೊಳವೊಲು ಪಶ್ಚಿಮಾಂಬುಧಿಗಿನ
ನಂದಿಳಿದನು ತೀವ್ರದಿಂದ ॥ ೧೬೫

ಪಶ್ಚಿಮಾಂಗನೆ ರತ್ನದಾಭರಣವ ತೊ
ಟ್ಟ್ಯಚ್ಚರಿಯೊಳಗೆಸೆವಂತೆ ।
ಹೆಚ್ಚಿತು ಪಡುಗೆಂಪು ಸಂಜೆದಾರಕೆ ಮೂಡಿ
ಯುಚ್ಚಹವನು ಬೀರಿದುವು ॥ ೧೬೬

ಮೊಳಗಿದುವಲ್ಲಲ್ಲಿ ದೇಗುಲ ವರೆಗಳು
ನಿಳ ನಿಳಯದೊಳಾ ಕ್ಷಣದೆ ।
ಬೆಳಗಿದುವಖಿಳ ದೀಪಾಳಿ ಕಗ್ಗತ್ತಲೆ
ನಳಿನ ಭವಾಂಡಕಡರಿತು ॥ ೧೬೭

ಕುವಲಯ ಹಿತ ಕಾರಿ ಜಾರ ಚಕೋರರ ವೈರಿ
ತವೆ ಸುಧಾಕರನಂಬುಜಾರಿ ।
ಭುವನ ಪ್ರಕಾಶ ಕೌಮುದಿ ನಿಧಿಗಳ ಕೋಶ
ಶಿವ ಶಿರೋಭೂಷಣನೆಸೆದ ॥ ೧೬೮

ತೊಳಗುವ ಪ್ರಾಚೀ ನಿತಂಬಿನಿ ಪಣೆಯೊಳ
ಗೊಲಿದಿಟ್ಟ ಚಂದ್ರದ ಬಟ್ಟು ।
ಸಲೆ ಪದ್ಮಿನಿಯ ಕಣ್ಗಟ್ಟಿನ ಶಶಿ ಮೂಡಿ
ಒಳದನಾಗಸದೊಳೇ ವೇಳ್ವ ॥ ೧೬೯

ಒಸರಿತು ಶಶಿಕಾಂತ ಚಕ್ರವಾಕಗಳಿಗು
ಬ್ಬಸವಾದುದು ಚಕೋರಿಗಳು ।
ಬಿಸುಟುವಂತ್ರ ಶ್ರಮವನು ಸುಧಾ ಸೂತಿಯು
ಜಸದೇಳಗೆಯೊಳೇ ವೇಳ್ವ ॥ ೧೭೦

ಇಂತೊಪ್ಪುತಿರೆ ಶಶಿ ಮದನಮೋಹಿನಿಗಾಗ
ಚಿಂತೆ ಮೊಳೆತು ಬಲು ತವಕ ।
ಮುಂತೆಲೆ ದೋರೆ ಕಾತುರ ಪರ್ಬೆ ವಿರಹಾಗ್ನಿ
ಸಂತತ ಫಲ ದೋರಿದುದು ॥ ೧೩೧

ನಿಡು ಸುಯ್ಲು ಧಾಳಿಯು ಜಳಕೆ ಚೆಂದುಟಿ ರಸ
ವೊಡನೆ ಬರೆತುದು ಕರ್ಪೂರದ ।
ಬಿಡು ವೀಳೆಯು ದಂಬುಲ ವಿರಹಾಗ್ನಿಗೆ
ಪುಡಿ ಪಟ್ಟುದೇನ ಬಣ್ಣಿಸುವೆ ॥ ೧೩೨

ಲಲನೆಯರುಪಚಾರದ ನುಡಿ ಕಿವಿಯೊಳು
ಬಲಿದ ಬಲ್ಲೊಹ ವಾಯಿತಾಗ ।
ತಲೆಗೆಂಬದೊಳು ಕೈಯಿತ್ತವಳಾತ್ಮನವ
ತಳೆದಿರ್ದಳೇನ ಬಣ್ಣಿಸುವೆ ॥ ೧೩೩

ಧರೆಯೊಳು ನಟ್ಟ ದಿಟ್ಟಿಯುಲರಿತಧರದೆ
ಪೊರಳುವ ತುದಿ ನಾಲಗೆಯು ।
ಬೆರಳಲುಕದೊಳಾಂದೋಳಿಪ ಮಸ್ತಕ
ದರಳು ಗಣ್ಣ ಒಲೆ ಯೊಪ್ಪಿದಳು ॥ ೧೩೪

ಇಂತೊಪ್ಪುತಿಹ ಮಾನಿನಿಗೆ ನಿದ್ರಾ ದೂತಿ
ಕಂತು ಸನ್ನಿಭನ ತಂದಾಗ ।
ಸಂತಸದೊಳು ಕಾಣಿಸುತ [ಮಾನಸದೊಳ]
ತ್ಯಂತ ಸೌಖ್ಯವ ಬೀರಿದಳು ॥ ೧೩೫

ಕಂಡು ಕನಸಿನೊಳು ರೂಪ ಜಯಂತನ
ಪುಂಡರೀಕಾಕ್ಷಿ ಪುಳಕದೆ ।
ಚಂಡಿಸಿ ಮೇಲ್ವಾಯ್ದುವನೆಂದೇ ತಬ್ಬಿ
ಕೊಂಡಳು ಬಯಲನೇನೆಂಬೆ ॥ ೧೩೬

ಪೊಸ ಪರಿಮಳ ವಿಡಿದಿಹ ಕರ್ಪೂರದ ಸವಿ
ರಸದಂಬುಲದ ಕುಟುಕಿತ್ತು ।
ನೊಸಲೆಡೆಯನು ಚುಂಬಿಸಿ ತಕ್ಕಿಸುತ ಪರ
ವಶೆಯಾದಳೇನ ಬಣ್ಣಿಸುವೆ ॥ ೧೭೭

ಬಟ್ಟ ವೊಲೆಗಳ ತುದಿಯೊಳಿರಿದುರೆ ನಸು
ದಿಟ್ಟಯಿಂದೀಕ್ಷಿಸುತಾಗ ।
ಕಟ್ಟರಕದೊಳಾತನ ಚರಣಕೆ ಪೊಡ
ಮಟ್ಟು ಕೂಡೆಂಬಳಂದೊಲಿದು ॥ ೧೭೮

ಮುನಿಸೆನ್ನೊಳೇಕೆಲೆ ರೂಪ ಜಯಂತ ನಿ
ನ್ನಿನಿಯಳೊಡನೆ ನೀನಿಂದು ।
ಮನಸಿಜ ಕೇಳಿಯನೆಸಗದಿದ್ದರೆ ಜೀವ
ತನುವಿನೊಳಿರದು ನಿನ್ನಾಣೆ ॥ ೧೭೯

ಪ್ರಾಣ ನಾಯಕ ನಿನ್ನ ಸವಿ ನುಡಿ ಯಲ್ಲದೆ
ವೀಣಾದಿ ಗಾನ ರವಗಳು ।
ಸಾಣೆ ವಿಡಿದ ಶಲ್ಲಯದಂತೆ ಕಿವಿಯೊಳು
ಹೂಣೆ ಹೊಕ್ಕುವು ನಿನ್ನಾಣೆ ॥ ೧೮೦

ಚೆನ್ನಿಗ ನಿನ್ನಂಗವ ನೋಳ್ಪವೆಂದಕ್ಷಿ
ಯಿನ್ನೊಂದ ನಿಟ್ಟಿಸವೆಂದು ।
ಪುನ್ನವೆ ಮುಗಿದಿವೆ ಚೆಲುವಿಕೆಯನು ತೋರು
ತೆನ್ನ ನೇತ್ರಕೆ ಸುಖವೀಯೊ ॥ ೧೮೧

ನಾಸಿಕೇಂದ್ರಿಯ ನಿನ್ನ ತನು ಗಂಧಕೆಳಸಿ ಮೋ
ಲ್ಲಾಸಿದ ಪುಣುಗು ಕಸ್ತುರಿಯ ।
ವಾಸನೆ ವಿಡಿಯದು ನೀನಗಲದೆ ಸಂ
ತೋಷವ ನೆರೆ ಹುಟ್ಟಿಸಿದಕೆ ॥ ೧೮೨

ರಸನೇಂದ್ರಿಯು ನಿನ್ನಧರ ಸುಧೆಯು ಸವಿ
ಯೆಸಕಕೆಳಸಿ ಯುರೆ ತಾನು ।
ಹಸ ಗೆಡುತಿದೆ ನೀನಿದರಭೀಷ್ಟವನಿ
ತ್ತೊಸಗೆಯು ಮಾಡೆನ್ನ ಮನಕೆ ॥ ೧೯೩

ಬಳಿಕೆನ್ನ ನಳಿ ತೋಳು ನಿನ್ನ ದಿವ್ಯಾಂಗವ
ಸೆಳೆದಪ್ಪಿಕೊಳಬೇಕೆನುತ ।
ಬಲು ತವಕದೊಳಿವೆ ಸವಿಗೂಟಕೆಳಸು ನೀ
ನಲರಂಬನ ಸಮ ರೂಪ ॥ ೧೯೪

ನೆಲೆ ಮೊಲೆಗಳ ಮೇಲೆ ಕೈಯಿಟ್ಟು ತನುವನಂ
ಡಲೆವ ತಾಪಾಗ್ನಿಯು ಝಳಪ ।
ಪುಳಕಾಂಬುವಿನಿಂದ ತಂಪಿಸು ನಿನ್ನಯ
ನಳಿನಾಕ್ಷಿ ಯಲ್ಲವೆ ನಾನು ॥ ೧೯೫

ಮಲ್ಲಿಗೆಯುರಳುವಾಸಿನ ಮಂಚಕೆ ಕರ
ಪಲ್ಲವವನು ಪಿಡಿದೆಳದು ।
ನಿಲ್ಲದೆ ಕೆಡಹಿಕೊಂಡೊಡನೆ ಮೋಹಿಸುತೆನ್ನ
ಮಲ್ಲೆದೆಯೊಳು ನಾಟ್ಯವಾಡೊ ॥ ೧೯೬

ಮುಂಗುರುಳನು ಪಿಡಿದೊಯ್ದೆನ್ನ ನವ ರತ್ನ
ಪೊಂಗಿದ ಮಣಿ ಮಂಚದಲಿ ।
ಅಂಗಜ ಕೇಳಿಯನಿತ್ತೆನ್ನನುಳುಹೊ ನಿ
ನ್ನಂಗನೆ ಯಲ್ಲವೆ ನಾನು ॥ ೧೯೭

ಥಳಥಳಿಸುವ ಚಂದ್ರಗಾವಿಯು ಮೇಲ್ಕಟ್ಟ
ನೊಳುವಣ್ಣದ ತುಂಬುದೆರೆಯು ।
ಕಳಹಂಸೆದುಪ್ಪುಳು ವಾಸಿನ ಮಂಚದಿ
ಸೆಳೆದಪ್ಪೊ ಮೋಹನ ರೂಪ ॥ ೧೯೮

ಬೊಂಬೆಯು ಮೆಲ್ಲುಕ್ಕರಾಡದ ಸೆಳ ಮಂಚಕ್ಕೆ
ನಂಬಿಸುತೆನ್ನ ನೀನೊಯ್ದು ।
ಬಿಂಬಾಧರದ ಸವಿಯು ತೋರಿ ನೆರೆ ರಸ
ದಂಬುಲ ಗುಟುಕಿತ್ತು ಕೂಡೊ ॥ ೧೮೯

ಅಂತರಾಂತರದ ಸೋಪಾನವೆಸೆವ ಚಂದ್ರ
ಕಾಂತದ ನೆಲೆ ಮಾಡದೊಳಗೆ ।
ಸಂತೋಷದೊಳು ಮೋಹಿಸುತೆನ್ನನೊಡಗೂಡೊ
ಕಂತು ಸನ್ನಿಭ ಮೋಹನಾಂಗ ॥ ೧೯೦

ಸಾಲ ಮುತ್ತಿನ ಕುಚ್ಚಿನ ಪೊಸ ರತ್ನದ
ಮೇಲುಪ್ಪರಿಗೆಗೆನ್ನನೊಯ್ದು ।
ಕಾಲೋಚಿತದ ಕಲೆಗಳಿಂದ ಸೋಲಿಸಿ
ಲಾಲಿಸುತೆನ್ನನೀ ಕೂಡೊ ॥ ೧೯೧

ಈಡಾಡುಟ್ಟನಿರಿಯು ತುರುಬಿಗೆ ಕೈಯು
ನೀಡಿ ಮೊಗದೆ ಮೊಗವಿಟ್ಟು ।
ಕೂಡೆ ಕದಪು ತುಟಿ ನಿಟಿಲವ ಚುಂಬಿಸಿ
ಮೂಡು ಮೋಹದ ಸವಿಗಲೆಯು ॥ ೧೯೨

ಕೇತಕಿಯೆಸಳ ಜರೆವ ಚೆಳ್ಳುಗುರಿಂದ
ಶಾತಕುಂಭದ ಬೊಗರಿಗಳ ।
ರೀತಿಯು ಬಲ್ಮೊಲೆಗಳ ಮೇಲೆ ನಿನ್ನಯು
ನೂತನ ನಖ ರೇಖೆ ದೋರೊ ॥ ೧೯೩

ಕಾಲು ಗಳಿಗೆ ರತಿ ಸುಖವನಿತ್ತೊಡೆ ಕಂಠ
ಮಾಲೆ ಚೌಕುಳಿ ಹೊನ್ನ ಸರವ ।
ಲೀಲೆಯೊಳೊಲಿದೀವೆ ಕೂಡೆನುತಾಗ ಬೆಂ
ಬೇಳುತಿಪಳು ಕನಸಿನಲಿ ॥ ೧೯೪

ನಗುವಳು ಮೇಲಿಕ್ಕುವಳು ಮೈ ಮುರಿದೊಡೆ
ಮುಗಿದಕ್ಷಿಯಿಂದ ನೋಡುವಳು ।
ಮಿಗೆ ಕಾತುರದೆ ಹಂಬಲಿಪಳು ಕಂಬನಿ
ಯೊಗುವಳೇನೆಂಬೆನಚ್ಚರಿಯು ॥ ೧೯೫

ನಿಟ್ಟುಸುವಳು ಚುಂಬಿಸುವಳು ಮೈ ಜುಮ್ಮ
ದಟ್ಟ ರೋಮಾಂಚನವೆಸಗಿ ।
ಉಟ್ಟುದು ಸರಿದು ಮದನ ಜಲ ನೆರೆ ಪೂರ
ಮಟ್ಟುದು ನಾಣೆಡೆಯಿಂದ ॥ ೧೯೬

ಪುಳಕಾಂಬುವಿನಿಂದ ತನು ಲತೆ ತಣ್ಣಸ
ದಳೆಯೆ ನಿದ್ರಾಂಗನೆ ಸರಿಯೆ ।
ಬಳಿಕ ಕಣ್ಗಳ ತೆರೆದವನ ಕಾಣದೆ ನೆರೆ
ಯಳಪಳಿದಳು ಚಿಂತೆಯಿಂದ ॥ ೧೯೭

ಕನಸೆಂದರಿಯದೆ ಮೋಹದೇಳಿಗೆಯಿಂದ
ಮನ ಮರವೆಯೊಳೈತಂದು ।
ವನದೆಡೆಯುಪ್ಪರಿಗೆಯ ತುದಿ ಚೌಕಿಯ
ಮನೆ ಮನೆಯೊಳಗರಸಿದಳು ॥ ೧೯೮

ಮಂಚದಡಿಯ ಮಾಳಿಗೆಯ ಮುಗಿಲ ಮೇಲೆ
ಮಿಂಚುವ ಸೆಜ್ಜೆಯಗ್ರದಲಿ ।
ಪಂಚಬಾಣನ ಚೆಲ್ವ ಪಳಿವ ಜಯಂತನ
ನಂಚೆಗಮನೆ ಯರಸಿದಳು ॥ ೧೯೯

ಮಲ್ಲಿಗೆ ಪೊದರ ಬೆದಕಿ ನೋಡಿ ನವ ಚೂತ
ಪಲ್ಲವದೆಡೆಗೈತಂದು ।
ಸಲ್ಲಲಿತದ ರಾಜ ಕೀರನ ನುಡಿ ಗೇಳಿ
ವಲ್ಲಭ ಬಾರೆಂದಳವಳು ॥ ೨೦೦

ಪರಪುಟ್ಟಗಳಿರ ನನ್ನಿನಿಯನ ಕರೆತಂದು
ಭರದೊಳೆನಗೆ ತೋರಿಸಲು ।
ಪಿರಿದು ಮಾಂದಳಿರ ಗುಟುಕನಿತ್ತು ಮನಕತಿ
ಹರುಷವ ಮಾಡುವೆ ನಿಮಗೆ ॥ ೨೦೧

ಅಳಿ ಗಿಳಿಗಳಿರ ನನ್ನಯ ಪ್ರಾಣ ವಲ್ಲಭ
ನೆಲಸಿಹ ಬಳಿಯ ತೋರಿದರೆ ।
ನಳಿನ ಪರಾಗದ ಪಣ್ಗಳ ಗುಟುಕಿತ್ತು
ಬಲು ಸಂತಸವೀವೆ ನಿಮಗೆ ॥ ೨೦೨

ಮಲಯ ಮಾರುತನೆ ನನ್ನಯ ಪ್ರಿಯನಿರುತಿಹ
ಸ್ಥಳವ ನೀನೊಲಿದು ತೋರಿಸಲು ।
ನಲೆ ಮೊಲೆಗಳ ಮಧ್ಯದ ಚಂದನದಂಪ
ತಳುವದಿತ್ತೊಸಗೆಯ ಮಾಳ್ಪ ॥ ೨೦೩

ಅರಸಂಚೆಗಳಿರ ನೀವೈದಿ ನನ್ನಯ ಮೋಹ
ದರೆಯನ ಕರೆದು ಕಾಣಿಸಲು ।
ಸರಸಿಜದಲರಿನಿಂಮೆಂಡಿತ್ತು ನಿಮಗತಿ
ಹರುಷವ ಪುಟ್ಟಿಸಿ ಕೊಡುವೆ ॥ ೨೦೪

ಎಂದಿಂತು ವಿರಹದೆ ಪಲುಬುವೆಳಳುವಳು
ಮುಂದು ಗೆಡುವಳು ಚಿಂತಿಪಳು ।
ಇಂದು ಮಂಡಲವ ಕಾಣದ ಚಕೋರಿವೊಲತಿ
ದಂದುಗಕೊಳಗಾದಳಾಗ ॥ ೨೦೫

ಕನಸಿನ ಕಣ್ಬೇಟವೊ ಎನ್ನ ಮನದನ್ನ
ವಿನಯದಿಂದೈತಂದು ಕೂಡಿ ।
ಚಿನುಮಯ ರೂಪಾದನೊ ಕಾಣೆನೆಂದವ
ಳನುಗೆಟ್ಟಳೇನ ಬಣ್ಣಿಸುವೆ ॥ ೨೦೬

ಈ ಪರಿಯೊಳಗಾಗ ಮದನಮೋಹಿನಿ ಪುಷ್ಪ
ಚಾಪನ ಶರಕೊಳಗಾಗಿ ।
ರೂಪಿಸಿ ಪೊರಳುತಿರಲು ಮುಂಗೋಳಿಗ
ಳಾ ಪುರದೊಳಗೆ ಕೂಗಿದುವು ॥ ೨೦೭

ಹರಿದುವು ತಾರೆಗಳ್ಸರಿದುವು ಕೋಕಗ
ಳರಳಿದುವಂಬುಜಾಳಿಗಳು ।
ಅರಿಯುವಸ್ಸೈತಂದುದಯಾದ್ರಿಯು ಪಾ
ಸರೆಗಲ್ಲ ಮೇಲೆ ಮಂಡಿಸಿದ ॥ ೨೦೮

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯು ಸಂಧಿ
ಮುದದ ಸು ಧರ್ಮಾನು ಬಂಧಿ ॥ ೨೦೯

೯ನೆಯ ಸಂಧಿ ಸಮಾಪ್ತಂ

## ಹತ್ತನೆಯ ಸಂಧಿ

ಮದನ ಮೋಹಿನೀ ವಿಲಾಸ.

ಸೂಚನೆ ‖ ಮದನ ಮೋಹಿನಿ ಚೆಲ್ವರೂಪ ಜಯಂತನೊ
ಳ್ಮದನ ಕೇಳಿಯೊಳೊಪ್ಪಿದಳು ‖

ಆ ಸಮಯದೆ ಚಿತ್ರರೇಖೆ ಯೈತಂದು ವಿ
ಲಾಸವಳಿದು ಮನಗುಂದಿ ।
ಪೂಸರನಲೆಗೊಳಗಾದ ತನ್ನೊಡತಿಯ
ನಾಸರ ಕಂಡು ನುಡಿದಳು ‖ ೧

ಇನಿತು ಕಾಮೋದ್ರೇಕದ ಚಿಂತೆಗೊಳಗಾಗಿ
ಮನಗುಂದುವರೆ ಬಲ್ಲವರು ।
ವನಿತೆ ನಿನ್ನಯ ಪ್ರಾಣ ಕಾಂತನಿಂದಿರುಳಿಗೆ
ಘನ ಹರುಷದೊಳೈತಹನು ‖ ೨

ನನಗೊರ್ವದೇವತೆಯೊಲವುಂಟಾಕೆಯ
ಮನವೊಲಿದರ್ಚಿಸಿ ಬಳಿಕ ।
ವನಿತೆ ಕೇಳವಗೆ ಮೋಹವ ಪುಟ್ಟಿಸಿ ತಂದು
ವಿನಮಿತನನು ಮಾಳ್ಪೆ ನಿನಗೆ ‖ ೩

ತುಪ್ಪ ಸಕ್ಕರೆ ಪಾಲ ಸವಿವ ಮನುಜರ ತಂ
ದೊಪ್ಪಿಸುವುದು ದೊಡ್ಡಿತಲ್ಲ ।
ಲೆಪ್ಪದ ಪುತ್ತಳಿಗಳ ತಂದು ಕೂಡಿಸೆ
ದರ್ಪವುಂಟೆಂಸಿ ನಿನ್ನಾಣೆ ‖ ೪

ಎಂದೆಂದು ರತಿ ಸುಖವರಿಯದೆ ವನದೊಳು
ಕಂದ ಮೂಲಗಳನೆ ಸವಿದು ।
ನಿಂದು ಪಂಚಾಗ್ನಿ ಮಧ್ಯದೆ ತಪ ಗೆಯ್ವರ
ತಂದು ನಿನ್ನಡಿಗೆರಗಿಸುವೆ ॥ ೫

ಎಲೆ ನಾರಿ ಧೃತಿಗುಂದ ಬೇಡ ನಿನ್ನಿನಿಯನ
ನಳಿ ತೋಳ ತೆಕ್ಕೆಯೊಳಾನು ।
ನೆಲೆ ಗೊಳಿಸುವೆನಂಜ ಬೇಡೆಂದಾಕೆಗೆ
ಬಲು ಭಾಷೆಯನಿತ್ತಳವಳು ॥ ೬

ಎಂದಾಕೆಯು ಸಂತೈಸಿ ನಗುತಲಾಗ
ನಂದನ ವನಕೈತಂದು ।
ಇಂದು ಶೇಖರನರ್ಧಾಂಗಿಯು ಭಜಿಸಿಯಾ
ನಂದದೆ ವರವ ಪಡೆದಳು ॥ ೭

ಒಡನೆ ಪಂಪಾ ದೇವಿ ವರವಿತ್ತು ಬಗೆಯು ತ
ನ್ನೊಡತಿಗೆ ಹರುಷದೆ ಪೇಳೆ ।
ಮಡದಿಯೊಪ್ಪಿರೆ ದಿನ ನಾಯಕನಾ ಕ್ಷಣ
ಪಡುಗಡಲೆಡೆಯು ಸಾರಿದನು ॥ ೮

ಆ ಸಮಯದೆ ದೇವಿ ಯುವಗೆ ಮೋಹದ ರತಿ
ಯಾಸೆಯು ಪುಟ್ಟಿಸಲಾಗ ।
ಸೂಸುತ ರೂಪ ಜಯಂತ ಬಲ್ಲಗೆಯು ವಿ
ಲಾಸದೆ ಸಖರೊಳಿಂತೆಂದ ॥ ೯

ಈ ಪುರದೊಳಗಿಹ ಗಣಿಕೆಯರೊಳು ದಿವ್ಯ
ರೂಪಿನೊಳತಿಶಯವಾಗಿ ।
ತಾ ಪಿರಿದೆನಿಸಿ ವಿದ್ಯಾ ವಿಶಾರದೆ ಯುಹ
ಚಾಪಲ ನಯನ ಯಾರೆಂದ ॥ ೧೦

ಕೇಳಲೆ ರೂಪ ಜಯಂತ ನಿನ್ನಯ ಮೋಹ
ದೇಳಿಗೆಗುರೆ ಸವಿಗೊಡುವ ।
ಬಾಲಕಿ ಯೊರ್ವಳು ಮದನಮೋಹಿನಿ ಯೆಂಬ
ನೀಲ ಕುಂತಳೆ ಯೊಪ್ಪುತಿಹಳು ॥ ೧೧

ರತಿ ದೇವಿ ದೇಹವಳದವನರಸಿ ಭಾ
ರತಿಯುಗುಳ್ಳೀರುಬೊಮ್ಮನಿಗೆ ।
ನುತಿಸಲೂರ್ವಶಿ ರಂಭೆ ಗಿಂಭೆ ಯಿವಳ ರೂಪಿ
ನತಿಶಯಕೆಣೆ ಯಿಲ್ಲವರಸ ॥ ೧೨

ಧರೆಯ ನಾರಿಯರ ಚೆಲ್ವಿಕೆಯ ತೆಗೆದು ನೆರೆ
ಸರಸಿಜ ಭವ ನಿರ್ಮಿಸಿದ ।
ತರಳಾಕ್ಷಿ ಮೋಹಿನಿ ಯಿಾ ಬೆಲೆ ವೆಣ್ಣಿನ
ಚರಣದುಂಗುಟಕೆಣೆ ಯಹಳೆ ॥ ೧೩

ನಿಟ್ಟಿಸಿ ನೋಡಿದ ಪುರುಷಗೆ ಮೈ ಜುಮ್ಮು
ದಟ್ಟ ರೋಮಾಂಚನವೆಸಗಿ ।
ಕಟ್ಟೆರಕದೆ ಮೋಹ ರಸ ವುಬ್ಬಿ ನೆರೆ ಪೊರೆ
ಮೆಟ್ಟು ಸೂಸುವುದಂಗದಿಂದ ॥ ೧೪

ಕಂಡು ಬಲ್ಲೆವು ಕಾವನರಸಿಗೆ ಸರಿ ಬಪ್ಪ
ಪುಂಡರೀಕಾಕ್ಷಿಯರುಗಳ ।
ಮಂಡಲದೊಳಗೀ ನೀರೆಯಂದದ ಜಾಣ
ವೆಂಡಿರ ಕಾಣೆ ನಿನ್ನಾಣೆ ॥ ೧೫

ಮನವೆಳಸಿದೊಡೇಳು ನೋಳ್ಪವಾ ಹೆಣ್ಣಿನ
ತನು ಚೆಲುವಿಕೆಯ ಜಾಣ್ಣುಡಿಯ ।
ವಿನಯ ವಿದ್ಯಾ ವಿನೋದವನೆಂದು ನೂತನ
ಮನಸಿಜಗುಸಿರಿದರಾಗ ॥ ೧೬

ಎಂದು ನುಡಿದ ನಿಜ ಸಖರ ಮಾತಿಗೆ ಮನ
ಬಂದಾಗ ಮಜ್ಜನ ಗೈದು ।
ಕುಂದದೆ ರೂಪ ಜಯಂತ ಸಿಂಗರವಾ
ದಂದವನೇನ ಬಣ್ಣಿಸುವೆ ॥ ೧೭

ಮೇಗ ಮುಗಿಸುವ ಪೊಸ ಮಲ್ಲಿಗೆ ಯರಳಿನ
ಸೊಗಸು ವೆತ್ತಸೆವ ಪೂ ಸರವ ।
ಮಿಗೆ ಶಿಖೆಗಮರಿಸಿ ದೂವಟ ರುಮ್ಮಾಲ
ಬಿಗಿದಳವಡಿಸಿದನಾಗ ॥ ೧೮

ಪೂಸಿದ ಪುಣುಗು ಕಸ್ತೂರಿ ಕುಂಕುಮ ಗಂಧ
ವಾಸನೆ ದೆಸೆ ಕಂಪಿಡಲು ।
ಆ ಸುಕುಮಾರ ಸಿಂಗರ ಗೈದು ನಡೆದ ವಿ
ಲಾಸವನೇನ ಬಣ್ಣಿಸುವೆ ॥ ೧೯

ಇಟ್ಟ ಕಸ್ತೂರಿಯ ತಿಲಕ ಕರ್ಣದೊಳಳ
ವಟ್ಟ ಚೌಕುಳಿ ಕೊರಳೊಳಗೆ ।
ಕಟ್ಟಾಣಿ ಮುತ್ತಿನ ಕಂಠ ಮಾಲೆಯನಾಂತು
ದಿಟ್ಟಗಚ್ಚರಿ ಯೆನೆ ನಡೆದ ॥ ೨೦

ಬಡನುಟ್ಟ ಪಟ್ಟೆಯ ಚಲ್ಲಣ ಮೋಹನ
ವಡೆದ ಪದಕ ಪೈತಣಿಯ ।
ಕಡು ಸೊಬಗಿನ ಬಲ್ವೇಟದ ಸುಕುಮಾರ
ನಡೆದನು ಸಖರ ಮೇಳದಲಿ ॥ ೨೧

ಅಂಗಡಿ ಗೇರಿ ಯಾನೆಯ ಶಾಲೆ ತುರಗದ
ಜಂಗುಳಿಗಳ ಲಾಯ ಜನರ ।
ಸಿಂಗರ ಗೇರಿಯ ನೋಡುತ ನೆರೆ ಗಣಿ
ಕಾಂಗನಾ ವೀಥಿಗೈತಂದ ॥ ೨೨

ಹೂವಿನ ಹೊತ್ತಿನೊಳ್ತಲೆ ವಾಗಿಲೊಳಿಹ
ಭಾವಕಿಯುರ ನಿಟ್ಟಿಸುತ ।
ಕಾವ ಸನ್ನಿಭನಾ ಮದನವೋಹಿನಿ ಯಿಹ
ಠೀವಿಯು ಗೃಹಕ್ಕೈತಂದ ॥ ೨೩

ಕಂಡರು ಬಾಗಿಲ ಕೆಳದಿಯರ್ಕುಸುಮ ಕೋ
ದಂಡನಂತಿರುವ ಕುವರನ ।
ಪುಂಡರೀಕಾಕ್ಷಿಯು ಚರಣಾರವಿಂದಕ್ಕೆ
ವಂದಿಸಿ ನುಡಿದರಿಂತೆಂದು ॥ ೨೪

ಎಲೆ ಮೋಹನಾಂಗಿ ನೀನುಪ್ಪರಿಗೆಯನೇರಿ
ನಲವಿಂದ ನಿಟ್ಟಿಸಿ ಕಂಡ ।
ಚೆಲುವರೆರೆಯ ನಮ್ಮಯ ತಲೆವಾಗಿಲೊಳ್
ನೆಲಸಿಹನೆಂದುಸಿರಿದರು ॥ ೨೫

ಎನಲಾ ಮಾತಿಗೆ ವ್ಯೈ ನವಿಗರ್ಡಿಗಟ್ಟೆ
ವನಿತೆ ಬೇಗದೊಳ್ಳೈತಂದು ।
ಘನ ಮೋಹನ ನವ ರೂಪ ಜಯಂತನ
ಮನದುತ್ಸವದೆ ಕಂಡಳಾಗ ॥ ೨೬

ಕಾಣುತವನ ಕರ ವಿಡಿದಾಗ ಸೆಳದಪ್ಪಿ
ಯೇಣ ನಯನೆ ನಸು ನಗುತ ।
ಮಾಣದೆ ನಲಿದು ನಿಟ್ಟಿಸುತಂದು ಸಂತಸ
ಶ್ರೇಣಿಯೊಳೋಲಾಡಿದಳು ॥ ೨೭

ಸರಿಬಂದವನ ಕಂಡೊಡೆ ಕೌಮುದಿಗಾಗ
ಕರಗುವ ಶಶಿ ಕಾಂತದಂತೆ ।
ನೆರೆ ಯಂತರಂಗ ವಿಡಿದು ಕೂಡಿದಲ್ಲದೆ
ಪಿರಿದು ಸೈರಿಸರೇ ವೇಳ್ಯ ॥ ೨೮

ಬಿಡದಾತನ ಬಿಗಿದಪ್ಪಿದ ಮಾತ್ರಕೆ
ಸಡಿಲಿತು ನಿರಿಗೂಡಿ ಕಾಂಚಿ ।
ಕಡು ತವಕದೊಳಿರ್ವರೊಂದು ವಸನ ಗೂಡಿ
ನಡೆದರು ಶಯ್ಯಾ ಗೃಹಕೆ ॥ ೧೯

ಸೆಳೆ ಮಂಚದಂಚೆ ದುಪ್ಪುಳು ಹಾಸಿನ ಮೇಲೆ
ನಳಿನಾಕ್ಷಿ ಯುವನ ಕುಳ್ಳಿರಿಸಿ ।
ತೆಳು ಗದಪಮುಳಾಧರವ ಚುಂಬಿಸಿ ಸುಖ
ದಳದಳೇನೆಂಬೆನಚ್ಚರಿಯ ॥ ೨೦

ನೋಡುವಳುರೆ ಕಾತರಿಪಳು ಮೈ ಸೋಂಕಿ
ಮೂಡಿ ಮುಳುಕಿ ಮೋಹ ರಸದೆ ।
ಕೂಡಾಗ ಬಿಗಿಯಪ್ಪಿ ಮೊಗ ಮೊಗ ವೆರಸಿ ಮುಂ
ಡಾಡಿದಳೇನ ಬಣ್ಣಿಸುವೆ ॥ ೨೧

ಈಸು ದಿವಸ ಪರಿಯಂತ ಮೈ ಗರೆದೆಲ್ಲಿ
ವಾಸವಾಗಿರ್ದೆ ಚೆನ್ನಿಗನೆ ।
ಸೂಸಿ ನಿನ್ನಯ ರತಿ ಸುಖದ ವಿಲಾಸವ
ಪೂಸರನುರುಬ ನೀ ಬಿಡಿಸೊ ॥ ೨೨

ಕಾಲು ಗಳಿಗೆ ಯುಗವಾಗೆ ಕಳೆದು ನಿನ್ನ
ಮೇಲಣಾಸೆಯಲಿ ತಾನಿಹೆನು ।
ಹೇಳುವುದೇನೆನ್ನ ಪುಣ್ಯದ ಫಲ ನಿನ್ನ
ತೋಳ ತಕ್ಕೈಗೆ ಸೇರಿಸಿತು ॥ ೨೩

ಒಡನೆನ್ನ ನಿಟ್ಟಿಸಿದರು ಮೋಹ ವಲೆಯೊಳು
ತೊಡಕದಿರಿಲ್ಲ ನಿನ್ನಾಣೆ ।
ಕಡುಚೆಲ್ವ ನಿನ್ನ ವಾರತೆಗೇಳದಾಕ್ಷಣ
ಕುಡುವಿಲ್ಲನಲೆಗೊಳಗಾದೆ ॥ ೨೪

ಹೊಳವಕ್ಷಿಗಳಿಂದ ನಿಟ್ಟಿಸು ಮನಸಿಜ
ಗಲೆಯ ತೂಣಕೆ ಕೈ ನೀಡೊ ।
ಸೆಳೆದಪ್ಪಿ ಬಟ್ಟ ಬಲ್ಮೊಲೆಯ ಕರದೆ ಪಿಡಿ
ದಲುಗು ಕಾಮನ ಸಮ ರೂಪ ॥ ೩೫

ಎಂದೆಂಬ ಮದನಮೋಹಿನಿಯ ನುಡಿಗೆ ನಲಿ
ದಂದಾಗ ಬಿಗಿ ಬಿಗಿಯಪ್ಪಿ ।
ಇಂದೀವರಾಕ್ಷಿಯ ಕುರುಳ ನೇವರಿಸುತಾ
ನಂದದೆ ತೊಡೆಯೊಳಿಂಬಿಟ್ಟ ॥ ೩೬

ನಡುಗುವ ತನು ವಲ್ಲಿಯ ತುದಿಯಿಂ ಪೊಡೆ
ಗೊಡನುದಿರ್ವಲರಂದದಲಿ ।
ಮಡದಿ ರನ್ನೆಯ ಕಣ್ಗೊನೆಯಿಂದ ಹರ್ಷಾಶ್ರು
ಬಿಡದೊಕ್ಕುವೇನ ಬಣ್ಣಿಸುವೆ ॥ ೩೭

ಪೊಸ ನೀರ ಪೂರದೊಳಗೆ ಮರಿ ಮೀನ್ಗಳು
ಮಸಗಿ ಮುಂ ಪೊಳೆದಾಡುವಂತೆ ।
ಮಿಸುಗುವ ವರ ಲಾವಣ್ಯಾಂಬುವಲಿ ಕ
ಣ್ಣೆಸೆದುವು ಪೊಳಪೇರೆ ನಗುತ ॥ ೩೮

ಪನ್ನೀರು ಕರ್ಪೂರ ವೀಳಯ ಮೋಹನ
ದನುಲೇಪನಾದಿ ವಸ್ತುಗಳ ।
ವನಿತೆಯ ಮುಡಿ ಮೊಲೆ ಯೆಡೆ ಬಾಯಿ ಕೊರಳಿಗಂ
ವನುಗೊಳಿಸಿದನೇ ವೇಳ್ವ ॥ ೩೯

ಪೊಸ ಗೆಂಪೇರಿದ ಬಿಂಬ ಫಲವ ಗಿಳಿ
ಮಸಗಿ ಸಂತಸದೆ ಪೀರ್ವಂತೆ ।
ಅಸಿಯಳ ಮೊಗದೊಳು ಮೊಗವಿಟ್ಟು ಚೆಂದುಟಿ
ರಸವ ಸವಿದು ಚಪ್ಪರಿದ ॥ ೪೦

ಪವಳದಂಚಿನ ಬಟ್ಟಲೊಳು ತೀವಿದಮೃತವ
ತವಕದೆ ಗಂಧರ್ವ ನಾರಿ ।
ಸವಿವಂತಪನ ಚೆಂದುಟಿಯ ಸುಧೆಯ ನಗು
ತವಳೀಂಟಿದಳು ಮೋಹದಿಂದ ॥ ೪೧

ತಾವರೆಗೈಗಳಿಂದಿಂದು * ಮಂಡಲ ಚೆಂಡ
ಭಾವಜ ಪಿಡಿದಾಡುವಂತೆ ।
ತೀವಿದವಳ ಬಟ್ಟ ನೆಲೆ ಮೊಲೆಗಳ ಪಿಡಿ
ದಾ ವೀರನಲುಗಿದನಾಗ ॥ ೪೨

ಪಾರಿವಗಳ ದನಿ ಕೊಳರ್ವಕ್ಕಿಯ ಲಲ್ಲೆ
ಕೀರವರಿಗಳ ಬೈದಾಟ ।
ನಾರಿ ಮದನಮೋಹಿನಿ ಜಯಂತರೊಳು ಸೊಂ
ಪೇರಿದುವೇನ ಬಣ್ಣಿಸುವೆ ॥ ೪೩

ಅಳಿಗಳಪ್ಪುಗೆ ಸಿಂಗವರಿಗಳ ಚೆಲ್ಲಾಟ
ಕಳಹಂಸಗಳ ಬಾಯ್ಗೂಟ ।
ತೊಳಗುವ ಹರಿಣ ಹುಲ್ಲೆಯ ನಸಿಯಿರ್ವರ
ನೆಲೆಗೊಂಡು ಮೆರೆದುವೇನೆಂಬೆ ॥ ೪೪

ಕಡಗ ಕಂಕಣ ಬಳೆ ಗೈ ಝುಣರೆನೆ ನಾರಿ
ಬಿಡದಾಗ ಕಲೆಯ ತಾಣಗಳ ।
ತುಡುಕಿ ತಾಡನಗೈದು ಜುಮ್ಮು ದಟ್ಟಿಸಿ ಮೋಹ
ಗಡಲೊಳಾಳಿಸಿದಳಂದವನ ॥ ೪೫

ಯುವೆ ಹಳಚದೆ ನಿಟ್ಟಿಪ ಕಣ್ಣು ಬಾಯಿಂದ
ತವೆ ತೆಗೆಯದ ಬಾಯ್ಗೂಟ ।
ಸವಿದಕ್ಕೆಯ ಸಡಿಲದ ನೇಹಗಳಿಂದ
ಲವರಿರ್ವರೊಪ್ಪಿದರಂದು ॥ ೪೬

* ಮೊಲೆಯ ಚೆಂಡ.

ಬೆಚ್ಚರೊ ಬೇರಿಲ್ಲದೆ ದೇಹವೆರಡನೆಂ
ಬಚ್ಚರಿಯೊಳುದಕ್ಕೆಯಿಂದ |
ಮೆಚ್ಚಿದ ಸವಿ ರತಿ ಸುಖದೇಳಿಗೆಯಿಂದ
ಲಚ್ಚರಿಯೊಳು ರಾಜಿಪರು || ೪೭

ಸಲೆ ಬೆನ್ನನಲೆವೆಣೆ ಗಂಟು ಮದ್ದಳೆ ಕಣ್ಣ
ಹೊಳಹು ಪುಷ್ಪಾಂಜಲಿಯಾಗೆ |
ಕಲಶ ಕುಚಗಳ ತಾಳದೆ ನಲ್ಲನುರವೆಂಬ
ಲಲಿತ ರಂಗದೆ ನಟಿಸಿದಳು || ೪೮

ಮೊಲೆಗಳ ಕಲಶ ಸ್ಥಾಪನೆ ನಖ ರೇಖೆ
ಗಳ ಸೂತ್ರ ಬಂಧಗಳಿಂದ |
ಸಲೆ ಘರ್ಮ ಜಲ ಸೂಸಿ ಸುರತ ಸಾಮ್ರಾಜ್ಯದ
ವಿಲಸಿತ ಪಟ್ಟ ಗಟ್ಟಿದಳು || ೪೯

ಮುತ್ತುವೊಲ್ ಬೀಳುತಿರ್ದಾ ಶ್ರಮದುದಕವ
ನೊತ್ತಿ ಬೇಗದೆ ಸೆರಗಿಂದ |
ಉತ್ತಮ ರತಿ ಸಾಮ್ರಾಜ್ಯವೆ ಹರುಷದ
ಮೊತ್ತದೆ ರಂಜಿಸಿ ಬೇಗ || ೫೦

ಅರೆ ಮುಗಿದಕ್ಷಿ ಬೆಮರುವಂಗ ಕಡು ಗೆಂಪು
ಪರಿದು ರಾಜಿಸುವಧರಗಳ |
ಸುರತಾಂತ ಶ್ರಮದಿಂದವರಿರ್ವರು
ಮೆರೆದರೇನೆಂಬೆನಚ್ಚರಿಯ || ೫೧

ಸಿರಿ ಗಂಧದಣ್ಪಿಗೆ ಬಿಜ್ಜಳದೆಲರಿಗೆ
ಪರಿಮಳಸುವ ಪನ್ನೀರ್ಗೆ |
ಬರಿದು ಬಯಸುತವರಿರ್ವರೆಸೆದರಾಗ
ಸ್ಮರ ಮೋಹನದ ಸೊಕ್ಕೇರೆ || ೫೨

ನವರತ್ನದ ಗಿಂಡಿಯು ಪನ್ನೀರಲಿ
ತವೆ ಕೈ ಕಾಲ್ಮೊಗದೊಳದು ।
ಅವರಿರ್ವರೆಸೆದರು ಕರ್ಪುರ ವೀಳ್ಯದ
ಕವಳಗಳನು ಸವಿದಾಗ ॥ ೫೩

ನಗುವರು ಕೈ ಹೊಯ್ವರು ಮೈ ಮೈ ಸೋಂಕಿ
ಮಿಗೆ ಪುಳಕೋತ್ಸವದಿಂದ ।
ಜಗಕತಿಶಯವಹ ಮೋಹ ವಾರಿಧಿಯಲಿ
ಸೊಗಸಿನಲೋಲಾಡಿದರು ॥ ೫೪

ಇಂತವರಿರ್ವರೊಪ್ಪಿಹ ಕಾಲೋಚಿತ
ಮಂ ತವೆ ಕಂಡು ಸಂತಸದೆ ।
ಕಂತು ಮೋಹಿನಿಯು ಕೆಳದಿ ಚಿತ್ರರೇಖೆಯು
ತ್ಯಂತ ಸಂಭ್ರಮದೊಳೈದಿದಳು ॥ ೫೫

ನಾರಿ ಕೇಳ್ನಿನ್ನ ಮನೋರಥ ನೆರೆ ಕೈ
ಸಾಧಿತು ಚೆಲುವರೆರೆಯನ ।
ಮೇರೆಯರಿತು ನಡಿಸೆಂದಾಗ ಸಖಿಯುಪ
ಚಾರವ ಪೇಳ್ದಳಂಗನೆಗೆ ॥ ೫೬

ಬಳಿಕಿಂತೆಂದವರಿರ್ವರಿಚ್ಛೆಗೆ ಬಂದು
ವಿಲಸಿತ ಮನ್ನಣೆ ಪಡೆದು ।
ಲಲಿತಾಂಗಿ ವರ ಚಿತ್ರರೇಖೆ ತನ್ನಯ ಗೃಹ
ಕೊಲಿದೈದಿದಳರ್ತಿಯಲಿ ॥ ೫೭

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದ ಸು ಧರ್ಮಾನುಬಂಧಿ ॥ ೫೮

೧೦ನೆಯ ಸಂಧಿ ಸಮಾಪ್ತಂ

---

# ಹನ್ನೊಂದನೆಯ ಸಂಧಿ

## ಕರ್ಣಾಟಕಕ್ಕೆ ಖಾನನು ಬಂದುದು.

**ಸೂಚನೆ** || ಒಡನಿಕ್ಕೇರಿಯ ಸೆಳೆದಾಗ ತುರುಕರ
ಪಡೆ ನಡೆದುದು ಕನ್ನಡಕೆ ||

ಇಂತಿರುತಿರಲತ್ತಲಿಕ್ಕೇರಿಯ ಭೂ
ಕಾಂತಗೆ ಕೆಂಗಮನ್ನೆಯಗೆ |
ಪಂಥದಲೆಲ್ಲೆಗಟ್ಟಿನ ಮಾತಿಗೆ ಛಲ
ವಾಂತು ಬಂದುದು ಮನ ಮುನಿಸು || ೧

ಈತನಾತನ ಕೂಡೆ ಕಾದಲರಿಯದುರೆ
ಖ್ಯಾತಿಯಿಂ ಕೆಂಗೇಂದ್ರನಾಗ |
ದೂತನನಟ್ಟಿದ ವಿಜಯಾಪುರ ವರ
ಭೂತಳೇಶನ ಬಳಿಗಾಗ || ೨

ಬಂದಾಗಲಾ ಮಂತ್ರಿ ಪಾತ್ಸ್ಯಾವನು ನೆರೆ
ಸಂದಿಸಿಕೊಂಡು ಬೇಗದಲಿ |
ನಿಂದು ಕಾಣಿಕೆಯಿಕ್ಕಿ ರೊಕ್ಕದಾಸೆಯನಿತ್ತು
ತಂದನು ದಂಡನಾ ನೆಲಕೆ || ೩

ದುರಗಲಿ ಹನುಮನ ಬಲಸಹ ಕರಿಸಿಕೊಂ
ಡಿರದಿಕ್ಕೇರಿಯ ದಳವ |
ಮುರಿಯಲಿರಿದು ಬೆನ್ನಟ್ಟಿ ಬಂದಾ ಕ್ಷಣ
ಪುರವ ಮುತ್ತಿದನಾ ಖಾನ || ೪

ಇಕ್ಕೇರಿಯ ಭೂಪ ತುರುಕರ ದಾಳಿಗೆ
ಬೆಕ್ಕಸ ಬೆರಗಾಗುತಾಗ |
ಹೊಕ್ಕನು ಮಲೆಯ ನಾ ಕ್ಷಣ ದೂಳಿ ಗೋಟೆಯ
ಗಕ್ಕನೆ ಕೊಂಡರೇ ವೇಳ್ಯ || ೫

ಹಿಡಿದು ಹೆಣ್ಣುಗಳ ದೇವರ ಶಿಲೆಗಳ ತಲೆ
ಯೊಡೆದು ಪುರವ ಸೂರೆ ಮಾಡಿ |
ಕೆಡಿಸಿ ಪತಿವ್ರತೆಯರ ಗೋವುಗಳ ಸದೆ
ಬಡಿದರೇ ವೇಳ್ಯನದ್ಭುತವ || ೬

ಅರಮನೆಯೊಳಗಿಹ ಸಕಲ ವಸ್ತುವ ಕೊಂಡು
ಹರುಷದೆ ರಣಧೂಳಿ ಖಾನ |
ಪುರಕೆ ಠಾಣೆಯನಿಕ್ಕಿ ಪಾತ್ಸ್ಯಾವಿನೆಡೆಗೈದಿ
ಭರದೆ ಕಾಣಿಕೆಯ ಮಾಡಿದನು || ೭

ಪಿರಿದು ಸಂತೋಷದೆ ಪಾತ್ಸ್ಯಾವು ಖಾನಗೆ
ಸರಿ ಲಸುಕರಿತನವಿತ್ತು |
ತುರಗ ದಳವ ಕೂಡಿ ಕೊಟ್ಟು ಕರ್ಣಾಟವ
ನಿರದೆ ಸಾಧಿಸು ಹೋಗೆಂದ || ೮

ಅಂಕುಶ ಖಾನ ಮುಂತಾದ ಖಾನರುಗಳ
ಶಂಕೆ ಯಿಲ್ಲದೆ ಕೂಡಿ ಕೊಟ್ಟು |
ಮುಂಕೊಂಡು ಪಾತ್ಸ್ಯಾವು ರಣಧೂಳಿ ಖಾನನ
ಬೆಂಕದೆ ಬೀಳ್ಕೊಟ್ಟನಾಗ || ೯

ಬಳಿಕ ಸಲಾಮೆಂದೊಡೆಯನ ಕೈಯಿಂದ
ಕಳುಹಿಸಿ ಕೊಂಡಾ ಖಾನ |
ತಳುವದೆ ತಳತಂತ್ರ ಗೂಡಿ ಸನ್ನಾಹದೊ
ಳಳವಟ್ಟು ನಡೆದನುಬ್ಬಿನಲಿ || ೧೦

ಮುಂತೊಪ್ಪವ ವಾಜಿ ಯೈವತ್ತು ಸಾವಿರ
ದಂತಿ ಸಂಕುಳ ವೈನೂರು ।
ಪಂಥದ ಕಾಲಾಳು ನಾಲ್ಕು ಲಕ್ಷದ ಬಹು
ತಿಂಥಿಣಿಯಲಿ ಖಾನ ನಡೆದ ॥ ೧೧

ಬಸವ ಪಟ್ಟಣಕ್ಕೈದಿ ಪೂವಲ ಹನುಮನ
ನೊಸೆದು ಸ್ನೇಹವ ಮಾಡಿ ಕೊಂಡು ।
ಎಸೆವ ಕರ್ಣಾಟದ ಬಲ ಗೂಡಿ ಖಳ ಬಹ
ಕುಶಲವನೇನ ಬಣ್ಣಿಸುವೆ ॥ ೧೨

ಹರುಪನ ಹಳ್ಳಿ ಕನಕ ಗಿರಿ ಸೊಂಡೂರು
ನೆರೆ ದಿವ್ಯ ಗುಡಿಯ ಕೋಟೆಗಳ ।
ಪಿರಿದಾದುಜ್ಜನಿ ಭೂಮಿ ಪಾಲರ ಬಲ
ನೆರೆಮದಪರಿಮಿತವಾಗ ॥ ೧೩

ರಾಯ ದುರ್ಗದವರು ಹಟ್ಟಿಯ ವೀರಪ್ಪ
ನಾಯಕ ದೊಡ್ಡೇರಿಯರಸ ।
ಆಯುತವಡೆದ ಕುಂದುರುಪೆಯ ಬಲ ಸಮು
ದಾಯವೈತಂದುದೊಗ್ಗಿನಲಿ ॥ ೧೪

ಮುಂತೆ ರಾಜಿಸುವ ಬತ್ತೀಸಾಯುಧಗಳ
ಪಂಥದ ಮತ್ತಿ ವಿಡಿದರು ।
ಸಂತತ ಹಿರಿಯೂರ ತಮ್ಮಣ್ಣ ನಾಯಕ
ನೊಂತಾದ ಬಲವೈದಿದುದು ॥ ೧೫

ಚಿಕನಾಯಕನ ಹಳ್ಳಿಯ ಬೈರ ನಾಯಕ
ನಕಳಂಕ ತುರುಗೆರೆಯವರ ।
ಸಕಲ ಬಲವ ಕೂಡಿ ಹನುಮಪ್ಪ ನಾಯಕ
ಚಕಿತ ಪರಾಕ್ರಮಿ ನಡೆದ ॥ ೧೬

ಬೇಲೂರು ನರಸಿಂಹ ಪುರ ಪಾಲುಪರೆಯುವ
ರಾಳು ಕುದುರೆಗಳು ಸಹಿತ |
ಹೇಳಲಳವೆ ಹನುಮಪ್ಪ ನಾಯಕ ಬಹ
ಧಾಳಿಯನೇನ ಬಣ್ಣಿಸುವೆ || ೧೭

ತನ್ನ ಸಮಾನದ ಬಿರುದಿನ ಖಾನರು
ಮುನ್ನೈವತ್ತರೊಗ್ಗಿನಲಿ |
ಸನ್ನಾಹ ಭೇರಿಗಳ್ಮೊಳಗಲು ಖಾನ ಬ
ಪ್ಪುನ್ನತಗಳನೇ ವೇಳ್ವೆ || ೧೮

ಕುದುರೆಗಳೋ ಪ್ರಳಯಾಂಬುನಿಧಿಯೊಳೊಗೆ
ದೊದವಿದ ಸಾಲ ತೆರೆಗಳೊ |
ಮದ ದಂತಿಗಳೊ ಕಾಲ್ಮೇಘದೊಡ್ಡುಗಳನ
ಲೆದೆ ಗೆಡಿಸಿದುದು ನೋಳ್ಪವರ || ೧೯

ತುಡುಕಿ ಚಿಮ್ಮುವ ಖಂಡೆಯಗಳ ಕಿಡಿ ಮೇಲ
ಕಡರಿ ಖದ್ಯೋತ ಮಂಡಲವ |
ಬಿಡದೆ ಮುಸುಕಿತಾ ಪಡೆಯ ಪರಾಕ್ರಮ
ದಡವ ನಾನೇನ ಬಣ್ಣಿಪೆನು || ೨೦

ಕುಂತ ನೇಜೆಯ ಕೈಯಿಟ್ಟ ಯಾಯುಧಗಳ
ನಂತರಿಕ್ಷಗಳಿಗಿಟ್ಟಾಗ |
ಪಂಥದಿಂದಾನುವ ಕಾಲಾಳ ರಾವುತರ
ತಿಂಥಿಣಿ ಯೊಪ್ಪಿತೇ ವೇಳ್ವೆ || ೨೧

ನಡತೆಯಿಂ ಗಿರಿ ದುರ್ಗ ಕುಡಿತೆಯಿಂ ಜಲ ದುರ್ಗ
ಕಡುಗಲಿಗಳ ಕೋಪಗಳ |
ಕಿಡಿಯೊಳು ವನ ದುರ್ಗವಡಗಿತು ಬತ್ತಿತು
ಬಿಡದಾಗ ಬೆಂದುದೇ ವೇಳ್ವೆ | ೨೨

ಸಿಡಿಲ ಕುಡುಹಿನಿಂದೆ ಬ್ರಹ್ಮಾಂಡ ಭೇರಿಯು
ಬಡಿವವೊಲಾನೆಯ ಮೇಲೆ ।
ಹೊಡೆವ ಡಮಾಮಿಗಳಬ್ಬರ ಗಗನವ
ತುಡುಕಿತೇ ವೇಳ್ವೆನದ್ಭುತವ ॥ ೧೩

ಚಂಬಕ ಪಟಹ ಮವುರಿ ಕೊಂಬು ಕೊಳಲಿನಾ
ಡಂಬರ ಬುರುಗು ನಪಿರಿಯು ।
ಇಂಬಿನ ರವವೆಂಟು ದಿಕ್ಕಿನ ಹೊರಿಗೆಯು
ಮುಂಬರಿದೊಡನೆ ಪರಿದುವು ॥ ೧೪

ಪದದೊಳುದಿಸೆ ತನಗಾದಘವೆನು ಸುರ
ನದಿಯೊಳು ಮಿಂದುರೆ ಪರಿದು ।
ಮುದದಿಂದ ಸುರಲೋಕವ ಪೊಕ್ಕು ನಿರ್ಜರ
ವಧುಗಳಪ್ಪಿತು ಕೆಂದೂಳು ॥ ೧೫

ಎತ್ತಿದ ಸತ್ತಿಗೆ ಬಿರುದಿನ ಡಾಳಿನ
ವೊತ್ತ ಡಾಳಿಪ ಚಾಮರದ ।
ಬಿತ್ತರದಿನ ಮಂಡಲವ ಮುಸುಕೆ ನೆರೆ
ಕತ್ತಲೆಯಾಯಿತು ಧರೆಗೆ ॥ ೧೬

ತಳತಂತ್ರದಗಲವ ದಾಟಲಾರದೆ ಮೇಲೆ
ಚಲ ಪಕ್ಷಿಗಳಾಗ ಬಳಲಿ ।
ಇಳೆಯೊಳುದಿರಿದುವು ರಣಧೂಳಿ ಖಾನನ
ಬಲವೆನದೇನ ಬಣ್ಣಿಸುವೆ ॥ ೧೭

ಪ್ರಳಯರುದ್ರನ ಫಾಲಾಗ್ನಿಯ ಕಿಡಿಗಳ
ಸುಳಿವೊ ಸಂವರ್ತ ಮೃತ್ಯುವಿನ ।
ಬಳಗವೆಂದೆನಲಾಗ ರಣಧೂಳಿ ಖಾನನ
ದಳ ನಡೆದುದು ಬೊಬ್ಬಿಡುತ ॥ ೧೮

ಬಳಿಕಾಗ ಖಾನ ಖಾನರು ಫೌಜ ಬೇರೆ ಬೇ
ರಳವಡಿಸಿಯೆ ನಡೆತರಲು ।
ಸಿಲೆಯ ಸಂಜೋಗದ ರಾವುತರೊಗ್ಗಲಿ
ಖಿಳನೈತಂದನುಬ್ಬಿನಲಿ ॥ ೧೯

ದಾಳಿಯ ಕುದುರೆ ನಾಲ್ಕೆಂಟು ಸಾವಿರ ಮುಂದೆ
ತೂಳುವ ಬಲು ಬೊಬ್ಬೆಯಿಂದ ।
ಹೇಳುವುದೇನಾಕಾಶ ಮಂಡಲ ನೆರೆ
ಘೀಳಿಡಲೈದಿದರಾಗ ॥ ೨೦

ಆನೆಯ ಮೇಲೆ ತೊಟ್ಟಿಲ ಚಪ್ಪರದಲಿ ಸು
ಮ್ಯಾನದ ಬಿಬ್ಬಿಯರೊಡನೆ ।
ಆನಂದವಾಡುತ ಬರುವ ಖಾನರುಗಳ
ನೇನ ಬಣ್ಣಿಸುವೆನಚ್ಚರಿಯ ॥ ೨೧

ಪಲ್ಲಕ್ಕಿ ದಂಡಿಗೆಗಳ ಮೇಲೆ ತಮ್ಮಯ
ವಲ್ಲಭೆಯರು ಬರುತಿರಲು ।
ನಿಲ್ಲದೆ ಕುದುರೆಯ ಮೋಹರದೊಳಗಾಗ
ಬಲ್ಲಿದ ಖಾನರೈದಿದರು ॥ ೨೨

ಬಿಗಿದ ಡಮಾಣದಲೊಂಟೆಗಳಗಣಿತ
ಝುಗಝುಗಿಸುವ ಕಾಂತಿಯಿಂದ ।
ಸೊಗಸುವ ಕೊಲ್ಲಾರ ಬಂಡಿಯ ಲೆಕ್ಕವ
ಬಗೆವನಾರಾ ದಂಡಿನೊಳಗೆ ॥ ೨೩

ಗೂಳ ಪಾಳೆಯದ ಸಂಗಡ ಕುದುರೆಯ ಮೇಲೆ
ಕಾಲ ಕುಪ್ಪಸ ಪಾಪೋಸು ।
ಜೋಲುವ ರವಿಕೆಯ ಮೊಲೆಕಟ್ಟುಗಳ ಚೆಲ್ವ
ಸೂಳೆಯರೈದಿದರಾಗ ॥ ೨೪

ಹೂಡಿದ ಬಂಡಿಗಳೊಳಗೆ ಫಿರಂಗಿಗ
ಳೇಡಿರಿದಗಣಿತವಾಗಿ ।
ಕೂಡೆ ಖಾನನ ದಂಡಿನೊಳಗೈದಿ ಬರುವ ನಿ
ರೂಢಿಯನೇನ ಬಣ್ಣಿಸುವೆ ॥ ೩೫

ಸರಳು ತುಂಬಿದ ತರಕಸ ಸಿಂಗಾಡಿಗ
ಳರದೆ ಸಾಸಿರ ಬಂಡಿಗಳಲಿ ।
ಪರಿಪೂರ್ಣದಲಿ ಬರುತಿರ್ದುವಾ ದಂಡಿನ
ಬರವೆನದೇನ ಬಣ್ಣಿಸುವೆ ॥ ೩೬

ಕರಿಯ ಮದ್ದಿನ ತಿತ್ತಿ ಬಾಣದ ಹೇರುಗ
ಳಂದಪಿನಿಯ ಸಾಲ ಮೊಟ್ಟೆ ।
ಬರುತಿರ್ದುವು ಲಕ್ಕ ಸಂಖೆಯೊಳಾ ಬಲ
ದಿರವ ಬಣ್ಣಿಪ್ಪೊಡಾರಳವು ॥ ೩೭

ಹೇಸರಗತ್ತೆಯ ಮೇಲೆ ಬಂಗಿಯ ಹೇರು
ಸಾಸಿರ ಗಂಗಸಾರಗಳ ।
ಸೂಸುವ ಸಾರಾಯದ ಪೀಪಗಳ ಲೆಕ್ಕ
ವೀಸೆಂದು ಪೇಳ್ವರಾರದನು ॥ ೩೮

ಎತ್ತಿನ ಮೇಲೆ ದಂಡಿನ ಸಂಜೋಗವ
ಮತ್ತಾಗಲುರೆ ಹೇರಿಕೊಂಡು ।
ಬಿತ್ತರದೊಳಗೈತಹ ವಾಣಿಜಿಕರ
ಮೊತ್ತವ ಬಣ್ಣಿಪರಾರು ॥ ೩೯

ಕೊಡಲಿ ಕೈ ಮಚ್ಚು ಗುದ್ದಲಿ ಮೊನೆ ಹಾರೆಗಳ್
ಪಿಡಿದ ಕರದ ಕುಡುಗೋಲು ।
ತಡಿಕೆ ಮಕ್ಕರಿ ಸಹ ಬಹ ಕಾಮಾಟದ
ಬಿಡು ಮಂದಿಗೆ ಲೆಕ್ಕವಿಲ್ಲ ॥ ೪೦

ಕೊಟ್ಟಾಣಿಗರು ಕಮ್ಮಾರರು ಬಹು ಬಗೆ
ರೊಟ್ಟಿ ಸಕ್ಕರೆ ತುಪ್ಪಗಳ |
ಮೊಟ್ಟೆಗಳನು ಮಾರುವ ಬೇಹಾರಿಗ
ಳಟ್ಟಣಿಸುತಲ್ಯೆದಿದರು || ೪೧

ಒಡನೀ ಪರಿಯು ಸಮಸ್ತ ಸಂಜೋಗದೆ
ಪಡೆ ಸಹ ರಣಧೂಳಿ ಖಾನ |
ಬಿಡದೆ ಕರ್ಣಾಟ ರಾಜ್ಯವ ಪೊಕ್ಕು ಧಾಳಿಯು
ನಿಡುವ ಸಂಭ್ರಮವನೇ ವೇಳ್ವ || ೪೨

ಸೀರೆಯುವನು ಸೂರೆ ಮಾಡಿ ಯಾ ಭೂಪನ
ಸೇರಿಸಿ ಯುಮನ ಪಟ್ಟಣಕೆ |
ವಾರುವ ದಳ ಸಹ ರಣಧೂಳಿ ಖಾನ ಮುಂ
ದೋರಂತೆ ನಡೆದನುಬ್ಬಿನಲಿ || ೪೩

ಖಾನನ ಧಾಳಿಗೆ ಕಂಗೆಟ್ಟು ತುಮುಕೂರು
ಭೂ ನಾಥನ್ಯೆತಂದು ಕಂಡು |
ಏನೆಂಬೆ ಸಕಲ ರಾಜ್ಯವ ಬಿಟ್ಟು ಗಿರಿ ದುರ್ಗ
ಕಾನಲಾರದೆ ತೆರಳಿದನು || ೪೪

ಕೊಡದೆ ಕಾದಿದ ಹಳ್ಳಿ ಪಳ್ಳಿ ಪುರಗಳನು
ತುಡುಕಿ ಲಗ್ಗೆಗೆ ಬಿಟ್ಟಾಗ |
ಕಡಿ ಖಂಡವ ಮಾಡಿ ಸಕಲ ಜನರ ಮುಂದ
ಕಡಿ ಯಿಟ್ಟ ಖಾನನೇ ವೇಳ್ವ || ೪೫

ಒಡೆದಾ ಪುರ ಪಳ್ಳಿ ಯಗ್ರಹಾರದ ಜನ
ಕಡು ಭೀತಿಯು ತಳದಾಗ |
ಹೆಡಗೆ ಹೇರೆನಲಕ್ಕಿ ಹುಡಿ ಹಿಟ್ಟುಗಳ ತುಂಬಿ
ಕೊಡಗು ಮಲೆಯು ಸಾರಿದರು || ೪೬

ತಾಯೊಂದೆಸೆ ಮಕ್ಕಳೊಂದೆಸೆ ಕೊಟ್ಟಿಹ
ಬೀಯಗರೊಂದೆಸೆಯಾಗಿ ।
ಬಾಯ ಬಿಡುತ ಬಲು ಭೀತಿಯೊಳಗೆ ಹೊಕ್ಕ
ರಾಯಾಸಗೊಂಡು ಹೆಮ್ಮಳೆಯ ॥ ೪೭

ಹಗ ಪೆಟ್ಟಿ ಕಣಜದೊಳಿಹ ಬಹು ಧಾನ್ಯವ
ಬಗೆಯದೆ ಸೂರೆಯ ಕೊಟ್ಟು ।
ಮಿಗೆ ಬೆಳೆದಿಹ ಪೈರುಗಳ ಬಿಟ್ಟು ಜನವಂಜಿ
ಜಗುಳಿದರೇನ ಬಣ್ಣಿಸುವೆ ॥ ೪೮

ಎತ್ತು ಕರೆವ ಹಸು ವೆಮ್ಮೆಯ ಹಿಂಡುಗ
ಳತ್ತಲಾದರು ಹೋಗಲೆನುತ ।
ಮತ್ತಾಗ ತಲೆಯ ಕೆದರಿಕೊಂಡು ಜನ ಕಾಡ
ಹತ್ತಿದರೇನನುಸಿರುವೆ ॥ ೪೯

ಕಾಲೊಳು ಮೂಡಿದ ದಸಿ ಮುಳ್ಳುಗಳು ತಾಕಿ
ಸೀಳಿದ ಮೈ ಗಾಯದಿಂದ ।
ಜೋಲಿ ಸುರಿವ ಬಿಸು ರಕ್ತದಿಂದಾ ಜನ
ಜಾಲನೈದಿತು ದೆಸೆ ದೆಸೆಗೆ ॥ ೫೦

ಅದೊ ಬಂದುವು ಕುದುರೆಯ ಹಿಂಡು ನೋಡಿತ್ತ
ಲಿದೆ ಬಲು ಪೌಜೆಂದೆನುತ ।
ಬೆದರಿ ಯೋಡುವ ದನಗಳ ಕಂಡು ಜಗವೆಲ್ಲ
ಗದಗಾಪುಗೊಂಡುದೇ ವೇಳ್ವ ॥ ೫೧

ಹೆಂಡಿರುಗಳ ಬಿಟ್ಟೋಡಿದವರ ಶಿಶು
ತಂಡವನೀಡಾಡಿದವರ ।
ಗಂಡನ ಬಿಟ್ಟು ಬಾಯ್ಬಿಡುತ್ತೈದಿದ ಹೆಂಗ
ಳಂಡಲೆಗಳನೇ ವೇಳ್ವ ॥ ೫೨

ಗಿಡುವಿನೊಳಗೆ ಹೆತ್ತವರ ಗರ್ಭಿಣಿಯರ
ನೊಡನೆ ಸಾಗಿಸಲಾರದವರು ।
ಕಡುಗಲಿ ರಣ ಧೂಳಿ ಖಾನನಬ್ಬರಕಂಜಿ
ಯಡವಿಯ ಹೊಕ್ಕರೇನೆಂಬೆ ॥ ೫೩

ಕಣ್ಣಿನೊಳಗೆ ಖಾನ ಕನಸಿನೊಳಗೆ ಖಾನ
ಬಣ್ಣಿಸೆ ಮನದೊಳು ಖಾನ ।
ತಿಣ್ಣವಡೆದ ಖಾನನ ಸುದ್ದಿ ಜಪವಾಗಿ
ಬಣ್ಣಗೆಟ್ಟಿದು ಲೋಕವೆಲ್ಲ ॥ ೫೪

ತಾರಕಾಸುರನುಪಟಳಕಂಜಿ ಜಗವೆಲ್ಲ
ಕಾರಗಲಿಸಿದಂದದಲಿ ।
ಊರೂರುಗಳ ಬಿಟ್ಟು ಸರ್ವ ಜನರು ಬಂದು
ಸೇರಿವರ್ಗಿರಿ ತರುಗಳನು ॥ ೫೫

ಮೊರಸು ರಾಜ್ಯವ ಹೊಕ್ಕು ತುರುವನು ಸೆರೆ ವಿಡಿ
ದಿರದೆ ಜನರ ಕಂಗೆಡಿಸಿ ।
ಶರಣು ಹೊಕ್ಕರಿಗೆ ನಂಬುಗೆಗೊಟ್ಟು ಮುಂದಕ್ಕೆ
ತೆರಳಿದನಾ ಖಾನನಾಗ ॥ ೫೬

ಬೆಂಗಳೂರವನ ಪರಾಕ್ರಮವನು ಬೇಗ
ಭಂಗಿಸಿ ಬಿಡುವೆನೆಂದೆನುತ ।
ಹಿಂಗದೆ ತಳತಂತ್ರ ಸಹಿತೈದಿ ನೆರೆ ಶಿವ
ಗಂಗೆಯೊಳಗೆ ಬೀಡ ಬಿಟ್ಟ ॥ ೫೭

ಕೇಳಿದನಾಗ ಖಾನನ ಧಾಳಿಯಬ್ಬರ
ದೇಳಿಗೆಯನು ಬೆಂಗಳೂರ ।
ಭೂಲೋಲ ದಳವೆ ಮೇಳೈಸಿಕೊಂಡನು ನೆರೆ
ಕಾಳಗವನು ಮಾಳ್ಪನೆಂದು ॥ ೫೮

ಮರೆ ತೊರೆಯನು ಕಡಿದುರೆ ಬಟ್ಟಬಯಲೊಳ
ಗಿರಿಸಿಕೊಳ್ಳದೆ ದುರ್ಗವನು ।
ಪಿರಿದಗುರ್ವಿಸಿ ಪುರಿಯನು ಕಾದಿರೆ ಬಂದು
ತುರುಕಾಳು ಲಗ್ಗೆ ಮಾಡಿದರು ॥ ೫೯

ಸಿಂಗಾಡಿಯಂಬಿನ ಮಳೆಯುರುಬಿಗೆ ಬಲ
ಕಂಗೆಟ್ಟು ದೆಸೆ ದೆಸೆಗೋಡಿ ।
ಭಂಗವಡೆಯೆ ದುರ್ಗದ ಲಗ್ಗೆ ಮಾಡುವ್ರೊ
ಡಂಗವಿಸಿದನಾ ಖಾನ ॥ ೬೦

ಅನಿತರೊಳಗೆ ಕಂಗೆಟ್ಟು ಖಾನಗೆ ತನ್ನ
ತನುಜನ ಕೈ ಸೆರೆಗಟ್ಟ ।
ಘನ ನಂಬುಗೆಗೊಂಡು ದುರ್ಗವನಿತ್ತಾಗ
ಮನ ನೊಂದು ತೆರಳಿದ ಗೌಡ ॥ ೬೧

ರಾಮ ಗಿರಿಯ ದುರ್ಗ ಮೊದಲಾದ ಘನವಹ
ಸೀಮೆಯ ಖಳನಿಗೆ ಕೊಟ್ಟು ।
ನೇಮವಳಿದು ನೆರೆಯವನಿತ್ತ ಕುಣಿಗಿಲ
ಸೀಮೆಗೈದಿದನೇ ವೇಳ್ವ ॥ ೬೨

ಬಲ್ಲಾಳ ಪುರ ಕೋಳಾಲ ಬಿಜ್ಜಾವರ
ದಲ್ಲಿಯ ಪ್ರಭು ಮನ್ನೆಯರು ।
ತಲ್ಲಣಗೊಂಡು ಖಾನನಿಗೆ ಬೇಡಿದುದಿತ್ತು
ನಿಲ್ಲದೆ ಕೂಟಕ್ಕೈದಿದರು ॥ ೬೩

ಚಿಕ ಬಳಲಾಪುರ ನೆರೆ ಹೊಳವನ ಹಳ್ಳಿ
ಯಕಳಂಕ ಹೊಸ ಕೋಟೆಯವರು ।
ಮುಖ ಭಂಗಿತರಾಗಿ ಖಾನನ ಸಂಗಡ
ಸಕಲ ಬಲದೆ ತೆರಳಿದರು ॥ ೬೪

* ಬಿರಿದು ಗರ್ವಿಸಿ ಪೆರೆಯು ಕಾದಿರೆ ಬಂದು ಸುರುತಾಳ ಲಗ್ಗೆ.

ಬಾವಲೂರುರೆ ಹೊಸ ಊರು ಕಗ್ಗೊಂದಿಯು
ತೀವಿದ ಮಾಸ್ತಿಯು ನೃಪರು ।
ದೇವಂಡಪುರಿ ಸೂರೆಬಲೆ ಸಿಡಿಲ್‌ಗಟ್ಟದ
ಭೂವರರೊಡನೈದಿದರು ॥ ೬೫

ಬಳಿಕಿತ್ತ ಪಾತ್ಸ್ಯಾವುವಿನಪ್ಪಣೆಯಿಂದ
ತಳುವದೆಯಾ ಬೆಂಗಳೂರ ।
ಗಳಿಲನೆ ಸಹಜಿಗೆ ಕೊಟ್ಟಾಗ ಖಾನ ಮುಂ
ದೆಳಸಿದ ರಾಜ ಕಾರಿಯವ ॥ ೬೬

ಶ್ರೀರಂಗ ಪಟ್ಟಣ ಕರ್ಣಾಟಕವೆಂಬ
ನಾರಿಯು ನೊಸಲೊಳು ಮೆರೆವ ।
ಚಾರು ರನ್ನದ ಬೊಟ್ಟನಂತಿಹುದದ ಕೊಳ
ನೇರವಹುದು ರಾಜಕಾರ್ಯ ॥ ೬೭

ದೊರೆ ಯಿದ್ದ ಪಟ್ಟಣವನು ಯುಕ್ತಿಗೆ ಯಿಕ್ಕ
ಭರದಿಂದ ಸೆಳದೊಡೆ ಬಳಿಕ ।
ಅರಸ ಕಟ್ಟಿದಿರಾಟ ಮುಗಿದಂತೆ ಮಿಕ್ಕಿನ
ಪುರವೆಮ್ಮ ಕೈ ವಶವಹುದು ॥ ೬೮

ಎಂದಾಲೋಚಿಸಿ ಖಾನ ಖಾನರುಗಳ
ಗಂದಾಗಳುಡುಗೊರೆ ಯಿತ್ತು ।
ಮುಂದಣ ಪಯಣವ ನಿರ್ಧಾರಗೈದಾಗ
ಬಂದು ಬಿಟ್ಟನು ಹೊರ ಬೀಡ ॥ ೬೯

ಸನ್ನೆಯು ಭೇರಿ ಮೊಳಗಲು ಸಕಲ ಖಾನ
ರುನ್ನತ ಹರುಷದೊಳಾಗ ।
ಹೊನ್ನಂದಣ ಗಜ ಪಲ್ಲಕ್ಕಿ ತುರಗಾದಿ
ಸನ್ನಾಹದಿಂದೈದಿದರು ॥ ೭೦

ಭೂಮಿಯುಗಲವೆಲ್ಲ ಕುದುರೆ ಕಾಲಾಳುಗಳ್
ವ್ಯೋಮ ಮಂಡಲ ಕೆಂದೂಳು ।
ತಾ ಮನೋಹರವಾಗಿರೆ ಬೀಡ ಬಿಟ್ಟನು
ರಾಮಗಿರಿಯ ದುರ್ಗದಲಿ ॥ ೭೧

ಕರೆದಾಗ ಖಾನ ಖಾನರುಗಳ ಮೈಸೂರ
ದೊರೆಯ ಪರಾಕ್ರಮದಿರವ ।
ಪಿರಿದಾತನ ದಳ ಪತಿ ಮನ್ನೆಯರುಗಳ
ದುರಗಲಿತನವ ಪೇಳದನು ॥ ೭೨

ರಾಮ ಚಂದ್ರನ ಸು ಚರಿತ್ರ ಶ್ರೀ ನರ ಸಿಂಹ
ಸ್ವಾಮಿಯ ಬಲ ಯದು ವರನ ।
ಆ ಮಹಾ ಬಲ ಶೌರ್ಯದೇಳಿಗೆ ಮೈಸೂರ
ಭೂಮಿ ಪಾಲರಿಗಿಹುದಂತೆ ॥ ೭೩

ನೆರೆ ಪುಣ್ಯ ಶಕ್ತಿ ಯೆಂದೆಂಬ ಸುದರ್ಶನ
ಧುರದೊಳಗಿದಿರಾದ ನೃಪರ ।
ತರಿದು ತೂರುವುದಂತೆ ಕಂಠೀರವ ರಾಜ
ನರ ನಾರಾಯಣನೆಂದು ॥ ೭೪

ಇನಿತಲ್ಲದೆ ಲೋಕ ಮಾತೆ ಯೆಂದೆನಿಸುವ
ವನಿತೆ ಚಾಮುಂಡಿ ಯೆಂಬವಳು ।
ಜನಪನ ಕುಲ ದೇವತೆ ರಣ ಜಯವಿತ್ತು
ಘನ ಕೃಪೆ ವಡೆದಿಹಳಂತೆ ॥ ೭೫

ದ್ವಾಪರ ಯುಗದಲಿ ನರಗೆ ಸಾರಥಿ ಯಾಗಿ
ಶ್ರೀ ಪತಿ ರಾಜಿಸಿದಂತೆ ।
ಭೂ ಪಾಲ ಕಂಠೀರವಗೆ ಪಶ್ಚಿಮ ರಂಗ
ತಾ ಪಿರಿದಾಗೊಲಿದಿಹನು ॥ ೭೬

ಹನುಮಂತ ರಘುನಾಥನಿಗೆ ಸೇವಕನಾಗಿ
ಯನುವರದೊಳು ರಕ್ಕಸರ ।
ಮೊನೆ ಮುರಿದೊಲು ರಿಪು ಬಲವ ಖಂಡಿಪನಂತೆ
ಜನ ನಾಥನ ದಳವಾಯಿ ॥ ೩೭

ಆತನ ಮನ್ನೆಯರೊಳು ಸಂಗರಕಿದಿ
ರಾತು ನಿಲುವ ರಿಪು ನೃಪರು ।
ಭೂ ತಳದೊಳಗಿಲ್ಲರದರಿಂದ ಬಲು ಬಲ
ವ್ರಾತದೆ ತೆರಳ ಬೇಕೆಂದ ॥ ೩೮

ಇಳೆಯರಸುಗಳ ಮೇಲ್ವೈದುವೆಂದದಲಿ ನಾ
ವಳ ಬಲ ಸಹಿತ್ತೈದಿದೊಡೆ ।
ಕಳವೇರಿ ಕೈ ಮುರೆದಂತಹುದದರಿಂದ
ತಳತಂತ್ರವ ನೋಳ್ಪ ನೆಂದ ॥ ೩೯

ಕಡುಗಲಿ ಖಾನ ವಜೀರರು ನನ್ನಿಯು
ಪಡೆಯನೆಲ್ಲವ ಬೇರೆ ಬೇರೆ ।
ಬಿಡದೆ ಗಣಿತೆಯು ತೋರಿಸಿದೊಡೆ ನೋಡಿ ಕೊಂ
ಡಡಿ ಯಿಡುವೆವು ನಾವೆಂದ ॥ ೪೦

ಎನಲು ಹಸಾದವೆನುತ ಖಾನ ಖಾನರು
ಮನ ಹರುಷದೆ ತಮ್ಮ ಬಲವ ।
ಅನು ಮಾಡಿ ಬೇರೆ ಬೇರೈತಂದು ತೋರುವ
ಘನ ವಿವರವನೇ ವೇಳ್ವ ॥ ೪೧

ಸಿಲೆಯು ಸಂಜೋಗದ ಹಯುವೆಂಟು ಸಾವಿರ
ಬಲು ಮದ ಕರಿ ಮೂವತ್ತು ।
ಸಲೆ ಹತ್ತು ಸಾವಿರ ಕಾಲಾಳು ಖಾನನ
ಬಲದಲ್ಲಿ ಮೆರೆದುವೇ ವೇಳ್ವ ॥ ೪೨

ತುರಗ ಸಾಸಿರ ನಾಲ್ಕು ಗಜ ಹತ್ತು ಕಾಲಾಳ
ನೆರವಿ ಹತ್ತೆಂಟು ಸಾವಿರದ ।
ವರ ಗಣನೆಯ ಮೋಹರವ ಖಾನನ ಪಿತ
ಗರುವ ಪರಾತ ತೋರಿದನು ॥ ೮೩

ಆರು ಸಾಸಿರ ಕಾಲಾಳು ಗಜಗಳೆಂಟು
ವಾರುವ ನಾಲ್ಕು ಸಾಸಿರದ ।
ವೀರೆಯ ಬಲವ ಖಾನನಿಗೆ ತೋರಿಸಿದನು
ಕೈರಿತಿಖಾನನೆಂಬವನು ॥ ೮೪

ಉತ್ತಮಾಶ್ವಗಳೆಂಟು ಸಾಸಿರ ಗಜವಿ
ಪ್ಪತ್ತು ಕಾಲಾಳಿನ ನೆರವಿ ।
ಹತ್ತು ಸಾವಿರ ವೆರೆದಿಹ ಫೌಜ ತೋರಿದ
ಮತ್ತಾಗ ಬಲವಂತ ಖಾನ ॥ ೮೫

ಬಿರುದಿನ ಡಾಲ ರಾವುತರೆಂಟು ಸಾವಿರ
ತುರಗವನೇರಿ ಯೈತರಲು ।
ಕರಿ ಮೂವತ್ತರಿಂದಿಹ ಫೌಜ ತೋರಿದ
ಧುರ ಧೀರ ಮುಸ್ತಫ ಖಾನ ॥ ೮೬

ತುರಗ ಸಾಸಿರವಾರು ಮದ ಕರಿ ಯಿಪ್ಪತ್ತು
ವರ ಧೀರರೆಂಟು ಸಾಸಿರದ ।
ಪರಿವಿಡಿಯುಹ ಫೌಜ ಖಾನಗೆ ತೋರಿದ
ನೆರೆ ಕಲಿ ಯುಬುದುಲ್ಲ ಖಾನ ॥ ೮೭

ಪ್ರಕಟಿತವಹ ತೇಜಿಗಳಾರು ಸಾವಿರ
ಸಕಲಾತಿಯ ರಂಜಿಕೆಯ ।
ನಿಕರದ ಕರಿ ಕಾಲಾಳು ಗೂಡಿದ ಫೌಜ
ಯಕಲಾಸ ಖಾನ ತೋರಿದನು ॥ ೮೮

ಹೊಳೆವ ತೇಜಿಗಳಾರು ಸಾವಿರ ಸುಭಟ ಸಂ
ಕುಳವೇಳೆಂಟು ಸಾವಿರವು ।
ಗುಳ ಬಿಗಿದಾನೆ ಹತ್ತೆಸೆದಿಹ ಫೌಜನಾ
ಬಲವಂತ ಸಹಜಿ ತೋರಿದನು ॥ ೮೯

ಬಡನೈದು ಸಾವಿರ ಹಯ ಕರಿ ಯಿಪ್ಪತ್ತು
ಬಿಡದೊಪ್ಪುತಿಹ ಕಾಲಾಳ ।
ಪಡೆಯೆಂಟು ಸಾವಿರ ಸಹ ಫೌಜ ತೋರಿದ
ಕಡುಗಲಿ ಯಂಬರ ಖಾನ ॥ ೯೦

ಮದ್ದಾನೆ ಹತ್ತು ಕುದುರೆ ಮೂರು ಸಾಸಿರ
ಹೊದ್ದಿದ ಕಾಲಾಳ ನೆರವಿ ।
ಉದ್ಧತವಾರು ಸಾವಿರವಿಹ ಬಲು ಫೌಜ
ಸಿದ್ಧರಹಿಮನು ತೋರಿದನು ॥ ೯೧

ಸೋಜಿಗವಹ ನವ ರತ್ನದಾಭರಣದ
ವಾಜಿ ಕಾಲಾಳನೆ ಬೆರೆದು ।
ಫೌಜ ಖಾನಗೆ ತೋರಿ ಮೆಚ್ಚಿಸಿ ಕೊಂಡನಾ
ಖಾಜಿ ಯೇನೆಂಬೆನಚ್ಚರಿಯ ॥ ೯೨

ಕುಣಿವ ಕುದುರೆ ನಾಲ್ಕು ಸಾವಿರ ಮದವೆದ್ದ
ರಣಗಲಿ ಯಾನೆ ಯಿಪ್ಪತ್ತು ।
ಗಣನೆ ಯಿಲ್ಲದ ಕಾಲಾಳ ಮೋಹರವನು
ಕ್ಷಣದೆ ವೇದೋಜಿ ತೋರಿದನು ॥ ೯೩

ಆಗಸಕಡರುವ ಕುದುರೆ ಸಾಸಿರ ಮೂರು
ಬೇಗದೆ ಮದಜಲ ಗರೆವ ।
ನಾಗವಿಪ್ಪತ್ತು ಕಾಲಾಳ ಮೋಹರವನು
ರಾಘವ ಪಂಡಿತ ತೋರ್ದ ॥ ೯೪

ಪುಂಕೊಂಬು ತೇಜಿ ಸಾಸಿರ ನಾಲ್ಕು ಕಾಲಾಳು
ಶಂಕಿಸಲಾರು ಸಾಸಿರದೆ ।
ಬಿಂಕದ ಕರಿ ಹತ್ತು ಕೂಡಿದ ಬಲು ಫೌಜ
ನಂಕುಶ ಖಾನ ತೋರಿದನು ೯೫

ಸೊಲ್ಲಾಪುರದ ಸಿದ್ದಿ ಮಲ್ಲಿಗೆ ಖಾನನು
ಬಲ್ಲಿದನದ್ದಮ ಖಾನ ।
ಸಲ್ಲಲಿತದ ಜಿಲಹರ ಖಾನರು ಫೌಜ
ನಿಲ್ಲದೆ ತೋರಿದರಾಗ ॥ ೯೬

ಮೂಮುದ ಖಾನ ಗಲಿಯ ಖಾನ ಸಮರನಿ
ಸ್ಸೀಮ ಫತ್ತೆಯ ಖಾನರುಗಳ ।
ಆ ಮಹಾ ನಸ್ಸಿಯಮುಲುಕರು ಖಾನಗೆ
ಪ್ರೇಮದೆ ಫೌಜ ತೋರಿದರು ॥ ೯೭

ನೆರೆ ಗುಜ್ಜರಾತಿ ಕನ್ನೋಜಿ ಖುರೇಸಾನಿ
ಬಿರುದಿನ ವರ ಪಟಾಣಿಗಳು ।
ಹರುಷದೆ ಲೆಕ್ಕವಿಲ್ಲದ ಫೌಜ ಬೇರೆ ಬೇ
ರುರುವಣಿಯಲಿ ತೋರಿದರು ॥ ೯೮

ಕೆಂಗ ಮನ್ನೆಯ ಕರ್ಣಾಟಕವಾಳುವ
ಜಂಗುಳಿ ನೃಪರ ಮಾರ್ಬಲವ ।
ಹಿಂಗದೆ ಖಾನನಿಗೊರೆದು ತೋರಿಸುವ ಬೆ
ಡಂಗನದೇನ ಬಣ್ಣಿಸುವೆ ॥ ೯೯

ಇದು ಹರುಪನ ಹಳ್ಳಿಯ ಬಲ ನೋಡಿಂ
ತಿದುವೆ ಸೊಂಡೂರ ಸು ಭಟರು ।
ಇದು ನೆರೆ ಗುಡಿಯ ಕೋಟೆಯ ಸೇನೆ ಯುಜ್ಜಿನಿ
ಯದಟರುಗಳ ಫೌಜ ನೋಡು ॥ ೧೦೦

ರಾಯ ದುರ್ಗದವರಿವರು ಹಟ್ಟಿ ಯೆಲ್ಲಪ್ಪ
ನಾಯಕರವರಿವರೀಗ ।
ಆಯುತ ವಡೆದ ಕುಂದುರುಪಿ ದೊಡ್ಡೇರಿಯ
ಜೇಯರ ಬಲವಿದೆ ನೋಡು ॥ ೧೦೧

ಹಿರಿಯೂರವರು ಮತ್ತಿಗಡದವರಿವರೀಗ
ವರ ಚಿಕ್ಕನಾಯಕ ಪುರದ ।
ಪರಿವಾರವಿದು ತುರುಗೆರೆಯ ಪಾಳ್ಯವಿದೆಂದು
ಹರುಷದೊಳಗೆ ತೋರಿಸಿದ ॥ ೧೦೨

ಇವರೀಗ ಬೇಲೂರವರು ಪಾಲುಪರೆಯುವ
ರಿವರೀಗ ನರಸಿಂಹ ಪುರದ ।
ಅವನೀಶನ ಮೂರ್ಬಲವಿದೆ ನೋಡೆಂದು
ವಿವರದೊಳಗೆ ತೋರಿಸಿದ ॥ ೧೦೩

ಬಳ್ಳಾಪುರ ಬಿಜ್ಜಾವರ ಕೋಳಾಲ
ಹೊಳವನಹಳ್ಳಿ ಮುಂತಾದ ।
ಇಳೆಯಾಣ್ಮರ ತಳತಂತ್ರವಿದಕೊ ನೋಡು
ಪ್ರಳಯದ ಶರಧಿಯಂದದಲಿ ॥ ೧೦೪

ಚಿಕಬಳ್ಳಾಪುರ ಬಾವಲೂರವರಿವ
ರಕಳಂಕ ಹೊಸಕೋಟೆಯವರು ।
ವಿಕಸಿತವಹ ಕಂಗೊಂದಿ ಮಾಸ್ತಿಯ ಭಟ
ನಿಕರವ ನೋಡು ನೀನೆಂದ ॥ ೧೦೫

ಎಂದು ಬಲವ ತೋರಿದ ಕೆಂಗ ಭೂಪನ
ಚೆಂದದೆ ಮನ್ನಿಸುತಾಗ ।
ಕುಂದದೆ ರಣಧೂಳಿ ಖಾನ ಖಾನರುಗಳ
ಬಂಧುರದಿಂದ ಮನ್ನಿಸಿದ ॥ ೧೦೬

ಬಳಿಕ್ಕೈವತ್ತು ಸಾವಿರ ವಾಜಿಗೂಡಿದ
ಬಳ ನಾಲ್ಕು ಲಕ್ಷ ಮೆದ್ದಾನೆ ।
ಘಳಿಲನೊಪ್ಪಿದುವೈನೂರು ಖಾನನ ಬಲು
ತಳತಂತ್ರವನೇ ವೇಳ್ವ ॥ ೧೦೭

ಸುತ್ತಣ ದೊರೆಗಳಂತಲ್ಲ ಮೈಸೂರವ
ರೆತ್ತಿದ ಬಿರುದಿನ ಭಟರು ।
ಕತ್ತಲೆ ಹಗಲಂತಿರುವುದವರಿಗೆ ನೀವು
ಜತ್ತಾಯತದೆ ತೆರಳೆಂದ ॥ ೧೦೮

ಬಟ್ಟೆಯೊಳಗೆ ಮೈ ಮರೆದೈದುವರ ಕೈ
ಸಟ್ಟುಗ ಚೂರಿ ಬಾಕಿನಲಿ ।
ಮೆಟ್ಟಿ ಮೂಗರಿದಡಗುವರಂತೆ ನೀವತಿ
ಕಟ್ಟೆಚ್ಚರದೊಳೈದಿರೆಂದ ॥ ೧೦೯

ಎಂದಾಗ ಖಾನ ಖಾನರಿಗೆಚ್ಚರ ಪೇಳಿ
ಮುಂದಣ ಕೂಳ ಪಾಳೆಯಕೆ ।
ಸಂದಿಸಿ ಕುದುರೆಯ ಕಾವಲ ಖಾನನ
ಲ್ಲಿಂದ ತೆರಳಲನುಗೈದ ॥ ೧೧೦

ಒಡನಾಗ ಬೇಹಿನವರು ಖಾನ ಬರುವುದ
ಗಡಿಯ ಮನ್ನೆಯರಿಗರುಹಲು ।
ಪೊಡವಿಪ ನರಸ ರಾಜೇಂದ್ರನ ದಳವಾಯಿ
ಯೊಡೆಗಟ್ಟಿದರು ಬೇಗ ಚರರ ॥ ೧೧೧

ಬಂದು ಚರರು ದಳವಾಯಿನಂಜೇಂದ್ರನ
ಸಂದಿಸಿ ಕೊಂಡು ಬೇಗದಲಿ ।
ನಿಂದಾಗ ಕರ ಪುಟಾಂಜಲಿಯಿಂದ ಬಿನ್ನೈಸು
ವಂದವನೇನ ಬಣ್ಣಿಸುವೆ ॥ ೧೧೨

ಜೀಯ ಚಿತ್ತೈಸು ಬಹುಳ ಬಲ ಸನ್ನಾಹ
ದಾಯುತದಲಿ ನಮ್ಮ ಮೇಲೆ ।
ಓಯಾರವರಿಯದೆ ಖಾನ ದಂಡೆತ್ತಿ ನಿ
ರ್ದಾಯದಿಂದೈತಂದನೀಗ ॥ ೧೧೩

ಬಂದೀಗ ರಾಮ ಗಿರಿಯ ದುರ್ಗದೊತ್ತಿನ
ಮುಂದಣ ತೊರೆಯ ದಂಡೆಯಲಿ ।
ನಿಂದನು ಖಾನ ಖಾನರ ಪೌಜು ಲೆಕ್ಕಿಸ
ಲಿಂದು ಶೇಷಿರಗಳವಲ್ಲ ॥ ೧೧೪

ಆವ ದಿಕ್ಕಿನಲಿ ನೋಡಲು ವಾಜಿ ವಾರಣ
ತೀವಿದ ಕಾಲಾಳ ಮೊತ್ತ ।
ಭೂ ವಳಯವ ಮುಸುಕಿದೆ ಕಾರ್ಯದಿತವನು
ದೇವರರಿವಿರೆಂದರವರು ॥ ೧೧೫

ಬಂದೊಡೇನಾಯ್ತು ನಿಮ್ಮಯ ದುರ್ಗಗಳನೆಚ್ಚ
ರಿಂದ ಕಾದಿರಿ ಯೆಂದವರ ।
ಅಂದು ಬೀಳ್ಕೊಟ್ಟು ತನ್ನೊಡೆಯನಿದ್ದೆಡೆಗೈ
ತಂದನು ದಳ ಪತಿ ಯಾಗ ॥ ೧೧೬

ದೊರೆ ರಾಯನರಮನೆಯೊಳ ಬಾಗಿಲ ಕಾವ
ಪಿರಿಯಳು ದಾದಿ ಯೊರ್ವಳನು ।
ಬರಿಸಿಕೊಂಡತಿ ಬೇಗದಲಿ ರಾಜ್ಯ ಕಾರಿಯ
ದಿರವ ಬಿನ್ನೈಸಿ ಕಳುಹಿದ ॥ ೧೧೭

ಮಿರುಪ ರತ್ನದ ಶಾರದಾ ಮಂಟಪದೊಳು
ವರ ಹಂಸ ತೂಳ ತಲ್ಪದಲಿ ।
ತರುಣಿ ರನ್ನೆಯರ ವಿದ್ಯಾ ವಿನೋದದೊಳಹ
ಧರಣೀಶನ ಕಂಡಳವಳು ॥ ೧೧೮

* ಪಿರಿದಾದ.

ಕಾಣುತ ಕರ ಕಮಲವ ಮುಗಿದವಳಾಗ
ಕ್ಷೋಣೀಶನ ಸಮ್ಮುಖದಲಿ ।
ಮಾಣದೆ ದಳವಾಯಿ ಬಿನ್ನೈಸಿ ಕಳುಹಿದ
ವಾಣಿಯ ನುಡಿದಳಿಂತೆಂದು ॥ ೧೧೯

ಚಿತ್ತೈಸು ರಿಪು ರಾಜ ತಿಮಿರ ಮಾರ್ತಂಡ ಭೂ
ಪೋತ್ತಮ ಕದನ ಪ್ರಚಂಡ ।
ಮೊತ್ತದ ಬಲ ಗೂಡಿ ರಣಧೂಳಿ ಖಾನ ದಂ
ಡೆತ್ತಿದ ನಮ್ಮ ಮೇಲಂತೆ ॥ ೧೨೦

ಹರಿಯಕ್ಷನ ಕೂಡೆ ಕದನವ ಗಂಟಿಕ್ಕಿ
ಕರಿ ಕಲಭವು ಜೀವಿಪುದೆ ।
ದೊರೆ ರಾಯ ನಿನ್ನ ಪ್ರತಾಪದೇಳ್ಗೆಗೆ ಮಿಕ್ಕ
ಧರೆಯರಿ ನೃಪರಿದಿರಹರೆ ॥ ೧೨೧

ದಳ ಪತಿ ಯಿಾ ಕಾರ್ಯದಿರವ ನಿನ್ನಯ ಪಾದ
ನಳಿನಕ್ಕೆ ಬಿನ್ನೈಸೆಂದು ।
ಬಳಿಕೆನ್ನ ಕಳುಪಿನ ಚಿತ್ತೈಸಿ ರಿಪು ಪಾಯ
ದಳವ ಭೂತಕೆ ಬಲಿ ಯಿಕ್ಕು ॥ ೧೨೨

ಬಳಿಕವಳಾಡಿದ ನುಡಿಯ ಕೇಳುತ ಕಂಬ
ದೊಳಗೆ ಪುಟ್ಟಿದ ನರ ಹರಿಯ ।
ಮುಳಿಸ ತಳೆದು ಮಿಾಸೆಗಳ ಮೇಲೆ ಬೆರಳಿಟ್ಟು
ಜಳಪಿಸಿದನು ಖಂಡೆಯವ ॥ ೧೨೩

ಒಡನೆ ಪ್ರತಾಪದೇಳಿಗೆಯ ಕೇಸರಿ ಯೆನೆ
ಕಡೆ ಗಣ್ಣುಗಳ ಕೆಂಪು ಸೂಸೆ ।
ಕುಡಿ ಮಿಾಸೆ ಕುಣಿಯಲು ಕೋಪದೆ ನರಸೇಂದ್ರ
ತಡೆಯದೈತಂದನೇ ವೇಳ್ಯ ॥ ೧೨೪

ಓಲಗದಬಲೆಯರನು ಬೀಳ್ಕೊಟ್ಟು ಚಿ
ಕ್ಕೋಳಗದವರೊಡಗೂಡಿ ।
ಲೀಲೆಯಿಂ ನರಸಿಂಹನಂತೈದಿದ ರತ್ನ
ಡಾಳಫ್ರೋಲಗದ ಚಾವಡಿಗೆ ॥ ೧೨೫

ನರಸ ರಾಜೇಂದ್ರನ ಕಲಿತನದಾಟೋಪ
ದಿರವನೀಕ್ಷಿಸಿ ಮನದೊಳಗೆ ।
ಹರುಷದೆ ದಳವಾಯಿ ಕರ ಕಮಲವ ಮುಗಿ
ದರಸನ ಕೆಲ ಸಾರ್ದನಾಗ ॥ ೧೨೬

ಒಡನಾಗ ಮನ್ನೆಯ ಮಂಡಲಿಕರುಗಳು
ಪೊಡವೀಶಗೆ ಕೈಯ ಮುಗಿದು ।
ಎಡ ಬಲವನು ಸಾರಿರಲಾ ಭೂಪತಿ
ನುಡಿದ ನಂಜೇಂದ್ರಗಿಂತೆಂದು ॥ ೧೨೭

ಬಂದನೆ ಖಾನ ತನ್ನೊಡೆಯ ಪಾತ್ಶ್ಯಾವುಗೆ
ಕುಂದಳ ಜಸ ಪಿರಿದಾಗಿ ।
ಮುಂದೈದುವುದನರಿಯದೆ ನಮ್ಮ ಕೆಣಕಿದ
ನೆಂದವನೀಶ ಗರ್ಜಿಸಿದ ॥ ೧೨೮

ಪಟ್ಟಣ ಮೊದಲಾದ ಗಡಿಯ ದುರ್ಗಂಗಳ
ಗೊಟ್ಟಿಸಿ ಸಂವರಣೆಗಳ ।
ಕಟ್ಟೆಚ್ಚರೊಳಿರಿಸೆಂದು ನಂಜೇಂದ್ರಗೆ
ಸೃಷ್ಟೀಶ್ವರ ನೇಮಿಸಿದ ॥ ೧೨೯

ಒಡೆಯನಾಜ್ಞಾಪನೆಯನು ಸಿರದೊಳು ತಾಳ
ಪೊಡವಿಪ ನಂಜರಾಜೇಂದ್ರ ।
ಬಿಡದಾಗ ಗಡಿ ದುರ್ಗ ಪಟ್ಟಣಕಾಕ್ಷಣ
ಕಡು ಸಂವರಣೆಗೊಳಿಸಿದ ॥ ೧೩೦

ಮುಗಿಲ ಮುಟ್ಟುವ ಕೋಟೆಯ ತೆನೆಯೆಡೆಯೆಡೆ
ಹೊಗರೆದ್ದ ದಸಿ ಮೊನೆ ಶೂಲ |
ಝುಗಝುಗಿಸುವ ಹೇರಿಟ್ಟ ಮುರುಳುಗೈಗ
ಳುಗುಳುತಿರ್ದುವು ಕೆಂಗಿಡಿಗಳ || ೧೩೧

ಭೂರಿ ಭೀಕರ ವರಾಹನ ತಲೆ ಸಿಲುಕಿಸಿಟ್ಟ
ಪೂರೈಸ ವಿಷದ ಚೀಕೊರ್ಳವೆ |
ಮಾರಿ ಮೊಗದ ಡೆಂಕಣಿ ಮುಸೆದಲಗುಗ
ಳ್ತೋರಿದುವತಿ ಭಯಾಂಕುರವ || ೧೩೨

ಕರಿಯ ಮದ್ದಿನ ಪೊಟ್ಟಣ ಕಟ್ಟಿದಂಬಿನ
ಹೊರೆ ಪುರಿ ಮರಳನ ರಾಶಿ |
ಅರೆದ ಸಾಸವೆ ಗೊಡ ಕಾದಡವಿಯ ಬಹು
ಹರವಿಗಳೊಪ್ಪಿದುವಾಗ || ೧೩೩

ಚೀಳು ಬಾಣಗಳ ರಾಟಳ ವೃಪ್ಪಿನ ತಿತ್ತಿ
ಸಾಲು ವಿಡಿದ ಕವೆ ಗೋಲು |
ಬೇಳುವೆಗಳ ಭಸ್ಮದ ಕೊಪ್ಪರಿಗೆಯು
ಸಾಲೊಪ್ಪಿದುವು ದುರ್ಗದೊಳಗೆ || ೧೩೪

ಎತ್ತುಗಲ್ಲುಗಳೇರುಗಲ್ಲು ಕವಣೆಗಲ್ಲು
ಬಿತ್ತರದರೆಗಲ್ಲುಗಳು |
ಮೊತ್ತದಸಿಯ ಕಲ್ಲು ಕೊರಳಿಗೆ ಬೀರುವ
ಜೊತ್ತಿಗೆ ಮೆರೆದುವರ್ತಿಯಲಿ || ೧೩೫

ಸಾಲು ವಿಡಿದ ಕೊತ್ತಳ ಕುಟ್ಟಿಮಗಳ
ಮೇಲೊಪ್ಪುವ ಶತಘ್ನಿಗಳು |
ಕಾಲನ ದಂಡದಂದದ ಕೈ ಗುದಿಗೆಯು
ಪೇಳಲಳವೆ ದುರ್ಗದೊಳಗೆ || ೧೩೬

ಚೋರ ಕಂಡಿಗಳಂಬು ಕಂಡಿಗಳೊಳು ಗುರಿ
ಯೇರಿಸಿ ಮೆರೆವ ಕೈಗೋವಿ ।
ನೀರ ತುಂಬುವ ದಿಡ್ಡಿಯೊಳ ಸುರಂಗ ದ್ವಾರ
ತೋರಿತು ಕಣ್ಗೆ ಕೌತುಕವ ॥ ೧೩೭

ದುರವ ಜಯಿಸುವೊಡೆ ಬಳಿಕ ತನ್ನಯ ಪ್ರಭು
ಗರುವ ಮನ್ನೆಯ ಮಂಡಲಿಕರ ।
ಕರಿಸಿಯಲ್ಲಲ್ಲಿಗೆ ಕಾಹ ಬಲಿದು ಸಂ
ವರಣೆ ಗೈಸಿದನಧಿಕದೊಳು ॥ ೧೩೮

ಅಗಳಾಳ್ವೇರಿ ಕೊತ್ತಳ ಹುಲಿ ಮುಖದೊಳು
ಜಗಳಗಂಕೆಯ ಬಲ್ಲ ಭಟರ ।
ಮಿಗೆ ಬಲಿದಾಗ ದುರ್ಗದ ಸಂ ವರಣೆಯ
ಬಗೆಯ ಬಿನ್ನೈಸಿದ ನೃಪಗೆ ॥ ೧೩೯

ಪ್ರಳಯ ಕಾಲದ ರುದ್ರ ಮೂರ್ತಿಯ ಕೋಪದು
ಜ್ಜ್ವಲನವೊ ಕಂಬದಿಂದೊಗೆದ ।
ಸುಲಲಿತ ನರಸಿಂಹನ ಶೌರ್ಯದೇಳಿಗೆ
ಯುಳವೆನೆ ದುರ್ಗವೊಪ್ಪಿದುದು ॥ ೧೪೦

ಹೊಡೆವ ಹೆಬ್ಬರೆ ಜಾವ ಗಹಳೆ ತಂಬಟೆಗಳ
ಕಡುರವ * ವ್ರೊಳರು ಗುಡಿಗೆಯ ।
ಜಡಿವ ದನಿಗಳಿಂದ ತಳವಾರರುಗಳ
ಪಡೆ ತಿರುಗುವುದು ದುರ್ಗದಲಿ ॥ ೧೪೧

ಕರದಲ್ಲಿ ಪಿಡಿದ ಗುರಾಣಿ ಕೈಗತ್ತಿಯ
ಗರುವ ಮನ್ನೆಯರ ಸಂದಣಿಯ ।
ಪರಿವಿಡಿಯಿಂದಲಾ ದುರ್ಗ ನೋಳ್ಪರ ಕಣ್ಗೆ
ಪಿರಿದು † ಭೀತಿಯನು ಪುಟ್ಟಿಸಿತು ॥ ೧೪೨

* ವಲರು. † ಭೀಕರವ.

ಹಗಲು ಪಂಜಿನ ಬಿರುದಿನ ಸುಭಟರು ನೆರೆ.
ಜಗಜಂಪಿನ ಸತ್ತಿಗೆಯು ।
ವಿಗಡ ವಿಗ್ರಹ ವೀರರುಗಳಾ ದುರ್ಗವ
ಮಿಗೆ ಕಾದಿಹರೇ ವೇಳ್ವ ॥ ೧೪೩

ಕರಡಿಯು ಮೈ ಜೋಡು ಕಾರ್ಪಾಸ ಕುಪ್ಪಸ
ಬಿರುದಿನ ತೋಳ ಪಾವಡೆಯು ।
ದುರ ಗಲಿಗಳು ದುರ್ಗದಾಳ್ವೇರಿಯ ಮೇಲೆ
ಪರಿ ಶೋಭಿಸಿದರುಬ್ಬಿನಲಿ ॥ ೧೪೪

ಚಿನ್ನದ ಹರಡೆ ಬೆಳ್ಳಿಯು ಕಟ್ಟು ಮುತ್ತುಗ
ಳುನ್ನತ ಕುಚ್ಚಿನಿಟ್ಟಿಗಳ ।
ಸನ್ನಾಹದ ಬಲು ಭಟರು ಕೋಟೆಯುನ
ತ್ಯುನ್ನತದಲಿ ಕಾದಿಹರು ॥ ೧೪೫

ಜವ ದಾಡೆ ಜಲ್ಲಿಯು ಬಿಲ್ಲು ಕೈಗತ್ತಿಯು
ಬವರಿಗರತಿ ಹರುಷದಲಿ ।
ತವಕದೊಳಾ ದುರ್ಗದ ಕೋಟೆಯು ಸುತ್ತ
ಸು ವಿಲಾಸದೊಳೊಪ್ಪಿಹರು । ೧೪೬

ಬರೆಗಳನುಗಿದ ಖಂಡೆಯು ಕೈ ಸುರಗಿಯು
ಸೊರಟಿಯು ಕತ್ತಿ ಬಾಕುಗಳ ।
ಪರಿವಿಡಿಗಾರರು ಪುರದಾಳುವೇರಿಯೊ
ಳ್ಚರಿಸುತಿರ್ದರು ಮೊತ್ತದಿಂದ ॥ ೧೪೭

ಜಾಡಿಯು ಹರಿಗೆ ಸಿಂಗಾಡಿ ಕರಾಚೂರಿ
ನೀಡುವ ಬಾಳುಗತ್ತಿಗಳ ।
ಪಾಡು ಪಂಥದ ಸು ಭಟರು ಕೋಟೆಯುನಾಗ
ರೂಢಿಯೊಳಗೆ ಕಾದಿಹರು ॥ ೧೪೮

ನರ ರೂಪ ತಾಳಿದ ನರ ಸಿಂಹ ಮೂರ್ತಿಯು
ಪುರವ ನಿಟ್ಟಿಸಿ ನೋಡುವೊಡೆ ।
ನೆರೆ ಮುಖ್ಯಗಳೊಳು ಪದಿನೈದು ಕಣ್ಣೊಳ್
ಗರಿದು ಮಿಕ್ಕವರ ಪಾಡೇನು ॥ ೧೪೯

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯು ಸಂಧಿ
ಮುದದ ಸು ಧರ್ಮಾನುಬಂಧಿ ॥ ೧೫೦

೧೧ನೆಯ ಸಂಧಿ ಸಮಾಪ್ತಂ

# ಹನ್ನೆರಡನೆಯ ಸಂಧಿ.

## ಶ್ರೀರಂಗ ಪಟ್ಟಣದ ಮುತ್ತಿಗೆ

ಸೂಚನೆ ॥ ಧರೆಯೊಳಧಿಕ ಶ್ರೀ ರಂಗ ಪಟ್ಟಣವನು
ದುರ ಗಲ ಖಾನ ಮುತ್ತಿದನು ॥

ಪುಂಡರೀಕನ ತನುಜನ ತಾಯು ತಮ್ಮನ
ಮಂಡೆಯೊಳಾಂತ ಮಹಿಮನ ।
ಹೆಂಡತಿಯನುಜನ ಸನ್ಮಾನವ ಕೈ
ಕೊಂಡನೊಡೆಯು ಸಲಹೊಲಿದು ॥ ೧

ಇತ್ತಲಾ ರಣ ಧೂಳಿ ಖಾನ ತನ್ನಯ ಫೌಜ
ನೊತ್ತಾಯದಲಿ ಕೂಡಿಕೊಂಡು ।
ಮುತ್ತಿಗೆ ಯಿಕ್ಕುವ ಭರದಲಿ ಶ್ರೀರಂಗ
ಪತ್ತನಕೈತಂದನಾಗ ॥ ೨

ತುರಗ ನಿಕರ ಸಾಲು ದೆರೆ ಮದ ಗಜಗಳು
ಗಿರಿ ಡಾಳಿಪ ಚಾಮರಾಳಿ ।
ಮೆರೆವ ಶಫರಿ ಬೆಳ್ಗೊಡೆ ನೊರೆ ಯೆನೆ ಬಲ
ಶರಧಿ ಯೈತಂದುದೇ ವೇಳ್ವ ॥ ೩

ಮೊರೆವ ವಾದ್ಯದ ರವ ಘನ ಗರ್ಜನೆ ಕೈಯ
ಸುರಗಿಯ ತೊಳಪು ಮಿಂಚಾಗೆ ।
* ಕರಿಗಳ ಕರಣದ ಜಲ ಸರಿ ಕಾರ್ಗಾಲ
ದಿರವೆನೆ ಸೇನೆ ನಡೆದುದು ॥ ೪

---

* ಕರಿಗಜ.

ತಾರಕಾಸುರನ ಪಡೆಯೊ ಮಹಿಷಾಸುರ
ನಾರುಭಟೆಯೊ ಮೊಬ್ಬಲವೊ ।
ವೀರ ಜಂಭನ ಸೈನ್ಯದಂತೆ ಖಾನನ ಬಲ
ಮೇರೆ ಯಿಲ್ಲದೆ ಬಂದುದಾಗ ॥ ೫

ಪಡೆಯ ಕಾಲ್ಧೂಳಿಗಾಗ ಗಿಡು ಬಳ್ಳಿ ಪೆಮ್ಮರ
ಪುಡಿಯಾಗೆ ಬಲು ವಾದ್ಯ ರವಕೆ ।
ಒಡೆಯಲು ಬ್ರಹ್ಮಾಂಡ ಚೆನ್ನಪಟ್ಟಣದ ಮುಂ
ಗಡೆ ಬೀಡಿಳಿದನೇ ವೇಳ್ವ ॥ ೬

ಗಜ ಗಳ ಬೃಂಹಿತ ತುರಗ ಹೇಷಾ ರವ
ನಿಜ ಪದಾತಿಯು ಬೊಬ್ಬಾಟ ।
ತ್ರಿ ಜಗವ ಬೆದರಿಪ ಪ್ರಳಯಾಂಬುಧಿರವ
ವ್ರಜಕಿದು ಗುರು ವಾದುದಾಗ ॥ ೭

ಒಕ್ಕಲುದೆಗೆದಿಹ ಪುರ ಪಳ್ಳಿ ಗ್ರಾಮವ
ಹೊಕ್ಕು ಸೂರೆಯನಾಡಿ ಕೊಳುತ ।
ಉಕ್ಕಂದದ ಬಲ ಸಹ ಬಂದು ಪಟ್ಟಣ
ಕಿಕ್ಕಿದನಾ ಮುತ್ತಿಗೆಯ ॥ ೮

ದಾಳಿಯ ಕುದುರೆಯಬ್ಬರದ ಕಾಲ್ಧೂಳಿಯು ಕೆಂ
ದೂಳುಗಳಭ್ರಕುಪ್ಪರಿಸೆ ।
ಪೇಳಲಳವೆ ಬಲ ನಾಲ್ಕು ದೆಸೆಯೊಳಾಗ
ಪಾಳೆಯವಿಳಿದುದುಬ್ಬಿನಲಿ ॥ ೯

ದ್ವಾರಾವತಿಯನು ಸಾಲ್ವನ ಬಲ ಬಂದು
ಸೇರಿ ಮುತ್ತಿಗೆ ಯಿಕ್ಕಿದಂತೆ ।
ಶ್ರೀರಂಗ ಪಟ್ಟಣವನು ಖಾನ ಮುತ್ತಿಕೊಂ
ಡಾರುಭಟೆಯನೆ ಲವೇಳ್ವ ॥ ೧೦

ರವಿ ಮಂಡಲವನು ತಮೋರಾಶಿ ದೀಪದ
ಸು ವಿಲಾಸವ ಪತಂಗಗಳು ।
ಕವಿವ್ರೋಲು ಖಾನನ ಬಲ ಪಟ್ಟಣವ ಮುತ್ತಿ
ದವಗಡವನು ಪೇಳ್ವನೇನ ॥ ೧೧

ಐವತ್ತು ಸಾವಿರ ಕುದುರೆ ಯೈನೂರಾನೆ
ತೀವಿದ ಬಲ ನಾಲ್ಕು ಲಕ್ಷ ।
ಭಾವಿಸೆ ಖಾನನ ಬಲ ಪಟ್ಟಣವ ಮುತ್ತಿ
ಹಾವಳಿಯನು ಮಾಡಿದುದು ॥ ೧೨

ಬಳಿಕೊಂದು ಲಕ್ಷ ಮೀರೆಯ ಕರ್ಣಾಟಕ
ಬಲ ಸಹ ಪೂವಲಪನುಮ ।
ಘಳಿಲನೆ ಖಾನನ ನೇಮದೆ ತೆಂಕಣ
ಹೊಳೆಯ ತಡಿಯ ಬೀಡ ಬಿಟ್ಟ ॥ ೧೩

ಸೊಕ್ಕಿದ ಮೊರಸರ ಬೇಲೂರವರ ಬಲ
ಲೆಕ್ಕವಿಲ್ಲದೆ ನಡೆತಂದು ।
ಗಕ್ಕನೆ ಖಾನನ ನೇಮದೆ ಪಾಳೆಯ
ವಿಕ್ಕಿತು ಬಡಗ ದಿಕ್ಕಿನಲಿ ॥ ೧೪

ಎಲ್ಲಿ ನೋಡಲು ಗುಡಿಗೂಡಾರ ಹಯ ಶಾಲೆ
ಯೆಲ್ಲಿ ನೋಡಲು ಗಜ ಗೇಹ ।
ಎಲ್ಲಿ ನೋಡಲು ನಾನಾ ವಾದ್ಯದ ಬಲು
ಘಲ್ಲಣೆ ಯಲ್ಲದೊಂದಿಲ್ಲ ॥ ೧೫

ತಳ ಮುಳು ವೇಲಿ ಮರದೆ ಪಿರಂಗಿಗಳಿಗಾ
ಗಳವಟ್ಟ ತವಗ ಸುರಂಗ ।
ಬಳಸಿ ಯೊಪ್ಪಿದುವಾ ಕೋಟೆಯಗಳ ಹೊರ
ವಳೆಯದೊಳತಿ ಚೋದ್ಯವಾಗಿ ॥ ೧೬

ಇಡುವ ಪಟ್ಟೆಲು ಮೇಲಕೇಳುವ ಬಾಣಗ
ಳೊಡನೆ ಸಿಂಗಾಡಿಯಂಬುಗಳು ।
ಕಡು ಛೀತ್ಕೃತಿಯೆಸೆದುವು ನೋಳ್ಪರಿಗಾಗ
ಬಿಡದಚ್ಚರಿ ಪುಟ್ಟುತಿರಲು ॥ ೧೭

ನಿಟಿಲಾಕ್ಷನ ಕಣ್ಗಿಚ್ಚಿನ ಕಿಡಿಗಳಾ
ಭರ್ಟಿಯಂತೆ ಭೋರ್ಗರೆದಾಗ ।
ಘಟಿ ಶತಘ್ನಿಗಳ ಗುಂಡುಗಳುರೆ ಮೇಲಕೆ
ಪುಟವೆದ್ದು ನಡೆದುವೇ ವೇಳ್ವ ॥ ೧೮

ಕೋಟೆ ಕೊತ್ತಳಗಳ ತಾಗಿ ಕೆಂದೂಳ್ಸಹ
ದಾಟಿ ಪಾರುವ ಶತಘ್ನಿಗಳ ।
ಮೀಟಿನ ಗುಂಡುಗಳೆಸೆದುವುಳ್ಕಾ ಪಾತ
ದಾಟವ ತೋರಿಸುತಾಗ ॥ ೧೯

ಇಡುವ ತುಪಾಕಿಯ ಗುಂಡುಗಳೆಲ್ಲಕೆಂ
ಪಿಡಿದೈದಿ ಬರುವ ಬಲ್ಭಾವ ।
ಒಡನಾಗ ಸಂಜೆದಾರಗೆ ಮೂಡಿ ಭೂಮಿಗೆ
ಸಿಡಿದೈತರುವೊಲೊಪ್ಪಿದುದು ॥ ೨೦

ಚಕೂಳಿಯ ಭಟರ ಕೈಯಿಂದ ಭೋರ್ಗರೆದೈದಿ
ಮೇಲಕ್ಕೈದುವ ಬಾಣಗಳ ।
ದಾಳಿಯೊಪ್ಪಿದುದಾ ಗಗನ ಮಂಡಲವನು
ಕೀಲಿಸಿಕೊಂಡದೇ ವೇಳ್ವ ॥ ೨೧

ಕಡುಹಿನ ಸಿಡಿಲ್ಕಡುಹಿನ ಸಲಿಗೆಗಳಾಗ
ಳೊಡನಂಬರಕೇಳ್ವಂತೆ ।
ಬಿಡದೆ ಸುಭಟರೆಚ್ಚ ಸಿಂಗಾಡಿಯಂಬುಗಳ್
ನಿಡು ರಭಸದೊಳೈದಿದುವು ॥ ೨೨

ಊರೊಳಗಣ ಪಟು ಭಟರ ಪಟಲ ಗುಂಡು
ಘೋರನೈತಹ ಬಾಣಗಳು ।
ಸೇರಿದ ಹೊರ ಪಾಳಯದ ಮಂದಿಯನಾಗ
ಗೋರುಗೊಳಿಸಿದುವದ್ಭುತದೆ ॥ ೭೩

ಚಲದಂಕ ರಿಪು ವಾರಿಧಿ ಬಡಬಾನಲವ
ವಿಲಸಿತ ಕೀರ್ತಿ ಪ್ರತಾಪ ।
ಜಲಜ ಬಾಂಧವ ತೇಜ ಕಂಠೀರವೇಶ್ವರ
ಬಲವ ನೋಡುವುದ್ಯೈತಂದ ॥ ೭೪

ಪುರವ ಮುತ್ತಿದ ಜರಾಸಂಧನ ಬಲವನು
ಮುರ ವೈರಿ ನಿಟ್ಟಿಸುವಂತೆ ।
ದೊರೆ ರಾಯ ನರಸ ರಾಜೇಂದ್ರ ಸಂತಸದಲಿ
ತುರುಕರ ನೋಡಲೈತಂದ ॥ ೭೫

ಮುತ್ತಿದ ರಿಪು ಹಿರಣ್ಯಾಕನ ಮಾರ್ಬಲವನು
ಮತ್ತಾಗ ನರ ಸಿಂಹ ಮೂರ್ತಿ ।
ಅರ್ತಿಯಿಂ ನೋಳ್ಪಂತೆ ನರಸ ರಾಜೇಂದ್ರಭೂ
ಪೋತ್ತಮ ನೋಡಲೈತಂದ ॥ ೭೬

ಬಿರುದಿನ ಡಾಲು ಡಮಾಮಿ ನಾನಾ ವಾದ್ಯ
ದುರು ಘೋಷಣೆ ದೆಸೆ ದೆಸೆಯ ।
ನೆರೆ ತೀವೆ ಮಕರ ಟೆಕ್ಕೆಯದ ಸಾಲುಗಳಿಂದ
ಸಿರಿಧರನೊಲು ನಡೆತಂದ ॥ ೭೭

ಎಡ ಬಲದೊಳಗೆ ಸಿಂಗರದಂಗನೆಯರು
ಪಿಡಿದು ಚಾಮರವ ಢಾಳಿಸಲು ।
ಕುಡು ವಿಲ್ಲ ಸಮ ರೂಪ ಕಂಠೀರವೇಂದ್ರ ಬ
ಲ್ಪಡಗರದೊಳಗೈತಂದ ॥ ೭೮

ಹೊಳವ ಮುತ್ತಿನ ಸತ್ತಿಗೆ ಸಾಲುಗೊಂಡಿಹ
ತಳತಳಿಪಾಲವಟ್ಟಗಳ ।
ನೆಳಲೊಳು ವೀರುಪಾವಡೆಯ ಸಂಭ್ರಮದಿಂದ
ಲಿಳೆಯಾಣ್ಮ ನಗುತೈತಂದ ॥ ೨೯

ನವರತ್ನದ ಪಲ್ಲಕ್ಕಿಯ ದೀಧಿತಿ
ತವೆ ಮುಸುಕಲು ದಿಕ್ತಟವ ।
ಭುವನೇಶ ಚಿಂತಾಮಣಿ ನಗುತೇರಿಯು
ತ್ಸವದೊಳೈತಂದನೀ ವೇಳ್ವ ॥ ೩೦

ನೊಸಲ ಕತ್ತುರಿಯ ತಿಲಕದ ಮನ್ನೆಯರುಗ
ಳೆಸೆದಿರಲೆಡ ಬಲದೊಳಗೆ ।
ವಸುಧೇಶ ಕುಲ ಕಲಶಾಬ್ಧಿ ಚಂದ್ರಮ ರಂ
ಜಿಸುತೈತಂದನುಬ್ಬಿನಲಿ ॥ ೩೧

ಚಿನ್ನದ ಹರಡೆ ಬೆಳ್ಳಿಯ ಕಟ್ಟಿನ ಸಾಲಿ
ನುನ್ನತ ನೇಜಯುದವರ ।
ಸನ್ನಾಹದ ಸಂಭ್ರಮದಲ್ಲಿ ನಡೆತಂದ
ಚೆನ್ನಿಗ ನರಸ ರಾಜೇಂದ್ರ ॥ ೩೨

ಹರಿದಿಯುರ್ಗರಿಪಿ ಕಳಿಕನ ಹೂವಿನ ಕುಚ್ಚ
ನುರುವ ಸಬಳದಾಳುಗಳ ।
ನೆರವಿಯೊಳತಿ ಸಂಭ್ರಮದೆ ಕಂಠೀರವ
ನರಸ ರಾಜೇಂದ್ರನೈತಂದ ॥ ೩೩

ಉಡಿಯ ಪಟ್ಟೆಯ ದಟ್ಟಿ ಬೆನ್ನ ಜಲ್ಲಿಯ ವೀರ
ರೆಡಬಲದೊಳಗೈತರಲು ।
ಪೊಡವಿಪ ನರಸ ರಾಜೇಂದ್ರ ಮುತ್ತಿದ ಖಳ
ಪಡೆಯ ನೋಡುವೊಡೈತಂದ ॥ ೩೪

* ಹರಿಬಿಯುಗಂಪಿ.

ಕಿವಿಯೊಳೊಪ್ಪುವ ನಾಗರ ಪಣಿ ಹೊಸಹೊನ್ನ
ಸವಡಿ ದಾರದ ಕೊರಳ್ಗಳ ।
ನವ ರತ್ನ ಭೂಷಣದಾಳ್ಗಳ ಮೇಳದೆ
ಭುವನೇಶ್ವರನೈತಂದ ॥ ೩೫

ಹಳದಿಯ ತೋಳ ಪಾವಡೆ ಹೀಲಿಯ ಜಲ್ಲಿ
ಬೆಳಗಿಡುವಾಭರಣಗಳ ।
ತುಳಿಲಾಳ್ಗಳ ಮೇಳದೊಳಗೆ ಭೂಭುಜ ಕುಲ
ತಿಲಕನೈತಂದನೇ ವೇಳ್ವ ॥ ೩೬

ಕರಗ ಕಾಳಾಂಜಿ ಹಡಪ ಗಿಂಡಿ ಚಮರವ
ಧರಿಸಿದೂಳಿಗದವರಾಗ ।
ಹರುಷದೊಳದಿರೊಳೊಪ್ಪಿರೆ ಪೂರ್ಣ ಶಶಿಯಂತೆ
ದೊರೆ ರಾಯ ನಗುತೈತಂದ ॥ ೩೭

ಮಂಗಳಾಷ್ಟಕ ಬಿರುದುಗಳ ಕೊಂಡಾಡುವ
ತುಂಗ ಪಾಠಕರ ಮೇಳದಲಿ ।
ಕಂಗೊಳಸುವ ಬಾಗಿಲ ಸೆಜ್ಜೆಯ ಮೇ
ಲಂಗಜ ರೂಪ ರಂಜಿಸಿದ ॥ ೩೮

ಬಳಿಕ ಕಂಠೀರವ ರಾಜೇಂದ್ರ ಚೌ ದೆಸೆ
ಯೊಳಗೆ ರಾಜಿಪ ಖಳ ಬಲವ
ತುಳುವದೆ ದಿಟ್ಟಿಸಿ ತನ್ನಾಪ್ತ ಮಂತ್ರಿಯ
ಗಳಲನೆ ಬೆಸಗೊಂಡ ನಗುತ ॥ ೩೯

ತಾರಕಾಸುರನಂತೆ ಹಯ ಮೋಹರದೊಳಹ
ನಾರುಸಿರೆಲೆ ಮಂತ್ರೀಶ ।
ಕಾರುಣ್ಯ ಮೂರ್ತಿ ಚಿತ್ತೈಸಿವ ಸಂಗರ
ಶೂರನು ರಣಧೂಳಿ ಖಾನ ॥ ೪೦

ಧುರ ಧೀರ ರಣಧೂಳಿ ಖಾನನ ಪೌರುಷ
ದಿರುವಿಕೆಯನು ನೋಡಿ ನಗುತ ।
ಸರ ಲಸು ಕರತನವಿತ್ತಾಗ ಪಾತ್ಸ್ಯಾವು
ಪಿರಿದು ಮನ್ನಿಸಿ ಕಳುಹಿದನು ॥ ೪೧

ಆತನಿಗತಿ ಹಿತವೆನಿಸಿ ಸಕಲ ಬಲ
ವ್ರಾತಕೆ ದಳ ಪತಿಯಾಗಿ ।
ಪ್ರೀತಿಯಿಂದ್ಯೆದಿದ ರಣಧೂಳಿ ಖಾನ ಪ್ರ
ಖ್ಯಾತನಿವನು ಚಿತ್ತ್ರೈಸು ॥ ೪೨

ಬಿರುದಿನ ಡಾಳ ಹಯದ ಮೊತ್ತದಲಿ ತಮಾ
ಸುರನಂತೆ ಮೆರೆವವನಾರು ।
ನರಸಿಂಹ ಸ್ವಾಮಿ ಚಿತ್ತ್ರೈಸು ಖಾನನ ಪಿತ
ಗರುವ ಪರಾತನೆಂಬವನು ॥ ೪೩

ದುಸ್ತರ ಬಲ ವಾರಿಧಿಯ ಮಧ್ಯದಲಿ ಪ್ರ
ಹಸ್ತನಂದದೆ ಬಹನಾರು ।
ಹಸ್ತಿ ವರದ ಸುತ ಸಮ ರೂಪ ಚಿತ್ತ್ರೈಸು
ಮುಸ್ತಪ ಖಾನನೆನಿಪನು ॥ ೪೪

ಮಹಿಷಾಸುರನಂತೆ ಬಹು ವಾಜಿಗಳ ಸ
ನ್ನಹದೆ ಬರುವನಾರು ಮಂತ್ರಿ ।
ವಿಹರಿಪ ನರ ನಾರಾಯಣ ಚಿತ್ತ್ರೈಸು
ಸಹಜ ಯೆನಿಸಿಕೊಳ್ವನೀತ ॥ ೪೫

ಬಿಳಿಯ ಸತ್ತಿಗೆಯ ತೇಜಿಗಳ ಮೋಹರದೊಳು
ಖಳ ಶುಂಭನಂತಿಹನಾರೊ ।
ಇಳೆಯಾಣ್ಮ ನರಸ ರಾಜೇಂದ್ರ ಚಿತ್ತ್ರೈಸಿವ
ಬಲವಂತ ಖಾನನೆನಿಪನು ॥ ೪೬

ಮುಕುರ ಕಟ್ಟಿದ ವದನದ ಸಾಲ ಕುದುರೆಯ
ನಿಕರದೊಳಗೆ ಬಹನಾರೊ ।
ಅಕಳಂಕ ರೂಪ ಕಂಠೀರವ ರಾಜೇಂದ್ರ
ಯಕಲಾಸ ಖಾನನೆಂಬವನು ॥ ೪೭

ಮುಂಕೊಂಬ ಹಯ ಮೋಹರದೆ ಶಂಬರಾಸುರ
ನಂಕಿತದಲಿ ಬಹನಾರೊ ।
ಪಂಕಜ ಸಖ ತೇಜ ಚಿತ್ತೈಸಿವನೀಗ
ಳಂಕುಶ ಖಾನನೆಂಬವನು ॥ ೪೮

ಯುದ್ಧೋನ್ಮತ್ತ ರಕ್ಕಸನಂದದೆ ಬಲ
ಮಧ್ಯದೆ ಬಹನಾರು ಮಂತ್ರಿ ।
ಉದ್ಧತ ಶೂರ ಕಂಠೀರವ ರಾಜೇಂದ್ರ
ಸಿದ್ಧರಹಿಮನುವೆನಿಪನು ॥ ೪೯

ಮೂಕ ದಾನವನಂತೆ ಬಲ ಮಧ್ಯದೊಳಗಿಹ
ಭೀಕರನಾರೊ ಮಂತ್ರೀಶ ।
ಭೂ ಕಾಂತ ನರಸ ರಾಜೇಂದ್ರ ಚಂದ್ರಮ ಕೇಳ
ಯೇಕೋತಸಾರಥಿ ಯಿವನು ॥ ೫೦

ಬಿರುದಿನ ಸಾಲುಗುದುರೆಯ ಮೋಹರದೊಳು
ಬರುವವ ನಾರು ಮಂತ್ರೀಶ ।
ನರ ರೂಪ ನರ ಸಿಂಹ ಮೂರ್ತಿ ಚಿತ್ತೈಸಿವ
ಧುರ ಧೀರನದ್ದಮ ಖಾನ ॥ ೫೧

ಕಲಹಕಂಜದೆ ಮುಂದುವರಿದೈತಹ ಬಲು
ಚಲದಂಕನಾರೊ ಮಂತ್ರೀಶ ।
ಸುಬಲಿತ ಸೋಮ ವಂಶಾಬ್ಧಿ ಚಂದ್ರಮ ಕೇಳು
ಛಲಹರ ಖಾನನೆಂಬವನು ॥ ೫೨

ಉನ್ನತ ಹಯ ಮೋಹರದಲಿ ಪೌಂಡ್ರಕನಂತೆ
ಸನ್ನಾಹದಲಿ ಬಹನಾರೊ ।
ಚನ್ನಿಗ ನರಸ ರಾಜೇಂದ್ರ ಚಿತ್ತೈಸಿವ
ನನ್ನೆಯಮುಲಕನೆನಿಪನು ॥ ೫೩

ತುಂಬಿದ ಶುಭ್ರ ವಾಜಿಗಳ ಮಧ್ಯದೆ ಖಳ
ಜಂಭನಂದದೆ ಬಹನಾರೊ ।
ಕುಂಭಿನೀ ಪತಿ ನರಸೇಂದ್ರ ಚಿತ್ತೈಸಿವ
ನಂಬರಖಾನನೆಂಬವನು ॥ ೫೪

ಕಾಲನೇಮಿಯ ತೆರದಲಿ ಶುಂಡಾಲದ
ಮೇಲಿಹನಿವನಾರೊ ಮಂತ್ರಿ ।
ಭೂಲೋಲ ವಂಶ ಚಿಂತಾಮಣಿ ಚಿತ್ತೈಸು
ಕಾಲೆಯಖಾನನೆಂಬವನು ॥ ೫೫

ಉಬ್ಬುಗುದುರೆಗಳ ಸಾಲ ಮೋಹರದಲಿ
ಯುಬ್ಬರಿಸುವನಿವನಾರೊ ।
ಕೊಬ್ಬಿದ ರಿಪು ಕೋಳಾಹಳ ಚಿತ್ತೈ
ಸಬ್ದುಲ್ಲಖಾನನೆನಿಪನು ॥ ೫೬

ಸಾಮಜವೇರಿ ಸತ್ತಿಗೆಯ ನೆರಳಿನಲ್ಲಿ
ಧೂಮಾಕ್ಷನಂತಿಹನಾರೊ ।
ಭೂಮಿಗೆ ಪ್ರತ್ಯಕ್ಷ ನರ ಸಿಂಹ ಚಿತ್ತೈಸು
ಮಾಮುದ್ದ ಖಾನನೆಂಬವನು ॥ ೫೭

ಜರಿ ಟೋಪಿ ದಗಲೆ ಜೋಡಿನ ರಾವುತರ ಮುಂ
ದುರವಣಿಸುವನಿವನಾರೊ ।
ಅರಿ ವಾರಿಧಿ ವಡಬಾನಲ ಚಿತ್ತೈಸು
ದುರಗಲಿ ಘಾಟಿಯಖಾನ ॥ ೫೮

ಸೂಳೈಪ ನಾನಾ ಬಗೆಯ ವಾದ್ಯದ ಬಲು
ಮೇಳದೆ ಬಹನಾರೊ ಮಂತ್ರಿ ।
ಭೂಲೋಲ ನರಸ ರಾಜೇಂದ್ರ ಚಿತ್ತೈಸಿವ
ಗಾಲಿಯ ಖಾನನೆಂಬವನು ॥ ೫೯

ಆಗಸಕಡರುವ ಕುದುರೆಯ ಮೊತ್ತದೆ
ಬೇಗದೆ ಬಹನಾರೊ ಮಂತ್ರಿ ।
ಭೋಗ ಸುರೇಂದ್ರ ಪರಾಕಿಲ್ಲದೆ ಕೇಳು
ರಾಘವ ಪಂಡಿತನಿವನು ॥ ೬೦

ಹಂಮಿನ ಕುದುರೆಯ ಮೋಹರದೊಳಗತಿ
ಸುಮ್ಮಾನದಲಿ ಬಹನಾರೊ ।
ಕಮ್ಮಗಣೆಯನ ಸದೃಶ ರೂಪ ಚಿತ್ತೈಸು
ದುರ್ಮತಿಯೆನಿಪ ವೇದೋಜಿ ॥ ೬೧

ನೇಜಯ ಸಿಂಗಾಡಿ ಪಿಡಿದ ರಾವುತರ ಸ
ಮಾಜದೆ ಬಹನಿವನಾರೊ ।
ರಾಜಶೇಖರ ಕಂಠೀರವ ಚಿತ್ತೈಸು
ಖಾಜೆಯನೆನಿಸಿಕೊಂಬವನು ॥ ೬೨

ಪಲ್ಲವ ಸತ್ತಿಗೆ ನೆಳಲೊಳಗೊಪ್ಪುವ
ಬಲ್ಲಿದನಿವನಾರೊ ಮಂತ್ರಿ ।
ಸಲ್ಲಲಿತಾಂಗದ ನರಸಿಂಹ ಚಿತ್ತೈಸು
ಮಲ್ಲಿಗೆ ಖಾನನೆಂಬವನು ॥ ೬೩

ಉರವಣಿಸುವ ಸಾಲ ತೇಜಿಯ ಬಲುಮೋಹ
ಹರದ ಮಧ್ಯದೆ ಬಹನಾರೊ ।
ಗರುವ ಪ್ರತಾಪ ರಾಯನು ಚಿತ್ತೈಸಿವ
ದೊರೆಗಳ ನೊಸಲ ತಿಲಕವೆ ॥ ೬೪

ಕಟ್ಟಿದ ಡೊಣೆಯಂಬು ಕೈಯ ಸಿಂಗಾಡಿಯ
ಗಟ್ಟಿಯರಿವರಾರೊ ಮಂತ್ರಿ ।
ಸೃಷ್ಟೀಶ್ವರ ಕಂಠೀರವ ಚಿತ್ತೈಸು
ಪಟ್ಟಾಣಿಯುತುಳ ರಾವುತರು ॥ ೬೫

ಕನ್ನೋಜಿಗಳು ಪಂಡಿತರು ಖುರಾಸಾನಿ
ಮನ್ನೆಯ ಗುಜ್ಜರಾತಿಗಳು ।
ಉನ್ನತ ವಡ್ಡಿಯ ರಾವುತರಿವರೀಗ
ಚೆನ್ನಿಗ ನರಸರಾಜೇಂದ್ರ ॥ ೬೬

ಹಳದಿಯ ಬಿಳಿಯ ಕುಂಕುಮ ವರ್ಣ ಪಚ್ಚೆಯ
ಸಲೆ ಡಾಳ ತುರಗಗಳಿಂದ ।
ತಳತಂತ್ರದೊಳಗೆ ರಾಜಿಸುತಿಹನಿವನೀಗ
ಇಳೆಯಾಣ್ಮ ಪೂವಲ ಹನುಮ ॥ ೬೭

ಸುರಗಿ ಸಬಳ ಖಂಡೆಯ ಹೇರಿಟ್ಟಿಯ
ಬಿರುದಿನ ಭಟರ ಮೇಳದಲಿ ।
ಭರದಲಿ ಮುಂಬರಿದೆಸೆವವರಿವರೀಗ
ಮೊರಸು ಮನ್ನೆಯರು ಚಿತ್ತೈಸು ॥ ೬೮

ಐವತ್ತು ಸಾವಿರ ಕುದುರೆ ಯೈನೂರಾನೆ
ತೀವಿದ ಬಲ ನಾಲ್ಕು ಲಕ್ಷ ।
ಭಾವಿಸೆ ಚೌ ದೆಸೆಯಲಿ ಬೀಡ ಬಿಟ್ಟಿದೆ
ದೇವರವರು ಚಿತ್ತೈಸು ॥ ೬೯

ಕಡಲ ಜಲೌಘ ಮೇರೆಯ ಮೀರಿ ಮೆರೆದೊಡೆ
ಕೊಡನ ಮಗನಿಗದು ಘನವೆ ।
ಬಿಡದೆ ದೇವರ ಪರಾಕ್ರಮದವಾಗ್ನಿಗೆ ಬಲ
ವೊಡನೀಗ ಕಾನನವೈಸೆ ॥ ೭೦

ಸಲೆ ಸಾಳುವನ ವೈರದಲಿ ಬೆಳ್ಳಕ್ಕಿಯು
ಬಳಗ ಪೊಳ್ಪುಜ್ಜುಗವೇನು ।
ಆಳವರಿಯದೆ ನಿನ್ನ ಕೆಣಕಿದವರು ಗಾಳಿ
ಯಲೆಗೊಡ್ಡಿದ ದೀಪವೈಸೆ ॥ ೭೧

ಕಂಠೀರವ ರಾಜನಿದಿರಲಿ ಕರಿಗಳ
ಬಂಟಂಗ ಮೆರೆವುದೆ ಸ್ವಾಮಿ ।
ಪಂಠಿಸಿ ನಿಮಗಿದಿರಹರು ದುಷ್ಕೀರ್ತಿಗ
ಳಂಟಿ ನಿರ್ನಾಮರಾಗುವರು ॥ ೭೨

ಎಂದು ಪೌರುಷವ ಬಣ್ಣಿಸಿದ ಮಂತ್ರಿಗಳಗಾ
ನಂದದಿಂದುಡುಗೊರೆಯಿತ್ತು ।
ಚಂದದೆ ತನ್ನಯ ದಳ ಪತಿ ಮೊಗ ನೋಡೆ
ನಿಂದು ಕೈ ಮುಗಿಯುತಿಂತೆಂದ ॥ ೭೩

ದೇವರ ಪರಿಯಂತೇಕಿವರಿಗೆ ನಿಮ್ಮ
ಸೇವಕ ನಾನಿರುತಿರಲು ।
ತೀವಿ ಕೊಂಡಿಹ ಖಳ ಬಲವ ಸಂಹರಿಸುವ
ಭಾವವ ಚಿತ್ತೈಸೆಂದ ॥ ೭೪

ರಘು ನಾಥನ ಸೇವಕ ಸುಗ್ರೀವಸಂ
ಯುಗದೊಳು ರಾವಣ ಪಡೆಯ ।
ಚಿಗುಳಿದುಳಿದ ತೆರದಲಿ ಕೊಲ್ವೆ ವೀಳ್ಯವ
ಮಿಗೆ ಪಾಲಿಸೆಂದು ಕೈ ಮುಗಿದ ॥ ೭೫

ಎಂದು ನುಡಿದ ದಳ ಪತಿ ವಾಕ್ಯಕೆ ಮನ
ಬಂದು ಸಂತೋಷವ ತಾಳಿ ।
ಅಂದು ಮನ್ನೆಯರನೀಕ್ಷಿಸೆ ಕೈ ಮುಗಿಯುತಿಂ
ತೆಂದು ಪೌರುಷವ ನುಡಿದರು ॥ ೭೬

ಹರನ ಕುಮಾರ ತಾರಕನ ಬಲವ ಹೊ
ಕ್ಕುರವಣಿಸುವ ತೆರದಿಂದ ।
ಮುರಿಯಲಿರಿವೆ ತುರುಕರನೆಂದು ನುಡಿದನು
ಹರದ ಪುರದ ಮನ್ನೆಯನು ॥ ೭೭

ಅನುವರಕ್ಕೈದಿದ ಖಾನರ ಪೌರುಷ
ದನುವ ಮುರಿದು ರಿಪು ಬಲವ ।
ಚಿನ ಕಡಿಗೈದೆಬ್ಬಿಸುವೆನೆಂದು ನುಡಿದನು
ಚಿನ ಪಟ್ಟಣದ ಮನ್ನೆಯನು ॥ ೭೮

ಮುತ್ತಿಗೆಯಿಕ್ಕಿದ ತುರುಕ ಬಲವಮುರಿ
ಯೊತ್ತಿ ಯೋಡಿಸುವೆನೆಂದಾಗ ।
ಸತ್ಯಾಗಾಲದ ಮನ್ನೆಯ ಕೈ ಮುಗಿ
ಯುತ್ತ ಬಿನ್ನೈಸಿದ ನೃಪಗೆ ॥ ೭೯

ಸುಮುಖದೆ ಭೀಮ ಕೌರವ ತಳತಂತ್ರವ
ಕ್ರಮದೊಳು ಸಂಹರಿಪಂತೆ ।
ನಿಮಿಷದೆ ಖಳರ [ಕೊಲ್ಲುವೆನೆಂದು] ಕೋಟೆಯ
ಸಮರ ವಿಕ್ರಮ ಕೈ ಮುಗಿದ ॥ ೮೦

ಕದಳಿಯ ವನವ ಕಾಡಾನೆ ಹೊಕ್ಕಂದದೆ
ಸದೆದೆಬ್ಬಿಸಿ ಖಳ ಬಲವ ।
ಮುದವ ಬೀರುವೆನೆಂದು ಚೆನ್ರಾಯ ಪಟ್ಟಣ
ದಧಟ ಮನ್ನೆಯ ಕೈ ಮುಗಿದ ॥ ೮೧

ನರಸಿಂಹ ಮೂರ್ತಿ ಚಿತ್ತೈಸು ಮುತ್ತಿಗೆ ಯಿಟ್ಟ
ತುರುಕರ ಬಲವ ಸಂಹರಿಸಿ ।
ಬಿರುದ ಮೆರೆವೆನೆಂದು ಬಿನ್ನೈಸಿದನಾಗ
ತುರುಗೆರೆ ಯಾಳ್ವ ಮನ್ನೆಯನು ॥ ೮೨

ಪುರವ ಮುತ್ತಿಗೆಯಿಟ್ಟ ತುರುಕರ ಬಲವನು
ತರಿದೊಟ್ಟಿ ಬಿರುದಿನಶ್ವಗಳ ।
ಭರದಲಿ ಪಿಡಿದು ದೇವರಿಗೊಪ್ಪಿಸುವೆನೆಂದ
ಪಿರಿಯ ಪಟ್ಟಣದ ಮನ್ನೆಯನು ॥ ೮೩

ಸೃಷ್ಟೀಶ್ವರ ಬಿನ್ನಹ ಬಂದು ಮುತ್ತಿಗೆ
ಯಿಟ್ಟ ತುರುಕರ ಮಾರ್ಬಲವ ।
ಕುಟ್ಟಿ ಕೋಳಾಹಳಿಸುವೆನೆಂದು ನುಡಿದನು
ಪಟ್ಟಣದಧಿಕಾರಿ ಯಾಗ ॥ ೮೪

ಕಂಗೊಳಿಸುವ ವೀರಭದ್ರ ದಕ್ಷನ ಬಲ
ಸಂಘವ ಸದೆವಂದದಲಿ ।
ಹಿಂಗದೆ ಖಳರ ಸೀಳುವೆನೆಂದು ಮಳವಳ್ಳಿ
ತುಂಗ ವಿಕ್ರಮ ಬಿನ್ನವಿಸಿದ ॥ ೮೫

ಭೋಗ ಸುರೇಂದ್ರ ಚಿತ್ತೈಸೀ ಖಳ ಬಲ
ಸಾಗರವನು ಕುಂಭಜನ ।
ಆಗಮದಂದದೆ ಬತ್ತಿಪೆ ಕಳುಹೆಂದ
ನಾಗಮಂಗಲದ ಮನ್ನೆಯನು ॥ ೮೬

ಭೂಸುರ ನೃಪ ಸಿಂಹ ಚಿತ್ತವಿಸು ಖಳ ತುಷ
ರಾಶಿಯ ಪ್ರಳಯ ಮಾರುತನು ।
ಬೀಸಿ ಯೆಬ್ಬಿಸುವೋಲು ತೂರುವೆನೆಂದಾಗ
ಮೈಸೂರಧಿಕಾರಿ ನುಡಿದ ॥ ೮೭

ಹೇಳಲಳವೆ ಕಂಠೀರವ ನರಸೇಂದ್ರ
ನಾಳುವ ಸಕಲ ರಾಜ್ಯಗಳ ।
ಮೇಳದ ಮನ್ನೆಯರುಗಳು ನುಡಿವ ಶೌರ್ಯ
ದೇಳಗೆಗಳನೇನನೆಂಬೆ ॥ ೮೮

ಇಂತಪ್ಪ ದುರಗಲಿಗಳ ಮನ್ನಿಸುತ ಭೂ
ಕಾಂತ ಕಂಠೀರವನಿರಲು ।
ಮುಂತಾಗ ರಣಧೂಳಿ ಖಾನನಟ್ಟಿದ ಭಟ
ರಂತರಿಸದೆ ಬಂದರೊಲಿದು ॥ ೮೯

ಬಂದಾಗ ಖಡ್ಗಾಗ್ರ ಹಸ್ತದೆ ಭೂಪಗೆ
ನಿಂದು ಸಲಾಮನು ಮಾಡಿ ।
ಮುಂದೆ ಕೈವಾರಿಸಿ ಬಿರುದ ಕೊಂಡಾಡಿದ
ರಂದು ಕಂಠೀರವೇಶ್ವರನ ॥ ೯೦

ದೊರೆರಾಯ ಸಂಗರ ಶೂರ ಸದ್ಗುಣ ಸಾರ
ಸ್ಮರರೂಪ ಕೀರ್ತಿ ಕಲಾಪ ।
ನರಸರಾಜೇಂದ್ರ ಬಿನ್ನಹ ಖಾನ ನಮಗೀಗ
ಲೊರೆದ ಕಾರ್ಯವ ಚಿತ್ತೈಸು ॥ ೯೧

ಬಳಿಕ ತನ್ನೊಡೆಯ ಪಾತ್ಸ್ಯಾವಿನಪ್ಪಣೆಯಿಂದ
ಮುಳಿದು ಕರ್ಣಾಟರಾಜ್ಯಗಳ ।
ಸೆಳೆದೆವು ನಿಮ್ಮ ಪೌರುಷದ ವಾರ್ತೆಯ ಕೇಳಿ
ತಳೆದೆವು ಬಲು ಹರುಷವನು ॥ ೯೨

ಬಿಡದೆ ನಿಮ್ಮೊಳು ಸ್ನೇಹ ವೆರಸಿ ಕಪ್ಪವ ಕೊಂ
ಡೊಡನೆ ನಿಮ್ಮಯ ಬಲ ಸಹಿತ ।
ನಡೆವೆವು ದಿಗ್ವಿಜಯಕೆ ಮುಂದೀಗ ನ
ಮ್ಮೊಡೆಯನಾಡಿದನೀ ಮಾತ ॥ ೯೩

ಕೇಳಿದನಾ ಖಾನನ ಭಟರೆಂದ ವಾ
ಚಾಳಿಕ ಕಠಿಣ ವಾಕ್ಯಗಳ ।
ತಾಳಿ ಮುಗುಳ್ನಗೆಯನು ಬಲು ಪೌರುಷ
ದಾಳಾಪದೊಳಿಂತೆಂದ ॥ ೯೪

ಕಪ್ಪವ ಕೊಡೆವು ತಮ್ಮೊಳು ಸ್ನೇಹಕೆ ನಾವು
ಬಪ್ಪವರಲ್ಲ ಮುಂದೆಮ್ಮ ।
ದರ್ಪವ ನೋಡಲು ಕದನಕೆ ಬರಹೇಳು
ತಪ್ಪದೆ ತಳತಂತ್ರ ಸಹಿತ ॥ ೯೫

ಸುತ್ತಣ ಬಡ ದೊರೆಗಳ ಕಂಡೆಂದದ
ಲೊತ್ತರಿಸುವೆವೆಮ್ಮನೆಂದು ।
ಮುತ್ತಿಗೆ ಯಿಕ್ಕಿದನೇ ತನ್ನ ಪೌರುಷ
ಬತ್ತಿತು ಹೋಗೆಂದ ಭೂಪ ॥ ೯೬

ಎಂದಾ ರಣಧೂಳಿ ಖಾನನ ಭಟರಿಗೆ
ತಂದು ಕೊಡಿಸಿ ಯುಡುಗೊರೆಯ ।
ಅಂದವರನು ಕಳುಹಿಸಿಯುರಮನೆಗೈ
ತಂದ ಕಂಠೀರವ ರಾಜ ॥ ೯೭

ಬಡನಾಗ ಕಾವಲು ಕಟ್ಟಳೆ ಪುರದೊಳು
ಬಿಡದೆಚ್ಚರೊಳಗಿರಲೆಂದು ।
ಪೊಡವೀಶ್ವರ ದಳ ಪತಿಗೆ ನೇಮವನಿತ್ತು
ಕಡು ಹರುಷದೊಳೊಪ್ಪುತಿರ್ದ ॥ ೯೮

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದ ಸು ಧರ್ಮಾನುಬಂಧಿ ॥ ೯೯

೧೨ನೆಯ ಸಂಧಿ ಸಮಾಪ್ತಂ

---

## ಹದಿಮೂರನೆಯ ಸಂಧಿ

### ಪಟ್ಟಣದ ಲಗ್ಗೆಯ ಸನ್ನಾಹ

ಸೂಚನೆ || ಬಿಡದೆ ಪಟ್ಟಣವ ಲಗ್ಗೆಗೆ ಬಿಡ ಬೇಕೆಂದು
ಕಡು ಸನ್ನಹದೆ ಖಾನನೆಸೆದ ||

ಇತ್ತಲಾ ಭಟರುಗಳ್ ರಣಧೂಳಿ ಖಾನನಿ
ಗೆತ್ತಿ ಮುಗಿದು ಕರಾಂಬುಜವ |
ಹತ್ತಿರೆ ಸಾರಲವರ ಮೊಗ ನೋಡುತ
ಮತ್ತಾಗ ಖಳನಿಂತೆಂದ || ೧

ಏನಾ ದೊರೆಯಭಿಪ್ರಾಯ ನಮ್ಮೊಳು ಸಂ
ಧಾನವೊ ಸಮರದ ಬಗೆಯೊ |
ಮಾನಸದಿರವನಾ ಪುರದ ಬಲುಹಿನ ಸಿ
ದಾನವ ನಮಗುಸಿರೆಂದ || ೨

ದಳಪತಿ ಮನ್ನೆಯ ಸುಭಟರು ಮನದೊಳ
ಗೆಳಸಿ ಕೊಂಡಿಹ ಕಾರ್ಯವೇನು |
ಬಳ ಹೊಕ್ಕು ನಮ್ಮೊಳಗೊಂದಾಗಿರುವುದುಂಟೊ
ತಿಳುವದುಸಿರಿ ನೀವೆಂದ || ೩

ಜೀಯ ಪಟ್ಟಣದಧಿಪತಿ ಕಂಠೀರವ
ರಾಯನ ಛಲ ಪರಾಕ್ರಮದ |
ಆಯುತವನು ಕೊಂಡಾಡಲು ಸಾವಿರ
ಬಾಯ ಶೇಷನಿಗಳವಲ್ಲ || ೪

ಆತನ ಮುಖ ಪದ್ಮದಲಿ ಸಿರಿ ಭುಜದೆ ಪ್ರ
ಖ್ಯಾತ ಜಯಾಂಗನೆ ನೆಲಸಿ ।
ಪ್ರೀತಿಯಿಂ ಸ್ಥಿರವಾಗಿ ಮೆರೆದಿಹರಪಗಿದಿ
ರಾಂತು ನಿಲ್ವರೆ ನೃಪರುಂಟೆ ॥ ೫

ಬಿಡದಾ ನೃಪನ ಭಾವವ ನೋಡೆ ಕಂಭದ
ಲೊಡೆದು ಮೂಡಿದ ನರ ಹರಿಯು ।
ಕಡು ಶೌರ‍್ಯ ಕಾಂತಿ ರಾಜಿಸುತಿದೆ ಕದನವ
ತೊಡಕಿ ಜೀವಿಪರುಂಟೆ ಜಗದೆ ॥ ೬

ಪೊಡವಿಪ ಪಿಡಿದ ಖಂಡೆಯ ಕಾಲಾಗ್ನಿಯ
ಕುಡಿ ನಾಲಗೆಯಂತೆ ಕಿಡಿಯು ।
ಗಡಣಗಳನು ಸೂಸುತಲಿದೆಯುವನೊಳು
ತೊಡಕು ಸಲ್ಲದು ನಿಮಗೆಂದ ॥ ೭

ವಸುಧೇಶನ ನೇಜಯದಲಗಿನೊಳಾಗ
ಪಸರಿಸಿ ಪ್ರಭೆ ಮೇಲಕ್ಕೇಳೆ ।
ಬಿಸಜ ಬಾಂಧವನೆಂದಂಜಿ ಕತ್ತಲೆ ದೆಸೆ
ದೆಸೆಗೋಡಿದುದೇ ವೇಳ್ವೆ ॥ ೮

ಇಳೆಯಧಿಪನ ಕೈಯ ಚಿಕ್ಕ ಕಠಾರಿಯ
ಬೆಳಗ ನಿಟ್ಟಿಸಿ ಭಯದಿಂದ ।
ಕುಲಿಶಾಯುಧವೆಂದು ಕುಳಿರು ವೆಟ್ಟನ ಸುತ
ಜಲ ನಿಧಿಯೊಳು ಮುಳುಗಿಹನು ॥ ೯

ಧರಣಿಪ ಬಿಡದೆಚ್ಚ ಸಿಂಗಾಡಿಯ ಬಾಣ
ಗರಿ ಸಹ ನಭಕೇಳಲಾಗ ।
ಗರುಡನೆಂದಂಜಿ ಸುರೇಂದ್ರ ಸುಧೆಯ ದಿವ್ಯ
ಸರಸಿಗೆ ಕಾಹ ಬಲಿದನು ॥ ೧೦

ಇಂತಪ್ಪ ದೇವತಾ ಮೂರ್ತಿಯೊಡನೆ ನಮ್ಮ
ಪಂಥ ಪಾಡುಗಳು ಮೆರೆವುದೆ ।
ಸಂತವ ಮಾಡಿಕೊಂಡೊಂದಾಗಿಹುದ
ತ್ಯಂತ ಸಮ್ಮತ ಜಗಕರಸ ॥ ೧೧

ಎಂದುರೆ ನುಡಿದ ಭಟರ ಮೇಲೆ ಕೋಪಿಸು
ತಂದವರನು ಬೀಳ್ಕೊಟ್ಟು ।
ಕುಂದದೊಪ್ಪುವ ಮಿಸುನಿಯ ಗೂಡಾರಕೆ
ಬಂದನಾ ಖಾನನೇ ವೇಳ್ಯ ॥ ೧೨

ಪರಿಮಿತಕಾಗ ತನ್ನಾಪ್ತ ಖಾನರುಗಳ
ಕರಿಸಿಯಾಲೋಚನೆ ಗೈದು ।
ಪುರವನೊತ್ತರಿಸಿ ಮುತ್ತಿಗೆಯಿಕ್ಕಿ ಸೆಳೆವುದು
ಪಿರಿದಹ ಕಾರ್ಯವಿದೆಂದ ॥ ೧೩

ಎನುತಾಗ ಖಾನ ಖಾನರಿಗೆ ಕರ್ಪೂರ ವೀಳ್ಯ
ಕನಕ ಭೂಷಣಗಳನಿತ್ತು ।
ಮನಕತಿ ಹರುಷವ ಮಾಡಿಯವರುಗಳ
ಘನ ಬೀಡಿಕೆಗೆ ಬೀಳ್ಕೊಟ್ಟ ॥ ೧೪

ಆ ಸಮಯದೆ ರವಿ ಮಂಡಲವಪರಾಂಬು
ರಾಶಿಗೈದಲು ತಮವಾಗ ।
ಬಾಸಣಿಸಿತು ಜಗವನು ಶಶಿ ಪೂರ್ವಾದ್ರಿ
ಪಾಸರೆಯೊಳಗೆ ರಂಜಿಸಿದ ॥ ೧೫

ಮೆರೆದುವು ಖಾನ ಖಾನರುಗಳೋಲಗದಲಿ
ಸು ರುಚಿರ ದೀವಟಿಗೆಗಳು ।
ಮೆರೆವ ನಾನಾ ವಾದ್ಯದ ರವದೊಳಗಾಗ
ಪಿರಿದು ಪಾಳೆಯವ ಮಾಡಿದರು ॥ ೧೬

ಗುರು ತಲ್ಪ ಗಮನನ ರಾಜ ತೇಜವನಾಗ
ಪರಿದಿಟ್ಟು ಪದ್ಮಾತ್ಮ ಬಂಧು ।
ದೊರೆಯಾಗಿ ಪೂರ್ವಾದ್ರಿ ಸಿಂಹಾಸನದಲಿ
ಮೆರೆದನು ಕಿರಣದಾಳ್ಗೂಡಿ ॥ ೧೭

ಆ ಸಮಯದೆ ಖಾನ ಬಳಗಾಗ ರೋಷಾ
ವೇಶಾನ್ವಿತ ತಾನಾಗಿ ।
ಸೂಸುತ ಕಣ್ಕಿಡಿಯನು ಖಾನರ ಕೈ
ವೀಸಿ ಕರೆಯುತಿಂತೆಂದ ॥ ೧೮

ಕೊಡದೆ ಸಂತವ ನಮ್ಮೊಡನೆ ಕಾದುವೆನೆಂದು
ಕಡುಗಲಿಯಾಗಿ ಮೈಸೂರ ।
ಪೊಡವಿಪನಿಹನುವೊತ್ತರಿಸಿ ಮುತ್ತಿಗೆಯಿಕ್ಕಿ
ತುಡುಕಿ ನೀವೆಂದು ನೇಮಿಸಿದ ॥ ೧೯

ಜೀಯ ಪಸಾದವೆನುತ ಖಾನ ವಜ್ಜೀರ
ರಾಯುತದಲಿ ಬಲ ಸಹಿತ ।
ಭೋಯೆನುತುರುಬಿ ನಾಲ್ದೆಸೆಯಲಿ ಬಲು ಪೌಜ
ವಾಯುವರಿತು ಮೂಡಿದರು ॥ ೨೦

ಲಲಿತ ಜೀಮೂತ ಮಂಡಲ ಘೋರ್ಗರೆದಾಗ
ನಳಿನ ಸಖನ ಮುತ್ತುವಂತೆ ।
ಕಳಕಳ ಮಸಗೆ ಖಾನನ ಬಲ ಚೌದೆಸೆ
ಯೊಳಗೆ ಮುತ್ತಿದುದು ಪಟ್ಟಣವ ॥ ೨೧

ಸುರ ಗಿರಿಯನು ಸುತ್ತ ಮುತ್ತಿದ ಮಂಜಿನ
ಸರವಿಯ ತೆರದಿಂದಲಾಗ ।
ಕರಿ ಕಾಲಾಳು ತುರಗದಳ ಘೋಯೆಂ
ದುರುಬಿ ಮುತ್ತಿದುದು ಪಟ್ಟಣವ ॥ ೨೨

ಬೊಬ್ಬೆಯಬ್ಬರ ವಾದ್ಯದ ಬಲು ಘಲ್ಲಣೆಗಳಿಂ
ದುಬ್ಬೇಳ್ವ ಪದ ರಜದಿಂದ ।
ಸಬ್ಬ ಸನ್ನಾಹದಲೈತಂದು ಖಳ ಬಲ
ವುಬ್ಬಿ ಮುಸುಕಿತೇ ವೇಳ್ವ ॥ ೨೩

ಕೇಳದನಾ ಬಲು ಬಲವೊತ್ತರಿಸಿ ಬಂ
ದೇಳಗೆಯಾಳಾಪವನು ।
ಭೂ ಲೋಲ ಕಂಠೀರವ ರಾಜ ತಳತಂತ್ರ
ವೋಳದೊಳಗೆ ನಡೆತಂದ ॥ ೨೪

ಎತ್ತಿದ ಸತ್ತಿಗೆ ಪೊತ್ತದ ಬಿತ್ತರ
ವಿತ್ತರದೊಳಗೊಪ್ಪುತಿರಲು ।
ಮುತ್ತಿದ ಪತ್ತಿಯು ಕತ್ತಿಯು ಬೆಳಗುಗ
ಳೊತ್ತರಿಸಿದುವಿನ ಪ್ರಭೆಯು ॥ ೨೫

ಅಂಬರವಿಂಬಿಲ್ಲ ಮುಂಬಲಿ ತುಂಬಿದ
ಹೊಂಬೆಸೆಯಾಲವಟ್ಟಲಿಗೆ ।
ಜಂಭಾರಿಗಿಂಬಾದ ಕುಂಭಿಯುಂದದ ಮದ
ಸ್ತಂಬೇರಮಗಳೈದಿದುವು ॥ ೨೬

ತುರುಗಗಳುಗವಣೆ ಶರಧಿಯ ತೆರೆಗಳ
ಭರವೆಸದಂತೊಪ್ಪಿ ಮೆರೆಯೆ ।
ಬಿರುದಿನ ಸುರಗಿಯ ಕರದಲಿ ಧರಿಸಿದ
ಪರಿವಾರವೆರಸಿಯೈತಂದ ॥ ೨೭

ಹರಿಯ ಹಸ್ತಾಗ್ರ ಸುದರ್ಶನ ಖಳರ ಮೇ
ಲುರವಣಿಸುವ ತೆರದಂತೆ ।
ನರಸ ರಾಜೇಂದ್ರ ಚಂದ್ರನ ತಳತಂತ್ರ ಸಂ
ಗರಕ್ಕೈತರುವುದೇ ವೇಳ್ವ ॥ ೨೮

ರಾಮ ಚಂದ್ರಮನ ದಿವ್ಯಾಸ್ತ್ರ ರಾವಣ ಬಲ
ಸ್ತೋಮವ ಪುಗುವಂದದಲಿ ।
ಭೂಮಿಪ ಕಂಠೀರವೇಂದ್ರನ ಬಲ ಸಂ
ಗ್ರಾಮಕ್ಕೈದಿದುದುಬ್ಬಿನಲಿ ॥ ೨೯

ಪಶು ಪತಿ ಮುಳಿದೆಚ್ಚ ಶರ ತ್ರಿ ಪುರವನಾಗ
ಮುಸುಕಿ ಮುಂಗೆಡಿಸುವಂದದಲಿ ।
ವಸುಧೇಶನ ಪಡೆ ನಡೆದುದು ಕಳಕಳ
ಮಸಗಲೆಣ್ದೆಸೆಯೊಳೀ ವೇಳ್ವ ॥ ೩೦

ಕರಿಗಳ ಟೆಕ್ಕೆಯ ಮೊರೆವ ವಾದ್ಯದ ರವ
ಪರಿವಾರದುರವಣೆಯಾಗ ।
ತರಣಿಗೆ ದೆಸೆಗೆ ಧಾರಿಣಿಗೆ ಬಳ್ಭಯಗಳ
ಪರಪಿದುದೇನ ಬಣ್ಣಿಸುವೆ ॥ ೩೧

ಶಾಲಾ ವೀಧಿಯೊಳಗೆ ಸಂದಣಿಪ ಕಾ
ಲಾಳುಗಳಾಯುಧವೆಳಗು ।
ಪೇಳಲಳವೆ ಹೊರ ಪಾಳೆಯದರ ಕಣ್ಣ
ಕೀಲಿಸಿ ಕದುಕದಿರಿದುವು ॥ ೩೨

ದುರ ಗಲಿಗಳ ಗರ್ಜನೆ ಹಯ ಹೇಷಿತ
ಕರಿಗಳ ಬೃಂಹಿತವಾಗ ।
ಹೊರ ಪಾಳೆಯದರ ಮನಕೆ ಭೀತಿಯನಿತ್ತು
ಕರಗಿಸಿದುವು ಧೈರ್ಯವನು ॥ ೩೩

ಕಂಡನು ದೊರೆ ರಾಯನ ರಿಪು ನೃಪ ವೇ
ತಂಡ ಕಂಠೀರವೇಶ್ವರನ ।
ಗಂಡುಗಲಿಗಳ ಮೊತ್ತವ ಹನುಮನ ಬೆಸ
ಗೊಂಡನಾ ಖಾನನಿಂತೆಂದು ॥ ೩೪

ಹೊಳೆವ ಕಟ್ಟಾಣಿಮುತ್ತಿನ ಭೂ ಚಕ್ರದ
ನೆಳಲೊಳೊಪ್ಪುವ ದೊರೆ ಯಾರು ।
ಎಲೆ ಖಾನ ಕೇಳು ಕರ್ಣಾಟ ಚಕ್ರೇಶ್ವರ
ಚಲದಂಕ ನರಸ ರಾಜೇಂದ್ರ ॥ ೩೫

ಗರುಡ ಹನುಮ ಮಕರದ ಟೆಕ್ಕೆಯ ಡಾಲ
ಬಿರುದಿನ ದೊರೆ ರಾಯನಾರೊ ।
ದುರಗಲಿ ಖಾನ ಪರಾಕಿಲ್ಲದೆ ಕೇಳು
ನರ ರೂಪ ನರಸಿಂಹ ಮೂರ್ತಿ ॥ ೩೬

ಅಂತೆಂಬರ ಗಂಡನೆಂದು ಕೊಂಡಾಡಿಪ
ಪಂತದ ದೊರೆ ಯಿವನಾರೊ ।
ಕಂತು ಸನ್ನಿಭ ರಿಪು ಭೂಮೀಶ್ವರರೆದೆ
ಗುಂತ ಕಂಠೀರವ ರಾಜ ॥ ೩೭

ಹಿರಿಯುಬ್ಬಣವ ಜಳಪಿಸಿ ಮೀಸೆಯ ಮೇಲೆ
ಬೆರಳಿಡುತತುಳ ಪೌರುಷದ ।
ಬಿರುದಿನಗ್ಗಳಿಕೆಗಳನು ಪೊಗಳಿಸಿಕೊಳ್ವ
ದೊರೆಯಾವನುಸಿರು ಕೆಂಗೇಂದ್ರ ॥ ೩೮

ಕೋಟೆ ಕೋಳಾಹಳ ರಿಪು ರಾಜ ದುರ್ಗ ಕ
ವಾಟ ಬಂಧನ ಪಟು ಶೌರ್ಯ ।
ಮಾಟನ ಚಲದಂಕನಿವನೀಗ ವಿಜಯಪ
ಧೂಟೀ ಧವ ನರಸೇಂದ್ರ ॥ ೩೯

ಮಿಸುನಿಯುಲಪ್ಪಿಟ್ಟು ಕಟ್ಟಾಣಿ ಮುತ್ತ ತೆ
ತ್ತಿಸಿದ ಕಬಾಯಿ ಕಟಿಯೊಳು ।
ಪೊಸ ರತ್ನದೊರೆಯ ದಿವ್ಯಾಯುಧದಿಂದ ರಂ
ಜಿಸುವ ಭೂಮೀಶ್ವರನಾರೊ ॥ ೪೦

ಅಂದು ಕಂಬದೆ ಜನಿಸಿದ ವೀರ ನರಸಿಂಹ
ನಂದದೆ ಕಣ್ಗೆ ಕೌತುಕವ ।
ಬಂಧುರದಲಿ ಬೀರುವ ಶೌರ್ಯ ಸದ್ಗುಣ
ಸಿಂಧು ಕಂಠೀರವ ರಾಜ ॥ ೪೧

ಬರೆಯುನುಗಿದ ಖಡ್ಗ ವಿಡಿದು ಹೆಬ್ಬುಲದಲಿ
ಮೆರೆವ ಮನ್ನೆಯನಾರುಸಿರು ।
ದೊರೆ ರಾಯನ ದಳ ಪತಿ ನಂಜ ರಾಜೇಂದ್ರ
ದುರಗಲಿ ಖಾನ ಚಿತ್ತೈಸು ॥ ೪೨

ಕಾಲಾಳು ಮೇಲಾಳು ವ್ರೊಂಟಿರಿಗಾರರ
ಜಾಲ ಬಿರುದಿನ ನಾಯಕರ ।
ಸಾಲು ಸಾಲೆಸೆದಿದೆ ಸಂವರ್ತ ರುದ್ರಾ
ಭೀಳ ಪಂಚಾಸ್ಯಗಳಂತೆ ॥ ೪೩

ಇಂತಪ್ಪ ಪುರವ ಲಗ್ಗೆಗೆ ಬಿಡ ಬೇಕೆಂಬ
ಪಂತವೇತಕೆ ನಿನಗೀಗ ।
ಸಂತವ ಮಾಡಿಕೊಳ್ಳನೆ ಕೋಪವ ತಾಳಿ
ಮುಂತಾಗ ಖಾನ ಗರ್ಜಿಸಿದ ॥ ೪೪

ಇಡು ಕೋಟೆಯು ಪಿರಂಗಿಯಲಿ ಯಗಳ ಹೂಳು
ಬಿಡದೆಬ್ಬಿಸು ಮೇರುವೆಯ ।
ತುಡುಕಿ ಲಗ್ಗೆಯನೇರೆಂದು ವಜೀರರ್ಗೆ
ಕಡುಗಲಿ ಖಾನ ಬೆಸಸಿದ ॥ ೪೫

ಬಳಿಕ ಹಸಾದವೆನುತ ಖಾನ ಖಾನರು
ತಳುವದಾ ಕ್ಷಣ ಲಗ್ಗೆಯನು ।
ಗಳಿಲನೆ ಪಿಡಿಯಲು ಪುರದ ಸುಭಟರಂ
ದಿಳಿಯ ಗೆಡಹಿದರೇ ವೇಳ್ವ ॥ ೪೬

* ಘಳಿಲಾಗೆಬಿಡಲಾಗ.

ಗಣನೆ ಯಿಲ್ಲದ ಖಾನರು ಲಗ್ಗೆಯಲಿ ನೊಂದು
ರಣಧೂಳಖಾನಗೆ ದೂರೆ ।
ಎಣಿಕೆ ಯಿನ್ನೇಕೆ ಬಂಧಿಸಿ ಪಟ್ಟಣವನೆಂದು
ಕಣುಗಿಡಿಗೆದರಿ ಗರ್ಜಿಸಿದ ॥ ೪೭

ಒತ್ತರಿಸಿಯೆ ತಳ ಮೇರುವೆಗಳನಿಟ್ಟು
ಮುತ್ತಿಗೆಯಿಕ್ಕಿದ ಬಲವ ।
ಮತ್ತೆ ಕಂಠೀರವೇಶ್ವರ ಕಂಡು ದಳವಾಯ
ಹತ್ತಿರೆ ಕರೆದಿಂತೆಂದ ॥ ೪೮

ದಳವಾಯಿ ನಂಜರಾಜೇಂದ್ರ ಬಾ ನಮ್ಮಡಿ
ಯಿಳಯ ಮನ್ನೆಯರ ಮೋರ್ಬಲವ ।
ತಳುವದೆ ಬರಿಸಿ ಮಾರ್ಗವ ಕಟ್ಟಿ ತುರುಕರ
ಗಳಲನೆ ಮೂಗರಿಸೆಂದ ॥ ೪೯

ಅದರಿಂದ ಭಯಪಟ್ಟು ಪಾಳಯವೆಲ್ಲವು
ಗದಗಾಪುಗೊಂಡೊಡೆ ಬಳಿಕ ।
ಕದನವ ಗಂಟಿಕ್ಕಿ ಮುತ್ತಿದ ತುರುಕರ
ಸದೆದೆಬ್ಬಿಸಬೇಕೆಂದ ॥ ೫೦

ಬಳಿಕ ಹಸಾದವೆನುತ ನಂಜರಾಜೇಂದ್ರ
ಸಲೆ ಗಡಿಗಳ ಮನ್ನೆಯರ ।
ತಳುವದೆ ಮೋರ್ಬಲ ಸಹಿತ ಕರಿಸಿ ಕಾರ್ಯ
ದಳವಿಯ ಪೇಳ್ದನಿಂತೆಂದು ॥ ೫೧

ಒಡನೆ ಠಾಣೆಯುದೆಗೆದೂರೂರುಗಳ ಹೊಕ್ಕ
ತುಡುಗುಣಿ ತುರುಕ ಮೋರ್ಬಲವ ।
ಕಡುತವಕದೆ ಮುತ್ತಿಕೊಂಡು ಮೂಗರಿದಾಗ
ಬಿಡದೆ ಭಂಗಕೆ ಬರಿಸೆಂದ ॥ ೫೨

ಒಡೆಯನಾಜ್ಞಾಪನೆಯಲಿ ಗಡಿ ದುರ್ಗವ
ಕಡುಗಲಿ ಮನ್ನೆಯರಾಗ ।
ಪಡೆಗೂಡಿ ನಡೆದು ಮಾಡಿದ ರಾಜ ಕಾರ್ಯದ
ಕಡು ಸಾಹಸವನೇ ಪೇಳ್ವ ॥ ೫೩

ಆರಕೆರೆಯೊಳು ಬೀಡ ಬಿಟ್ಟಿರ್ದ ತುರುಕರ
ನಿರುಳು ಕಗ್ಗೊಲೆಯೊಳು ಬಿದ್ದು ।
ಎರಡು ಸಾಸಿರ ಮೂಗರಿದು ತಂದಾಕ್ಷಣ
ಪಿರಿದು ಸಾಹಸವ ಮಾಡಿದರು ॥ ೫೪

ಹೊಳಲ ಬಳಿಯ ಪೊದ್ದಲ್ಲಿರ್ದ ತುರುಕರ
ತಳತಂತ್ರವನರೆಯಟ್ಟಿ ।
ಗಳಲನೆ ಸಾಸಿರ ಮೂಗರಿದಾಕ್ಷಣ
ದಳ ಪತಿಯಡಿಗೊಪ್ಪಿಸಿದರು ॥ ೫೫

ಚೆನ್ನ ಪಟ್ಟಣದ ಭಟರು ಬಹ ತುರುಕರ
ಮುನ್ನ ಮಾರ್ಗವನಡ್ಡಗಟ್ಟಿ ।
ಬೆನ್ನಟ್ಟಿ ಹೊಯ್ದು ಸಾವಿರ ಮೂಗರಿದಾಗ
ಬನ್ನಕ್ಕೆ ತಂದರೇನೆಂಬೆ ॥ ೫೬

ಮದ್ದೂರ ಸು ಭಟರು ಮಾರ್ಗವ ಕಟ್ಟಿಕೊಂ
ಡುದ್ಧತ ಖಳರ ಮಾರ್ಬಲವ ।
ಹೊದ್ದಿ ಯಿರಿದು ನಾನೂರು ಮೂಗಿರಿದಾಗ
ಸದ್ಯದೆ ಶೌರ್ಯವಡೆದರು ॥ ೫೭

ಯಾದವಾದ್ರಿಯ ಬಳಗೈದಿದ ತುರುಕರ
ಹಾದಿಗಳನು ಕಟ್ಟಿಕೊಂಡು ।
ಭೇದಿಸಿ ಹೊಯ್ದು ಸಾಸಿರ ಮೂಗರಿದಾಗ
ವೇದನೆಗಳ ಮಾಡಿದರು ॥ ೫೮

ನಾಗಮಂಗಲದ ಭಟರು ಸೋಬತಿಯ ಕಟ್ಟಿ
ಬೇಗದಿರಿದು ತುರುಕರನು ।
ಬೇಗದೆ ಮೂರು ಸಾಸಿರ ಮೂಗರಿದಾಗ
ರಾಗದೆ ಜಸವೆ ಬೀರಿದರು ॥ ೫೯

ಚನರಾಯ ಪಟ್ಟಣದ ಭಟರು ಬರುತಿಹ
ಘನವಾದ ತುರುಕರ ಬಲವ ।
ಮೊನೆ ಮುರಿದೆರಡು ಸಾಸಿರ ಮೂಗರಿದಾಗ
ಮನ ಹರುಷದೊಳ್ಳೈದಿದರು ॥ ೬೦

ಕಿಕ್ಕೇರಿ ಬೂಕನ ಕೆರೆಯ ಸು ಭಟರೊಳ
ಹೊಕ್ಕು ಬರುವ ತುರುಕರನು ।
ಸೊಕ್ಕಿ ತಿವಿದು ಸಾಸಿರ ಮೂಗರಿದಾಗ
ಗಕ್ಕನೈತಂದರೇ ವೇಳ್ವ ॥ ೬೧

ಚಾಮುಂಡಿಯ ಬೆಟ್ಟಕ್ಕೈದಿದ ತುರುಕರ
ಸ್ತೋಮದ ಮೇಲೆ ಬಿದ್ದಿರಿದು ।
ಆ ಮಹಾ ಮೈಸೂರ ಭಟರು ಸಾವಿರ ಕೋಳ
ಭೂಮಿ ಪಾಲನಿಗೊಪ್ಪಿಸಿದರು ॥ ೬೨

ಇಂತು ಹನ್ನೆರಡು ಸಾವಿರ ಮೂಕೊರೆಯರು
ಮುಂತಾಗ ವಿಜಯಾ ಪುರಕೆ ।
ಚಿಂತೆ ವಡುತಲೈದಿ ಪಾತ್ಶಾವಿನಡಿಯೊಳು
ನಿಂತಡ್ಡಬಿದ್ದೊರಳಿದರು ॥ ೬೩

ನೋಡಿ ವಿಸ್ಮಿತನಾಗಿ ಪಾತ್ಶಾವು ತಲೆದೂಗಿ
ಕೂಡುಂಬಳಯಿತ್ತವರ್ಗೆ ।
ಮೂಡಿದುನ್ಮಳದೆ ಮೂಕೊರೆಯ ವೀದಿಯ ಕಡೆ
ಮಾಡಿಸಿ ಕೊಟ್ಟನಾ ಪುರದ ॥ ೬೪

ಇವರಿಗೆ ಹೋದ ಮೂಗಲ್ಲ ತನ್ನಯ ಮೂಗು
ತವೆ ಹೋದುದೈಸಲೆ ಯೆನುತ ।
ತವಕದೆ ಮೂಲಬಲವ ಖಾನನಿದ್ದೆಡೆ
ಗವನಟ್ಟಿದ ಕೋಪದಿಂದ ॥ ೬೫

ಸಲೆ ದೆಸೆ ದೆಸೆಯ ಜನರು ವಿಜಯಾಪುರ
ದೊಳ ಹೊಕ್ಕು ನಡೆದು ಬಂದಾಗ ।
ಬಲು ಮೂಕೊರೆಯ ಬೀದಿಯ ನೋಡಿ ಚೋದ್ಯವೆ
ತಳದಿಂತೆಂದು ನುಡಿದರು ॥ ೬೬

ಹಿಂದಣ ಯುಗದಲಿ ದಶಮುಖನನುಜೆಯ
ಕುಂದದೆ ಕಿವಿ ಮೂಗನರಿದ ।
ಇಂದೀವರಾಕ್ಷನಿಂ ವೆಗ್ಗಳವಹ ಶೌರ್ಯ
ಹೊಂದಿತು ಮೈಸೂರ ನೃಪಗೆ ॥ ೬೭

ಆತನೊಬ್ಬ ಸುರೆಯ ಮೂಗ ಖಂಡಿಸಿದ ಮ
ತ್ತೀತ ಹನ್ನೆರಡು ಸಾಸಿರದ ।
ಖ್ಯಾತಿಯ ನರರಕ್ಕಸರ ಮೂಗರಿದನೀ
ಭೂತಳೇಶನಿಗೆಣೆ ಯಾರು ॥ ೬೮

ಇಂತೆಂದು ಕಂಠೀರವ ನರಸೇಂದ್ರನ
ಪಂತ ಪೌರುಸವ ಪೊಗಳುತ ।
ಸಂತೋಷದೆ ದೆಸೆ ದೆಸೆಯ ಜನರು ಯಾತ್ರೆ
ಗಂತರಿಸದೆ ತೆರಳಿದರು ॥ ೬೯

ಅಲ್ಲಿರ್ದ ಕೂರ್ಮ ಪಾತ್ಸ್ಯಾವಿನ ಹೇಜಿಬ
ರೆಲ್ಲವನರಿದು ಬೇಗದಲಿ ।
ನಿಲ್ಲದೆ ಕಾಗಜವನು ತನ್ನ ದಾತಾರ
ನಲ್ಲಿಗಟ್ಟಿದರೇ ವೇಳ್ವ ॥ ೭೦

ಕಾಗಜಪನು ಮೋದಿಸಿ ಕೂರ್ಮ ಪಾತ್ಸ್ಯಾವು
ಮೂಗಿನ ಮೇಲಿಟ್ಟು ಬೆರಳ ।
ತೂಗಿದ ತಲೆಯನಚ್ಚರಿಪಟ್ಟು ಮ್ಲೇಸೂರ
ಭೂಗಧಿಪತಿಯು ಪೊಗಳಿದ ॥ ೩೧

ಧರೆಯೊಳು ರಾಮ ರಾಜಗೆ ನೆರೆ ಮಣಿಯದ
ತುರುಕರ ಭಂಗಕೆ ತಂದ ।
ದುರ ಗಲಿ ಕಂಠೀರವ ರಾಜ ಲೋಕಕೆ
ನರ ನಾರಾಯಣನೆಂದ ॥ ೩೨

ಬಳಿಕ ತನ್ನಯ ಭಂಗದ ವಾರ್ತೆ ಕೂರ್ಮಗೆ
ಸಲೆ ಮುಟ್ಟಿದುದನು ಕೇಳ ।
ಮುಳಿದು ಪಾತ್ಸ್ಯಾವು ಖಾನಗೆ ದೂತರಟ್ಟಿದ
ಸೆಳಯು ಹೇಳೆಂದು ಪಟ್ಟಣವ ॥ ೩೩

ಬಂದು ಚಾರರು ಪಾತ್ಸ್ಯಾವು ಕೋಪಿಸಿ ನುಡಿ
ದಂದವ ಖಾನನಿಗುಸಿರೆ ।
ಅಂದಾಗ ರಣಧೂಳಿ ಖಾನ ರೌದ್ರಾವೇಶ
ದಿಂದೆದ್ದನಾಸ್ಥಾನದಿಂದ ॥ ೩೪

ಕುಡಿ ಮೀಸೆ ಕುಣಿಯಲು ತಾವ್ರಾಕ್ಷಿಯೊಳಂ
ದೊಡನೆ ಕಿಡಿಗಳು ಸೂಸಿದುವು ।
ಕಡಿದು ಮುಂಗೈಯ ಕೋಪಾಟೋಪದಲಿ ಖಳ
ಜಡಿದು ಖಂಡೆಯವ ಚಿಮ್ಮಿದನು ॥ ೩೫

ಕೆರಳಿದ ಕಾಲ ನೇಮಿಯೊ ರೌದ್ರ ರೂಪಿನೊ
ಳಿರದೆದ್ದ ಮಹಿಷಾ ಸುರನೊ ।
ದುರ ಗಲಿ ಘೋರಾಂಧಕನೆನೆ * ಖಾನ ಮ
ತ್ತುರವಣಿಸಿದ ಲಗ್ಗೆಗಾಗ ॥ ೩೬

---

* ಭಾವ.

ಇಂತಪ್ಪ ಖಾನನ ಕೋಪಾಗ್ನಿಯ ಝಳ
ವಂ ತಾಳಲಾರದೆ ತರಣಿ ।
ಮುಂತೆ ನೀರೊಳು ಮುಳುಗಿದನೆನೆ ಪಡು ಗಡ
ಲಂ ತವೆ ಪೊಕ್ಕನೇ ವೇಳ್ಯ ॥ ೭೭

ಮುಗಿಯೆ ತಾವರೆಗಳಭ್ರದಲಿ ತಾರಾಳಗ
ಳೊಗುಮಿಗೆ ರಾಗದೊಳಸೆಯೆ ।
ಮಿಗೆ ಹರುಷವ ತಾಳೆ ನೀಲಾಬ್ಜ ಕತ್ತಲೆ
ಜಗವ ಮುಸುಕಿತಾ ಕ್ಷಣದೆ ॥ ೭೮

ಪಿರಿದು ಲಗ್ಗೆಗೆ ಬಿಡಬೇಕೆಂದು ತನ್ನಯ
ತುರುಕ ವಜೀರ ಖಾನರನು ।
ಕರೆದಾಗ ಖಾನ ನೇಮಿಸೆ ಬಳಕಂದವ
ರುರವಣಿಸಿದರೇ ವೇಳ್ಯ ॥ ೭೯

ಇದು ಸೋಮವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಗೆಯ ಸಂಧಿ
ಮುದದ ಸು ಧರ್ಮಾನುಬಂಧಿ ॥ ೮೦

೧೩ನೆಯ ಸಂಧಿ ಸಮಾಪ್ತಂ

## ಹದಿನಾಲ್ಕನೆಯ ಸಂಧಿ.

ಶ್ರೀರಂಗ ಪಟ್ಟಣದ ಲಗ್ಗೆಗೆ ಬಿಟ್ಟುದು.

ಸೂಚನೆ ॥ ಪುರದ ಲಗ್ಗೆಗೆ ಬಿಟ್ಟ ತುರುಕರನಿರಿದು ಖ
ಲ್ಬಿರುದ ಮೆರೆದ ನರಸೇಂದ್ರ ॥

ಬಡಿದರು ಸನ್ನೆಯ ಭೇರಿ ಡಮಾಮಿಯ
ಕಡು ರಭಸಕೆ ಬ್ರಹ್ಮಾಂಡ ।
ಒಡೆಯಲು ಚೌದೆಸೆ ಜಡಿಯಲು ಭೂತಳ
ನಡುಗುವಂದದಲೇ ವೇಳ್ಯ ॥ ೧

ಚಂಬಕ ಡವುಡೆ ನಫಿರಿ ಬುರುಗುಗಳುರೆ
ಕೊಂಬಿನ ಕಾಳ ಮೌರಿಯು ।
ಬೊಂಬುಳಿ ಡೋಳು ನಿಸ್ಸಾಳಗಳಬ್ಬರ
ತುಂಬಿತಾಕಾಶ ಮಂಡಲವ ॥ ೨

ಬಿಲ್ಲ ಜೇವಡೆ ಪಟುಭಟರ ಬೊಬ್ಬೆಯ ಬಲು
ಘಲ್ಲಣೆ ಹಯ ಹೇಷೆ ನಿನದ ।
ಕೊಲ್ಹಾರ ಬಂಡಿಯ ಚೀತ್ಕೃತಿ ತ್ರಿಜಗಕೆ
ತಲ್ಲಣವಿತ್ತುವಾ ಕ್ಷಣದೆ ॥ ೩

ಇಡು ಪಿರಂಗಿಯ ಬೇಗ ಪಿಡಿ ನಿಟ್ಟಣಿಗೆಯ
ತುಡುಕು ಗುರಾಣಿ ಖಂಡೆಯವ ।
ಹೊಡೆ ಬಲು ಜಬರು ಜಂಗಿಯಲಿ ಕೋಟೆಯನೆಂಬ
ಕಡು ರಭಸಗಳೊಪ್ಪಿದುವು ॥ ೪

ಹೂಳಬಿಡಗಳ ಸೊಪ್ಪಿನ ಹೊರೆಯಲಿ ಮೇಲ
ಕೇಳಿಸಾರ್ಭಟೆಯ ಬಾಣಗಳ ।
ತೂಳಿಸು ಪಟಲ ಗುಂಡುಗಳನೆಂಬಸುರರ
ಕೋಳಾಹಳವೊಪ್ಪಿತಾಗ ॥ ೫

ಕರಿಗಳ ಕೈಯಿಂದ ಕೆಡಹು ಕೋಟೆಯ ಮೇಲ
ಕುರವಣಿಸಿರು ಬೊಬ್ಬೆಯಲಿ ।
ತರಿ ಯಿರಿ ಹೊಡೆ ಕಾಹಿನವರನೆಂಬಬ್ಬರ
ಮೆರೆದುದು ಚೌದೆಸೆಯೊಳಗೆ ॥ ೬

ತುಂಬಿದ ಕರಿಯ ಮದ್ದಿನ ಪೊಟ್ಟಣಗಳ
ನಿಂಬುಗೊಳಿಸು ಶರಾಗ್ರದಲಿ ।
ತುಂಬಿಪ್ಪ ಬಲು ಸುರಂಗಗಳ ದ್ವಾರಗಳಗೆಂ
ದೆಂಬ ರಭಸವೊಪ್ಪಿತಾಗ ॥ ೭

ಅಗೆ ತಳ ಮುಟ್ಟ ಕೋಟೆಯ ದ್ವಾರಗಳ ಮಾಡಿ
ಪೊಗುವಡ್ಡಲಾದರಿ ಭಟರ ।
ಮಿಗೆ ಬೀಳಲಿರಿಯೆಂಬ ಖಾನರಬ್ಬರವಾಗ
ಗಗನ ಮಂಡಲವ ಮೊಳಗಿದುದು ॥ ೮

ಖಳರ ಕೋಪಾಗ್ನಿ ನಾನಾ ದೆಸೆಯೊಳಗಾಗ
ಪಲವು ರೂಪಾದಂದದಲಿ ।
ತಳೆತುವು ಲಕ್ಕ ಸಂಖೆಯಲಿ ಬೊಂಬಾಳದ
ಹೊಳವ ದೀವಟಿಗೆಗಳಾಗ ॥ ೯

ಶಶಿಯ ನೇಮದೆ ಕರ ಚರರು ಕೋಪವ ತಾಳ
ಬಿಸಿಯಾಗಿ ಖಳರ ಮಾರ್ಬಲಕೆ ।
ಮುಸುಕಿ ಕಗ್ಗೊಲೆಗೈದಿದೊಲು ಚಂದ್ರ ಜ್ಯೋತಿಗ
ಳೆಸೆದುವು ಪಾಳಯದೊಳಗೆ ॥ ೧೦

ಕರಿಗಳಿಗೆಂಟು ಕಾಲಾಳಿಗೆರಡು ಬಲು
ತುರಗಕೆ ನಾಲ್ಕು ಕೊಲ್ಲಾರ ।
ಹರಿವ ಬಂಡಿಗೆ ಹತ್ತು ದೀವಟಿಗೆಯು ಬಲು
ಪರಿ ಗಣನೆಗಳೊಪ್ಪಿದುವು ॥ ೧೧

ದೆಸೆ ದೆಸೆಗೆರಡು ಸಾಸಿರ ಪೇಣಿಗಳನಾಗ
ಮಸಗಿ ಖಾನನ ಬಲು ಭಟರು ।
ಮುಸುಕಿ ಚೌದಿಕ್ಕಿನ ಕೋಟೆಯ ತೆನೆಗೆ ಸಂ
ದಿಸಿ ಬೊಬ್ಬಿರಿದರೇ ಪೇಳ್ವ ॥ ೧೨

ಆಗಸವನು ತುಡುಕುವ ಮೇರುವೆಗಳ
ಮೇಗೇರಿ ಖಾನನ ಭಟರು ।
ಬೇಗದೆ ಪಟಲ ಗುಂಡುಗಳ ಮಳೆಯನು ಸ
ರಾಗದೊಳುಬ್ಬಿ ಕರೆದರು ॥ ೧೩

ಅಂಬಿನ ತುದಿಗೇರಿಸಿದ ಪೊಟ್ಟಣದುಪ್ಪ
ಲಿಂಬಾದ ಕಿಚ್ಚ ಕಾರಿಸುತ ।
ಕುಂಬಿನಿ ನಡುಗೆ ಬೊಬ್ಬಿರಿದೆಚ್ಚು ಶರಗಳ
ತುಂಬಿದರೂರೊಳಗಾಗ ॥ ೧೪

ಆನೆಯ ಮೇಲೆ ಜಬುರು ಜಂಗಿಗಳ ತಂ
ದಾನಿಸಿ ಭೋಯೆಂದೆನುತ ।
ಖಾನ ಖಾನರು ಮುಂಬರಿದು ಗುಂಡಿನ ಬಲು
ಸೋನೆಯ ಕರೆದರದ್ಭುತದೆ ॥ ೧೫

ಸುರು ಸುರು ಸುರ್ರೆಂದು ಕೇಸುರಿಗರೆಯುತ
ಪೊರೆದೇಳ್ವ ಬಾಣಗಳಾಗ ।
ತುರುಗಿ ಕೈಕಾಲೆಡೆಯೊಳು ಪೊಯ್ದು ಜನರಿಗೆ
ಪಿರಿದು ಭೀತಿಯು ಬೀರಿದುವು ॥ ೧೬

ಅಂಬರವೆಲ್ಲ ಬಾಣಗಳುರಿ ಚೌ ದೆಸೆ
ತುಂಬಿದ ಕೋವಿಯು ಗುಂಡು ।
ಕುಂಬಿನಿ ಸಿಂಗಾಡಿಯುಂಬಿನ ಮಯವಾಗಿ
ಯಿಂಬುಗೊಡದೆ ರಂಜಿಸಿದುವು ॥ ೧೭

ಕುದುರೆಯನಿಳಿದು ಗುರಾಣಿಯು ಹರಿಗೆಯ
ನೊದರಿಸಿ ತೊಡೆಯೊಳಗಾಗ ।
ಕದುಬಿ ಖಡ್ಗವ ಜಳಪಿಸಿ ಖಾನ ಖಾನರು
ಮದ ಮುಂಬಿದೊಳಗೇರಿದರು ॥ ೧೮

ಆನೆಗಳನು ಕೊಂಬುಗತ್ತಿ ಸಹಿತಲಾಗ
ನಾನಾ ದೆಸೆಯೊಳಗುರುಬಿ ।
ಏನೆಂಬೆನುಪ್ಪಿನ ತಿತ್ತಿಯು ಹೊತ್ತಿಸಿ
ಯಾನಿಸುತುರಿಯ ಸೂಸಿದರು ॥ ೧೯

ಬಂದೊಂದೇಣಿಯೊಳ್ಯೆನೂರು ಖಾನರು
ಸಿಂದಾಗ ತಲೆವರಿಗೆಗಳ ।
ಸಂದಿಸಿ ಬೊಬ್ಬಿರಿದೇರಿದರವರುಗ್ರ
ದಂದವನೇನ ವರ್ಣಿಸುವ ॥ ೨೦

ಸಿಂಗಾಡಿಯುಂಬಿನ ಮಳೆ ಬಾಣದಾರ್ಭಟೆ
ಮುಂಗೈವೆ ಬಲು ಫಿರಂಗಿಗಳ ।
ಪೊಂಗಿದ ಜಬರು ಜಂಗಿಯ ಗುಂಡಿನಬ್ಬರ
ಕಂಗೆಡಿಸಿದುವು ತ್ರಿ ಜಗವ ॥ ೨೧

ಜಾಡಿಸಿ ಬರುವ ಪಟಲ ಗುಂಡುಗಳ ಮೇ
ಲೀಡಿರಿದರು* ಬಾಣಗಳ ।
ನೋಡದೆ ಹೆಣಗಳ ತುಳಿದು ಖಾನರು ಕೈಯ
ನೀಡಿದಕೋಟೆಯ ತೆನೆಗೆ ॥ ೨೨

* ದ್ವಾಸಿಸು.

ಹೊಳೆವ ಖದ್ಯೋತ ಮಂಡಲವ ಬಳಾಹಕ
ಬಳಗ ಮುಸ್ಕುವ ತೆರದಿಂದ ।
ಕಳಕಳ ಮಸಗೆ ಖಾನರು ಬೊಬ್ಬಿಡುತಾಗ
ತಳುವದೇರಿದರು ಲಗ್ಗೆಯನು ॥ ೨೩

ಕುಲ ಗಿರಿಯನು ಕೋಪವ ತಾಳಿ ಮುಸುಕದ
ಹುಳುಗಳು ಮುತ್ತುವಂದದಲಿ ।
ಇಳೆಗಗ್ಗಳಿಕೆವಡೆದ ಪಟ್ಟಣದ ಲಗ್ಗೆ
ಯೊಳಗೇರಿದರು ತುರುಕರು ॥ ೨೪

ಯಕಲಾಸ ಖಾನ ಮುಸ್ತಫ ಖಾನರುಗಳು
ಸಕಲ ಬಲದೊಳೊಂದೆಸೆಯು ।
ಯುಕುತಿಯೊಳೇರಿ ಬೊಬ್ಬಿರಿದಾರ್ಭಟಿಸುವ
ಶಕುತಿಯನೇನ ಬಣ್ಣಿಸುವೆ ॥ ೨೫

ಮತ್ತೆ ನೋಡಿದೊಡಿಸ್ಕರದ ಸುತ್ತಿನ ಕೋಟೆ
ಯೊತ್ತಿನಲಗಳು ಕಂದುಕವ ।
ಮತ್ತೆ ರಾಟವಳ ಸೂತ್ರದ ಯಂತರಗಳ
ಬಿತ್ತರವನು ಕಂಡರಾಗ ॥ ೨೬

ಕರಿತಿ ಖಾನ ಸಹಜೆ ಯಬುದುಲ್ಲ ಖಾನರುಗ
ಳುದವಣಿಸುತಲೊಂದೆಸೆಯು ।
ಪಿರಿದು ಮಾರ್ಬಲಗೂಡಿ ಬೊಬ್ಬಿಡಿದೇರುವ
ಮರಗಲಿತನವನೇನೆಂಬೆ ॥ ೨೭

ಅಂಕುಶ ಖಾನನಂಬರ ಖಾನರೊಂದೆಸೆ
ಮುಂಕೊಂಡು ಬಲು ಬಲ ಸಹಿತ ।
ಶಂಕೆಯಿಲ್ಲದೆ ಭೋಯೆಂದಾಲುತೇರುತ
ಬಿಂಕವ ಬೀರಿದರಾಗ ॥ ೨೮

ಅದ್ದಮು ಖಾನ ವೇದೋಜಿ ಮಲ್ಲಿಗೆ ಖಾನ
ಸಿದ್ದರಹಿಮನೆಂಬವನು ।
ಹೊದ್ದಿಯೊಂದೆಸೆಯಲ್ಲಿ ತಳತಂತ್ರದೊಡಗೂಡಿ
ಯುದ್ಧರಿಸುತಲೇರಿದರು ॥ ೨೯

ಘಳಲನೆ ದಾವಾಗ್ನಿಯಂತೆ ಭೋರಿಡುತಾಗ
ಮೊಳದುರೆ ರಣಧೂಳ ಖಾನ ।
ತಳತಂತ್ರ ಸಹ ಮೂಡ ದೆಸೆಯೊಳಗುರಿದೇರಿ
ದಳವ ನಾನೇನ ಬಣ್ಣಿಸುವೆ ॥ ೩೦

ಬಳಿಕ ದಕ್ಷಿಣ ದೆಸೆಯಲಿ ಬೀಡಿಳಿದಿ
ದಿರ್ಳಯಾಣ್ಮ ಪೂವಲಹನುಮ ।
ಖಳನ ನೇಮದಲಾ ದಿಕ್ಕಿನೊಳಗೆ ಲಗ್ಗೆ
ಗಳವಡಿಸಿಯೆ ಬಿಟ್ಟನಾಗ ॥ ೩೧

ಪಟಹ ಡಿಂಡಿಮ ಕೊಂಬಿನ ಕಾಳ್ ಬುರುಗಿನಾ
ಭರ್ಟಿ ವೀರರುಗಳ ಬೊಬ್ಬಾಟ ।
ಸುಟಿಯಾದ ಗಜದ ಘಂಟಾ ರವ ಬ್ರಹ್ಮಾಂಡ
ಘಟಕೆ ಭೀತಿಯನಿತ್ತುದಾಗ ॥ ೩೨

ಸುರಗಿ ಸಬಳ ಹೇರಿಟ್ಟೆ ಖಂಡೆಯ ಕೈಯೊ
ಳುರವಣಿಸುವ ಬಾಣ ಪಟಲ ।
ದುರಗಲಿ ಭಟರೆಪ್ಪತ್ತು ಸಾವಿರ ತಮ್ಮ
ದೊರೆಗಳು ಸಹಿತಲೇರಿದರು ॥ ೩೩

ಹರುಪನ ಹಳ್ಳಿಯ ಭೂಪ ಸುಂಡೂರವ
ನೆರೆ ಗುಡಿಗೋಟೆಯ ಜನಪ ।
ಪಿರಿದುಜ್ಜನಿಯ ನಾಯಕರು ಮೊರ್ಬಲಗೂಡಿ
ದುರಗಲಿತನದೊಳೇರಿದರು ॥ ೩೪

ರಾಯ ದುರ್ಗದ ವೀರರು ಹಟ್ಟಿಯುಲ್ಲಪ್ಪ
ನಾಯಕರಭಟರೊಂದೆಸೆಯ ।
ಆಯತವಡೆದ ಕುಂದುರುಪಿಯ ಬಲ ಸಮು
ದಾಯವೇರಿತು ಭೋರೆನುತ ॥ ೩೫

ಮತ್ತಿಘಡದ ಚಿಕ್ಕನಾಯಕ ಹಳ್ಳಿಯ
ಸುತ್ತಣ ಬಟರೊಂದೆಸೆಯ ।
ಒತ್ತರಿಸೆಯ್ದ ಪಾಲುಪರೆ ಬೇಲೂರವ
ರತ್ತಿತ್ತಲೊಲೆಯದೇರಿದರು ॥ ೩೬

ಬಡಗ ದೆಸೆಯ ಬೀಡಿಳದಿರ್ದ ವೊರಸರ
ಪಡೆ ಹನುಮನ ನೇಮದಲಿ ।
ತುಡುಕಿ ಸಾಸಿರ ಸಂಖ್ಯೆ ಯೋಣಿಗಳನು ಚಾಚಿ
ಯೊಡನೆ ಬೊಬ್ಬಿರಿದೇರಿದರು ॥ ೩೭

ಹೊಳವನ ಹಳ್ಳಿ ಬಿಜ್ಜಾವರ ಕೋಳಾಲ
ಬಳಲಾಪುರ ಮಾಗಡಿಯ ।
ಇಳೆಯಾಣ್ಮರು ಬಹು ಬಲ ಸಹ ಲಗ್ಗೆಯ
ತಳುವದೇರಿದರುಬ್ಬಿನಲಿ ॥ ೩೮

ಮರಗಲಿ ಚಿಕ್ಕಬಳ್ಳಾಪುರ ಬಾವಲೂ
ರೆರೆಯರು ಹೊಸಕೋಟೆಯವರು ।
ನೆರೆ ಕಂಗೊಂದಿ ಮಾಸ್ತಿಯ ಸುಭಟರು ತಮ್ಮ
ದೊರೆಗಳು ಸಹಿತಲೇರಿದರು ॥ ೩೯

ಚಾರುತರದಲಿಕ್ಕೇರಿಯ ವರ ಬಲ
ವಾರಿಧಿ ಮುತ್ತಿ ಮೊದಲಿಸಿ ।
ಕಾರುಣ್ಯಾ ನಿಧಿ ನರಸೇಂದ್ರನ ದುರ್ಗವ
ನಾರುಭಟೆಯಲೇರಿದರು ॥ ೪೦

ನೇಜೆಯುಗಳ ಗಾಯ ಪಟಲ ಗುಂಡುಗಳ ಸ
ಮಾಜದಾರ್ಭಟೆಗೆ ಕಂಗೆಡದೆ ।
ಪಾಜು ಪಾಜಾಗಿ ಬೊಬ್ಬಿರಿದೇರುವರ ಭಟ
ರೋಜೆಯನೇನ ಬಣ್ಣಿಸುವೆ ॥ ೪೭

ಮುಸುಕಿದ ಬಾಣವೃಷ್ಟಿಸ ಪೊಟ್ಟಣಗಳ
ಮಸೆಯಂಬು ಪಟಲ ಗುಂಡುಗಳ ।
ಎಸೆವ ಪರ್ಮಾಳೆಗರೆಯುತ ಬೊಬ್ಬಿರಿದಾಗ
ಳಸವ ಸಾಹಸಿಗಳೇರಿದರು ॥ ೪೮

ಕಂಡನು ರಿಪುರಾಜಶರಭ ಭೇರುಂಡ ಭೂ
ಮಂಡಲೇಶ್ವರ ಕುಲ ಕಮಲ ।
ಚಂಡದಿವಾಕರ ಕಂಠೀರವೇಂದ್ರ ಮುಂ
ಗಂಡಿಯೊಳೇರಿದರುಗಳ ॥ ೪೯

ಸಿಡಿಲ ಗರ್ಜನೆಗಬ್ಬರಿಸುತ್ತಾಗಸವನು
ತುಡುಕುವ ಹರಿಯಕ್ಷನಂತೆ ।
ಖಡುಗವನೊರೆಯಿಂದ ಸೆಳದು ಸಂಘದೊಳಾಗ
ನುಡಿದನು ನಂಜೇಂದ್ರನೊಡನೆ ॥ ೫೦

ಇವರಿಗಿನಿತು ನಮ್ಮತಿಯು ಗಡ ಮನ್ನೆಯ
ನಿವಹವ ಕರೆದು ನೀ ಬೆಸಸಿ ।
ತವಕದೆ ಲಗ್ಗೆಗೇರಿದ ರಿಪು ಬಲವನು
ಜವನ ನಗರಿಗೈದಿಸೆಂದ ॥ ೫೧

ಮದಕರಿಗಳ ಪೊತ್ತು ಕದಳಿಯ ವನಗಳ
ಪೊದರ ಕಿತ್ತೀಡಾಡುವಂತೆ ।
ಕದನಗಲಿಗಳಿಂದ ಮುತ್ತಿದ ತುರುಕರ
ಸದೆದೆಬ್ಬಿಸು ನೀನೆಂದ ॥ ೫೨

ಒಡೆಯನ ನುಡಿಗೆ ಹಸಾದವೆನುತಲಾಗ
ಕಡು ಗಲಿ ನಂಜ ರಾಜೇಂದ್ರ ।
ಗಡಿಯ ಮನ್ನೆಯರನಾಕ್ಷಣ ಚೌ ದೆಸೆಗಟ್ಟಿ
ಬಿಡದೆ ಸಾಹಸವ ಮಾಡಿಸಿದ ॥ ೫೩

ಚೆನ್ನ ಪಟ್ಟಣ ಮದ್ದೂರು ಬೆಳ್ಳೂರಾಳ್ವ
ಮನ್ನೆಯರುಗಳೊಂದು ದೆಸೆಗೆ ।
ಉನ್ನತ ಬಲ ಗೂಡಿ ಬಂದಾಗ ತುರುಕರ
ಬನ್ನಕ್ಕೆ ತಂದುದೇನೆಂಬೆ ॥ ೫೪

ಸಲೆ ನಾಗ ಮಂಗಲ ಚೆನ ರಾಯ ಪಟ್ಟಣ
ತೊಳಗುವ ಹೊಸ ಹೊಳಲಾಳ್ವ ।
ಚಲದಂಕ ಮನ್ನೆಯರುಗಳು ಮಾಡಿದ ಶೌರ್ಯ
ದಳವಿಯನೇ ವಣ್ಣಿಸುವೆ ॥ ೫೫

ತಿಪ್ಪೂರು ಕನ್ನಂಬಾಡಿ ಮಳಲವಾಡಿ
ಯೊಪ್ಪುವ ಮನ್ನೆಯರುಗಳು ।
ತಪ್ಪದೆ ಲಗ್ಗೆಗೇರಿದ ಖಳರನು ಕೊಪ್ಪ
ದಪ್ಪವನೇನೆಂಬೆನದನು ॥ ೫೬

ಪಟ್ಟಣ ಮೈಸೂರು ತೆರಕಣಾಂಬಿಯನಾಳ್ವ
ಕಟ್ಟುಗ್ರದಧಟ ಮನ್ನೆಯರು ।
ನೆಟ್ಟನೆ ಲಗ್ಗೆಗೇರಿದ ಖಳರನು ಸದೆ
ಗುಟ್ಟುವ ಪರಿಯನೇ ವೇಳ್ವ ॥ ೫೭

ಹರದನ ಹಳ್ಳಿ ಸತ್ಯಾಗಾಲ ಮಳವಳ್ಳಿ
ಯುರುತರ ತಲಕಾಡನಾಳ್ವ ।
ಪಿರಿದು ಮನ್ನೆಯ ನಾಯಕರು ಲಗ್ಗೆಗೇರಿದ
ತುರುಕರ ಸದೆವುದೇವೇಳ್ವ ॥ ೫೮

ಒಡನಾಗ ಕಂಠೀರವೇಶ್ವರನಾಳುವ
ಪೊಡವಿಯ ಬಲು ಮನ್ನೆಯರು ।
ತಡೆಯದೆ ಲಗ್ಗೆಗೇರಿದ ಖಾನ ಖಾನರ
ಕಡಿದೋಡಿಸುವುದೇನೆಂಬೆ ॥ ೫೯

ಹಿಂದು ಹಿಂಡಿನಲೇಣಿಯ ಮೇಲೇರಿ ಮುಂ
ಕೊಂಡುರುಬುವ ರಿಪು ಬಲವ ।
ಖಂಡಿಸಿ ಸಿರಗಳ ಮರುಳ್ಗಳ ಕೊರಳಗೆ
ದಂಡೆಯ ಹಾಕಿದರಾಗ ॥ ೬೦

ಇರಿದು ಬಲ್ಲೆಹದಿಂದ ಖಾನರ ಕರುಳ್ಗಳ
ಸರ ಮಾಲೆಗಳ ಬೇಗ ತೆಗೆದು ।
ದುರದೊಳೊಪ್ಪುವ ಭೂತಗಳ ಕೊರಳೊಳಗಿಕ್ಕಿ
ಮೆರೆದರುನ್ನತ ಸಾಹಸವ ॥ ೬೧

ಆರ ನೋಡಲು ಜವ ದಾಡೆಯ ತಿರಿಗೊಳ
ಪೂರೈಸಿದ ಗಾಯದವರು ।
ಆರ ನೋಡಲು ನೇಜೆಯದಂಗಲಿ ನೊಂದ
ಮಾರಣದಿಗಳೊಪ್ಪಿದರು ॥ ೬೨

ಕವಿದು ಕೋಟೆಯ ತೆನೆಗುರುಬುವ ಖಾನರ
ತಿವಿಯೆ ಕರಾಚೂರಿಯಿಂದ ।
ತವೆ ಕೆಳಗಾಗೆ ಸುರುಳಿ ಬಿದ್ದಸುರರ
ಹವಣನೀಶ್ವರ ತಾನೆ ಬಲ್ಲ ॥ ೬೩

ಚಿಗಿದಾಳ್ವೇರಿಗಿಳಿವ ಖಾನ ಖಾನರ
ನಗುತ ಮುಂದಲೆಗಳ ಪಿಡಿದು ।
ಉಗಿದಾಯುಧಗಳ ಶಿರಗಳ ಖಂಡಿಸಿ
ಯುಗಳಗಿಟ್ಟರು ಬೊಬ್ಬಿಡುತ ॥ ೬೪

ನೇಜೆಯುದಿರಿತಕೆ ಹರಿಗೆಯು ಮುರೆಗೊಂಡು
ಮೂಜದೇರುವ ರಿಪುಭಟರು ।
ಸೋಜಿಗಪಡೆಯೆ ನೋಳ್ಪರು ಬಾಕಿರಿದು ಯಮ
ರಾಜನ ಪುರಕ್ಕೈದಿಸಿದರು ॥ ೬೫

ವಸುಧೇಶ್ವರ ಕಂಠೀರವ ಸಾಕಿ
ದರ್ಸಹಾಯ ಶೂರ ಮನ್ನೆಯರು ।
ದೆಸೆ ದೆಸೆಯೊಳು ಕೋಟೆಗತರ್ವ ಖಾನರುಗಳ
ಕುಸುರಿದರಿದು ಕೆಡಹಿದರು ॥ ೬೬

ಬಳಿಕ ನಾಲ್ದೆಸೆಯುಲಿ ಕಂಠೀರವೇಂದ್ರನ
ಹಳೆಯ ಪೈಕದ ಪಟುಭಟರು ।
ತಲೆಗಳ ಚಂಡಾಡಿ ವೈರಿ ಮಾರ್ಬಲವನು
ಬಲಿಯನಿತ್ತರು ಭೂತಗಣಕೆ ॥ ೬೭

ಕೋವಿಯ ಭಟರ ಗುಂಡಿನ ಹಾವಳಿಯಲಿ
ಜೀವಗಳನು ತೊರೆದಾಗ ।
ಭಾವಿಸೆ ನಾಲ್ಕೆಂಟು ಸಾವಿರ ತುರುಷ್ಕಭ
ಟಾವಳಿ ಬಿದ್ದುದೇ ಪೇಳ್ವೆ ॥ ೬೮

ಬಂದೀ ವೇಳೆಯೊಳಗೆ ಲಕ್ಷ ಬಾಣವ
ಸಂಧಾನವ ಮಾಡಿ ಕರೆಯೆ ।
ಕೊಂದು ಕೆಡಹಿದುವು ತುರುಕ ಮೊರ್ಬಲಕಾಗ
ಬಂದ ಭಂಗವನೇ ಪೇಳ್ವೆ ॥ ೬೯

ಪಣಿಗಳಿಗೆ ಕವೆಗೋಲುಗಳನು ಸಂ
ದಾನಿಸಿ ಕೆಡೆ ನೂಕಲಾಗ ।
ಗೋಣಾಡಿಯುಲಿಬಿದ್ದು ತುರುಕರ ಮೊರ್ಬಲ
ಪ್ರಾಣವ ನೀಗಾಡಿದುದು ॥ ೭೦

ತೊಲೆಗಳೊಳಗೆ ದಸಿಗಳ ಪೆಟ್ಟಿ ಲಂಘಿಪ
ಬಲುವೆ ಕಾರರ ಮೇಲೆ ನೂಕೆ ।
ತಲೆ ಮೈ ಕೈ ಕಾಲೊಳು ಗೂಟಗಳು ಮೂಡಿ
ಸಲೆ ತೊರೆದರು ಜೀವಗಳನು ॥ ೨೧

ಎತ್ತುಗಲ್ಲುಗಳೆಂಬ ಕಲ್ಲು ಕವಣೆಗ
ಳೊತ್ತಿದ ಗಾಯಗಳಿಂದ ।
ನೆತ್ತಿಗಳೊಡೆದು ಕೈ ಕಾಲುಡಿದಗಳೊಳು
ಸತ್ತವರಿಗೆ ಲೆಕ್ಕವಿಲ್ಲ ॥ ೨೨

ಉರವಣಿಸುರೆ ಮೇಲಕ್ಕೆಯುವ ವಾನರ
ಸಿರದ ಮುಂದಲೆಗಳ ಹಿಡಿದು ।
ಕೊರಳನರಿದು ಭೋಂಯೆನುತಾಗ ಪಾಳೆಯ
ಕುಂದುಳಲಿಟ್ಟರು ತಲೆಗಳನು ॥ ೨೩

ಬಂಡೆಯುಗಳ ಪೆಟ್ಟಿನೊಳಗೆ ಗುಂಡಾಣಿಗ
ಳ್ತುಂಡಿಸಿ ತಲೆ ಸೀಳಾಗಿ ।
ಖಂಡಿಸಿ ಸಿಂಗಾಡಿ ದೋಣಿಯುಂಬು ಪುಡಿಯೆದ್ದು
ದಿಂಪುರುಳಿತು ಬಾನ ರಾಜಿ ॥ ೨೪

ಕಟಿಯ ಮದ್ದಿನ ಪ್ರೋಟ್ಟಣಗಳ ಪೊತ್ತಿಸಿ
ಭರದಿಂದ ಮೇಲೆಸೆಯುತಿರಲು ।
ನರೆ ಗಪ್ಪ ಮಂಡೆಮೇಲ್ಕ್ರೀಸೆ ಸೀಕರಿಯಾಗಿ
ಯುರುಳಿ ಬಿದ್ದರು ನೆಲದೊಳಗೆ ॥ ೨೫

ಕೊತ್ತಳಕೊತ್ತಳಗಳಲಿ ಫಿರಂಗಿಯ
ನೊತ್ತಿ ಸಂದಾಣಿಸಿ ಬಿಡಲು ।
ಪತ್ತು ಸಾವಿರ ಕುದುರೆಗಳು ಸೀಕರಿಯಾಗಿ
ಸತ್ತುವೇನೆಂಬೆನದ್ಭುತವ ॥ ೨೬

ಉಪ್ಪಿನ ತಿತ್ತಿಗಳನು ಬೇಗ ಹೊತ್ತಿಸಿ
ತಪ್ಪದಾನೆಗಳ ಮೇಲಿಡಲು ।
ಕಪ್ಪಿನ ದೇಹಗಳ್ಸೀದು ಮುನ್ನೂರಾನೆ
ಕುಪ್ಪಳಿಸಿದುವು ಭೂಮಿಯಲಿ ॥ ೭೭

ಮುರಿದರು ತಳಗಳ ಮೇರುವೆಗಳ ಸುಟ್ಟು
ನೆರೆ ಸುರಂಗಗಳ ದ್ವಾರದಲಿ ।
ಕರಿಯ ಮದ್ದನು ತುಂಬಿ ಹೊತ್ತಿಸಿ ಖಾನರ
ಕರಿಕು ಮಾಡಿದರೇನೆಂಬೆ ॥ ೭೮

ನೆಲ್ಲಿಯ ಕಾಯ್ಗಳ ಹೆಗ್ಗುದಿಗೆಯೊಳಡೆ
ಚಲ್ಲವರಿದು ಬೀಳುವಂತೆ ।
ಬಲ್ಲಿದ ಖಾನರು ಚಿಗಿದು ಬಿಟ್ಟಾಕ್ಷಣ
ಹಲ್ಲ ಕಿರಿದರಗಳೊಳಗೆ ॥ ೭೯

ಉಗ್ಗಿಯನೇರುವೊಡ್ಡೈದಿದ ಖಳ ಬಲ
ಮೊಗ್ಗರ ಮುರಿದು ಹಿನ್ನೆಲೆಗೆ ।
ಜಗ್ಗನೆ ಜರಿದೋಡಿದರು ದೆಸೆ ದೆಸೆಗಾಗ
ದುರ್ಗದ ಭಟರುರುಬಿಂದ ॥ ೮೦

ಉರಗ ಬಲೌಘವ ಕಂಡಬ್ಬರಿಸಿ ಬಂ
ದೆರಗುವ ಬರ ಸಿಡಿಲಂತೆ ।
ಪಿರಿದು ಕರ್ಣಾಟಕದರಿ ಬಲವನು ಬಂದು
ತರುಬಿದರೇ ವೇಳ್ವನದನು ॥ ೮೧

ಕಡಿ ಯಿರಿ ಹೊಯ್ ತರಿ ಬೀಳಗೆಡಹು ನೆರೆ
ಬಡ ಮನದರಿಗಳನೆನುತ ।
ಪೊಡವಿಪ ಕಂಠೀರವನ ಮೈಗಾವಲ
ಕಡುಗಲಿ ಭಟರುರುಬಿದರು ॥ ೮೨

ಅಡಸಿ ಗಿರಿಯನು ನುಂಗುವ ವೀರನ ಬಾಯಿ
ಹಿಡಿಯದೆ ಪಣ್ಫಲಗಳನು ।
ಕಡುಗಲಿ ತುರುಕರನರೆಯಟ್ಟಿದರು ಮಿಕ್ಕ
ಬಡ ನೃಪರುಗಳ ಲೆಕ್ಕಿಪರೆ ॥ ೮೩

ಎನ್ನ ಬಿಡೆಲೆ ಸ್ವಾಮಿ ತನ್ನ ಬಿಡೀಕ್ಷಣ
ವೆನ್ನುತ ಬಲು ತೀವ್ರದಿಂದ ।
ಮನ್ನೆಯರುಗಳು ಮೂದಲಿಸಿ ಮುತ್ತಿದರಿಪು
ಗುನ್ನಿಗಳನು ತೂರಿದರು ॥ ೮೪

ಇರಿದರು ನೇಜೆಯುದಲಿ ಮೇಲಕೇರುವ
ದುರಗಲಿಗಳ ಖಡ್ಗದಿಂದ ।
ತರಿದು ತುಂಡಿಸಿ ತೂರಿ ರಣ ಭೂತ ನಿಕರವ
ನೆರಹಿದರೇನ ಬಣ್ಣಿಸುವೆ ॥ ೮೫

ಇಟ್ಟರು ಬೇಗಿಟ್ಟಿಯಲಿ ಕೆಲರೇರುವ
ದಿಟ್ಟರ ಜವ ದಾಡೆಯಿಂದ ।
ಮೆಟ್ಟಿ ಕೊರಳ ಕೊಯ್ದು ಪ್ರಳಯದ ಕಾಲಗೆ
ಕಟ್ಟರವೆಯ ಮಾಡಿದರು ॥ ೮೬

ಕರುಳುಗಳೊಕ್ಕು ಕಾಳಿಜ ಹಾಯ್ದು ನಿಡು ನರ
ಹರಿದು ಚೆನ್ನೀರ್ಗಳು ಹರಿದು ।
ಬಿರಿದು ನೆಟ್ಟೆಲು ಮೈ ಮರೆದಾಗ ರಿಪು ಬಲ
ಹೊರಳದುದೇನೆಂಬೆನದನು ॥ ೮೭

ತುಂಡಾಗಿ ಕೈ ಕಾಲು ಜೋಡು ಸೀಸಕಗಳು
ಖಂಡಿಸಿ ಸಿರದ ಚಿಪ್ಪರಳ ।
ಖಂಡ ದಿಡ್ಡಿಗಳದ್ದು ಕರ್ಣಾಟಕ ಬಲ
ದಿಂಡುರುಳದುದಾ ಕ್ಷಣದೆ ॥ ೮೮

ಹರಿವ ಪ್ರವಾಹದುರುಬೆಯ ಸೈರಿಸದಾಗ
ಜರಿವ ಮಳಲ ಕಟ್ಟೆಯಂತೆ ।
ಉರುಳಿ ಬಿದ್ದುದು ಭೂಮಿಯೊಳಗೆ ಕರ್ಣಾಟಕ
ದರಿ ಬಲವೇನ ಬಣ್ಣಿಸುವೆ ॥ ೮೯

ಬಿರು ಗಾಳಿಯಲೆಗೆಣೆ ಸೆಗೆದ್ದು ತೂರುವ
ತರಗೆಲೆಗಳ ಮೊತ್ತವೆನಲು ।
ಸರಿದೋಡಿದುದು ಕಂಠೀರವೇಂದ್ರನ ಭಟ
ರುರುಬೆಗೆ ಪರ ಬಲವಾಗ ॥ ೯೦

ಒಬ್ಬರ ಕಣ್ಣಿಗೊಂದಾಳು ಸಾವಿರವಾಗಿ
ಮಬ್ಬುವಿಡಿದು ಕಾಣಿಸಲು ।
ಉಬ್ಬು ಮುರಿದು ಖಾನರು ಹಿನ್ನೆಲೆಗೈದಿ
ತಬ್ಬಿಬ್ಬಿಗೊಂಡರಾ ಕ್ಷಣದೆ ॥ ೯೧

ಪುರ ತಳ ಲಗ್ಗೆಗೇರಿದ ಖಾನ ಖಾನರ
ಮುರಿಯಲಿರಿದು ಬೀಳಗೆಡಹಿ ।
ದುರ ಗಲಿ ಕಂಠೀರವೇಂದ್ರ ಸು ಭಟರನು
ಹೊರ ಕಾಪ ಬಲಿದ ಪಟ್ಟಣಕೆ ॥ ೯೨

ಬಳಸಿದ ತಳಿಯ ಮುರಿದು ಮೇರುವೆಗಳ
ಬಲು ಶಿಖಿಗಾಹುತಿಯಿತ್ತು ।
ಸಲೆ ಸುರಂಗಗಳ ಘಾತವ ಹೂಳಿದರಾಗ
ತಳುವದೆ ಹೊರ ಕಾಹಿನವರು ॥ ೯೩

ನೋಡುವೊಡಳವಲ್ಲದಿದಿರಾದ ಖಳರ ವಿ
ಭಾಡಿಸಿ ತಲೆಗಳ ಹೊಯ್ದು ।
ಕೂಡೆ ಬೊಬ್ಬಿರಿದಾಗ ಹೊರ ಕಾಹಿನಭಟರು
ಪಾಡು ಪಂಥಗಳ ಮೆರೆವರು ॥ ೯೪

ಹೆಣಗಳನೆತ್ತುವರುರುಬಿ ಚೌ ದಿಸೆಯಲಿ
ರಣಕಿದಿರಾದ ತುರುಕರ ।
ಕ್ಷಣದೊಳಗಿರಿವಾಗ ಬೀಳ್ಗೆಡಹಿ ಶೌರ್ಯ
ದಣಿಯ ಮೆರೆದರೇ ವೀಳ್ಯ ॥ ೯೫

ತರಣಿ ಮಂಡಲವ ಮುಸುಕಿದ ಕತ್ತಲೆಯನು
ಕಿರಣದಾಳ್ಗಳು ಮುರಿಯೊತ್ತಿ ।
ಮೆರೆವೋಲು ಖಳರನೋಡಿಸಿ ಹೊರ ಕಾಹಿನ
ಚರರು ಚೌ ದಿಸೆಯೊಳೊಪ್ಪಿದರು ॥ ೯೬

ನೆರೆ ಗುಹೆಯಿಂದೆದ್ದ ಸಿಂಹ ಗರ್ಜನೆಗಳ್ಕಿ
ಪರಿದೋಡಿ ಮದ ಗಜವಿಂಡು ।
ನೆರೆದು ದೂರದಲಿ ನಿಟ್ಟಿಸುವಂತೆ ತುರುಕರ
ಪರಿವಾರವೆಸೆದುದಾಚೆಯಲಿ ॥ ೯೭

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದ ಸುಧವರ್ಣಾನುಬಂಧಿ ॥ ೯೮

೧೪ನೆಯ ಸಂಧಿ ಸಮಾಪ್ತಂ

# ಹದಿನೈದನೆಯ ಸಂಧಿ

## ವಿಷಮ ಯುದ್ಧ

**ಸೂಚನೆ** ॥ ಒಡನೆ ಕಗ್ಗೊಲೆಯು ಕಾಳಗದಲ್ಲಿ ಖಾನರ
ಕಡಿದೋಡಿಸಿದ ನರಸೇಂದ್ರ ॥

ಪುರ ತಳ ಲಗ್ಗೆಗೇರಿದ ಖಾನ ಖಾನರು
ಮುರಿದೋಡಿ ದೆಸೆ ದೆಸೆಗಾಗ ।
ಪುರವ ಬಿಟ್ಟರೆ ಗಾವುದದಲಿ ಬೀಡಿಳ
ದಿರುವ ಭಂಗವನೇ ವೇಳ್ವ ॥ ೧

ಬಳಸಿ ಬಿದ್ದಿಹ ಹೆಣಗಳನೆತ್ತಲಮ್ಮದೆ
ಸಲೆ ನೊಂದು ಖಾನ ಮುಲುಕರು ।
ತಳತಂತ್ರಗೂಡಿ ಹಿನ್ನೆಲೆಗೈದಿ ಬೀಡಿಳ
ದಳವ ನಾನೇನ ಬಣ್ಣಿಸುವೆ ॥ ೨

ಆ ಸಮಯದಲಿ ಬೆಳಗು ಜಾವಗತ್ತಲೆ
ಬಾಸಣಿಸಲು ಭೂಮಿಯನು ।
ಗಾಸಿಯಾಗಿರಲೋಡಿದ ಖಳ ಬಲ ವಾ
ರಾಸಿ ಮೌನದೊಳೊಪ್ಪಿರಲು ॥ ೩

ದೊರೆ ರಾಯ ನರಸೇಂದ್ರನ ದಳ ಪತಿಯಾಗ
ಕರಿಸಿ ಬೇಹಿನ ಚರರುಗಳ ।
ತುರುಕರ ಪಾಳಯಕ್ಕೈದಿ ನೀವವರಿರು
ವಿರವನರುಹಿ ತಮಗೆಂದ ॥ ೪

ಎನಲು ಹಸಾದವೆಂದೆನ್ನುತಲಾ ದೂತ
ರನಿತರೊಳ್ ಬೇಗನೆ ನಡೆದು ।
ಘನವಾಗಿ ಲಗ್ಗೆಯೊಳಗೆ ನೊಂದ ವೈರಿಗ
ಳನುವ ನಿಟ್ಟಿಸಿ ತಿರುಗಿದರು ॥ ೫

ಬಂದು ಚರರು ದಳಪತಿಯಿದಿರೊಳಗಾಗ
ನಿಂದು ಕರಾಬ್ಜವ ಮುಗಿದು ।
ಇಂದೀಗ ತುರುಕರನಿರಿದೋಡಿಸುವ ವೇಳೆ
ಯೆಂದು ಬಿನ್ನಹ ಮಾಡಿದರು ॥ ೬

ನೆರೆ ಗಾಯ ಪಡೆದಿಹರ್ಕೆಲರು ನೊಂದವರಿಗೆ
ಮರುಗಿ ಮುಂಗೆಟ್ಟಿಹರ್ಕೆಲರು ।
ಸುರೆಯ ಸೊಕ್ಕೇರಿ ಮೈ ಮರೆದಿಹ ತುರುಕರ
ಪರಿವಾರವಿದೆ ಚಿತ್ತೈಸು ॥ ೭

ಬೆಳಗು ಜಾವದ ಬಲು ನಿದ್ರೆಗೆ ಮನವಿ
ತ್ತಿಳಿದು ಕೊಲುವರನರಿಯದೆ ।
ತಳತಂತ್ರವಿದೆ ತುರುಕರ ನಾವು ನೋಡಿ ಬಂ
ದಳವಿಂತೀಗೆಂದರಾಗ ॥ ೮

ಕೇಳಿ ನಗುತ ದಳಪತಿ ನರಸೇಂದ್ರ ಭೂ
ಪಾಲನಿದ್ದೆಡೆಗೈತಂದು ।
ಬಾಳಕೆ ಕರ ಪುಟಾಂಜಲಿಯಿತ್ತು ಬಲು ಕಾರ್ಯ
ದಾಳಾಪವ ಬಿನ್ನವಿಸಿದ ॥ ೯

ಇದು ವೇಳೆ ಚೇಯ ಕಗ್ಗೊಲೆಯ ಕಾಳಗದಲ್ಲಿ
ಮದ ಮುಖ ಖಾನನ ಬಲವ ।
ಸದೆದೆಬ್ಬಿಸ ಬೇಕೆಂದಾಗ ದಳಪತಿ
ಮುದ ವಿಂಗೆ ಬಿನ್ನವಿಸಿದನು ॥ ೧೦

ಆದೊಡೊಳ್ಳಿತು ನಮ್ಮ ಬಲ ಸರ್ವ ಸನ್ನಾಹ
ವೈದಿ ಬಂದಿರಲೆಂದಾಗ ।
ಮೇದಿನೀಶ್ವರ ದಳ ಪತಿಗೆ ನೇಮಿಸುತನು
ವಾದನಾಹವಕಾ ಕ್ಷಣದೆ ॥ ೧೧

ಮುತ್ತಿನ ದಗಲೆ ವಜ್ರದ ಜೋಡು ಸಿರದಲಿ
ಬಿತ್ತರವಹ ಸೀಸಕದ ।
ಪುಸ್ತಂಗ ತೊಡರಾ ಗಾವಳಿಯಿಂದ ಭೂ
ಪೋತ್ತಮ ನಡೆದನುಬ್ಬಿನಲಿ ॥ ೧೨

ಮಿರುಗುವ ಮಿಸುನಿಯ ದಟ್ಟಿ ಕಟಿಯೊಳೊಪ್ಪಿ
ಮೆರೆವ ರತ್ನದ ಬಾಕಿನಿಂದ ।
ಒರೆಯನುಗಿದ ಖಡ್ಗ ವಿಡಿದು ಕಂಬದೆ ಬಂದ
ನರಸಿಂಹನಂತೆ ರಂಜಿಸಿದ ॥ ೧೩

ಬಿರುದಿನ ಪೊಂಬಾವಡೆ ಸೆಡಕಿನ ವಲ್ಲಿ
ಕೊರಳ ಮುತ್ತಿನ ಜೂಳಯದ ।
ಮಿರುಗುವ ರತ್ನ ಭೂಷಣಗಳಾಂತಿಹ ಹಯ
ಖುರವೆತ್ತಿ ಕುಣಿಯುತ್ತೈದಿದುವು ॥ ೧೪

ಒಡನಾಗ ಜಯ ಘೋಷದಿಂ ರಾಜ ತೇಜಿಯು
ನಡರಿ ಖಂಡೆಯುವ ಚಿಮ್ಮಿಸುತ ।
ಕಡು ತವಕದಲಿ ಕಂಠೀರವ ರಾಜೇಂದ್ರ
ನಡೆದನು ಧುರ ಮಂಡಲಕೆ ॥ ೧೫

ಮೊಳಗುವ ಜಯ ಭೇರಿಯ ರವದಿಂದಾಗ
ತಳತಂತ್ರವ ಕೂಡಿ ಕೊಂಡು ।
ಗಳಲನೆ ಪುರವ ಹೊರಟು ಶುಭ ಶಕುನಗ
ಳುಲುಹನಾಲಿಸುತ್ತೈತಂದ ॥ ೧೬

ದಳ ಪತಿ ನಂಜ ರಾಜೇಂದ್ರ ಲಿಂಗೇಂದ್ರರ
ತಳುವದೆರಡು ಪೌಜ ಮಾಡಿ ।
ಇಳೆಯಣ್ಣ ತನ್ನೆಡ ಬಲದೊಳಂಬಿಟ್ಟಾಗ
ಲಳವಟ್ಟು ನಡೆದನು ರಣಕೆ ॥ ೧೭

ಕರೆ ಕರೆದಾಗ ಮನ್ನೆಯ ಮಂಡಲಿಕರ
ದುರಗಲಿ ನಾಯಕರುಗಳ ।
ನೆರೆ ಮುಂ ಚಕೂಳಿಯ ಜಗಳಕೆ ನೇಮಿಸಿ
ಪರಿವಾರದೊಡನೆ ಬೀಳ್ಕೊಟ್ಟ ॥ ೧೮

ಬಿರುದಿನ ಕುದುರೆಗಳಗಣಿತವಹ ಬಲ
ಕರಿ ಘಟಾವಳಿಗಳುಗ್ಗಡಲಿ ।
ದುರ ಗಲಿ ನರಸೇಂದ್ರ ರಾಯ ಮೋಹರದೊಳು
ಪರಿ ಶೋಭಿಸಿದನುಬ್ಬಿನಲಿ ॥ ೧೯

ಗಜಗಳ ಬೃಂಹಿತ ಹಯದ ಹೇಷಾ ರವ
ನಿಜ ಪದಾತಿಯ ಬೊಬ್ಬಾಟ ।
ವಿಜಯ ವಾದ್ಯಗಳಬ್ಬರ ರಾಯ ಪೌಜಲಿ
ತ್ರಿ ಜಗಕ್ಕೆ ಭಯವ ಬೀರಿದುವು ॥ ೨೦

ಕುಂತ ತೋಮರ ಖಡ್ಗ ಸುರಗಿ ಭಲ್ಲೆಹಗಳ
ಕಾಂತಿ ಮುಸುಕೆ ಚೌದೆಸೆಯ ।
ಹೊಂತಕಾರಿಗಳಾಗ ರಾಯ ಮೋಹರದಲಿ
ಪಂತದೊಳೆಸೆದರುಬ್ಬಿನಲಿ ॥ ೨೧

ಇದೆ ಬಂದೆವು ಕಗ್ಗೊಲೆಗೆಚ್ಚರಿನೊಳ
ಗಿದಿರಾಗೆಂದರಿಗಳ್ಗೆ ।
ಮುದದಿಂದ ದೂತರನಟ್ಟಿ ಯಾ ಕ್ಷಣದೊಳು
ಕದನಕ್ಕೈದಿದರು ಮನ್ನೆಯರು ॥ ೨೨

ಕೊಂಬು ಕಾಹಳೆ ರಾಯ ಭೇರಿ ಬುರುಗು ಬಲು
ಬೊಂಬುಳಿಯಬ್ಬರಗೂಡಿ ।
ಮುಂಬರಿದುರುಬುವ ಭಟರ ಕೋಲಾಹಲ
ತುಂಬಿತಾಕಾಶ ಮಂಡಲವ ॥ ೨೩

* ಇರಿ ಕಡಿ ತರಿ ಯುರಿ ಯಿಂದು ವೈರಿಗಳನೆಂ
ದುರುಬೆ ಚಾ ದೆಸೆಯೊಳಗಂದು ।
ದುರ ಗಲಿ ಕಂಠೀರವೇಂದ್ರ ನಿಟ್ಟಿಸೆ ಭಟ
ರುರುಬಿ ಮುತ್ತಿದರರಿಗಳನು ॥ ೨೪

ಬರ ಸಿಡಿಲುಗಳ ಸಮೂಹವಬ್ಬರಿಸುತ
ಗಿರಿ ಶಿಖರಗಳ ಹೊಯ್ವಂತೆ ।
ಬಿರುದಿನ ಹೊಣಕೆಯ ಹೊಂತಕಾರಿಗಳಾಗ
ತರುಬಿದರರಿ ವಾಹಿನಿಯ ॥ ೨೫

ಕಂಡನು ಕಂಠೀರವೇಂದ್ರನ ಬಲ ಮುಂ
ಕೊಂಡು ಮುಸುಕಿದಬ್ಬರವನು ।
ಚಂಡ ಪರಾಕ್ರಮಿ ರಣ ಧೂಳಿ ಖಾನನು
ದ್ದಂಡದೊಳೇರಿದ ಹಯವ ॥ ೨೬

ಮುಳಿದು ಕಣ್ಗಿಡಿ ಗೆದರುತ ಖಾನ ಹಿನ್ನೆಲೆ
ಗೆಳಸಿದೊಜ್ಜೀರ ಮುಲುಕರ ।
ಸಲೆ ಜರೆದದ್ದರಿಸುತ ಫೌಜನಲ್ಲಲ್ಲಿ
ಬಲಿದನು ಬಹುಳ ಸನ್ನಹದೆ ॥ ೨೭

ಕಿರಿದು ಬಲಕೆ ಹೆಬ್ಬಲ ಮುರಿದೋಡಲು
ಪಿರಿದಳ ಜಸ ವೆಣ್ಣು ನಮ್ಮ ।
ಸೆರಗ ಪಿಡಿವಳೆಂದು ನುಡಿದು ಖಾನರನಾಗ
ದುರಕನು ಗೈದನೇ ವೇಳ್ವ ॥ ೨೮

---

* ಇರಿ ಕಡಿ ತರಿ ಯಿರಿ ಯೆಂಬ ವೈರಿಗಳನೆಂದುರುಬಿದರರಿವಾಹಿನಿಯು ಚಾಾದೆಸೆಯೊಳಗಂದು ॥

ಕಲಿಯೇರಿ ರಣಧೂಳಿಖಾನ ಖಾನರು ಸಹ
ತಳತಂತ್ರವ ಕೂಡಿಕೊಂಡು |
ಚಲದಂಕ ಕಂಠೀರವೇಂದ್ರನ ಬಲಕಾಗ
ಮಲೆತು ನಿಂದು ಕೋಪದಿಂದ || ೧೯

ಕವಿ ಕವಿ ಕಗ್ಗೊಲೆಗೈದಿದ ಮೈಸೂ
ರವನಿಪತಿಯ ಮಾರ್ಬಲವ |
ತವೆ ಮುರಿ ಮುರಿಯೆಂದು ಖಾನ ಖಾನರು ಬಂ
ದವಗಡಿಸಿದರು ಬೊಬ್ಬಿಡುತ || ೨೦

ಹಿರಿದು ಜೀಮೂತಮಂಡಲ ಭೋರ್ಗರೆದಾಗ
ಕರೆವ ಕಾರ್ಮುಳಗಳಂಗದಲಿ |
ಬಿರುದಿನ ಖಾನರು ಸಿಂಗಾಡಿಯಂಬಿನ
ಸರಿಗರೆದರು ಭೋಯೆನುತ || ೨೧

ಪಾಳೆಯದಂಗರಕ್ಷೆಗೆ ಸುತ್ತ ಬಳಸುವ
ದಾಳಿಯ ತುರಗ ರಾವುತರು |
ಬಾಳ ಜಡಿದು ಮುಂದಕುರುಬುವ ಸುಭಟರ
* ತೋಳನೊಡನೆ ತರುಬಿದರು || ೨೨

ಪುರದ † ಲಗ್ಗೆಗೆನೊಂದ ಬಲವೆಂದು ಹೊರಹೊರ
ಟಿರದೆ ನೀವೆಮ್ಮ ಮೇಲುರುಬೆ |
ನೆರೆ ತಲೆ ಪರಿದೊಪಟ್ಟೆಯಲಿ ಕಾದುವ ಕಲಿ
ತುರುಕರೆಂದುರೆ ಗರ್ಜಿಸಿದರು || ೨೩

ಗಾಯಗಾಣಿಸಿ ಹಲ್ಲ ಕಿರಿದು ಸಲಾಮೆಂದು
ಬಾಯ ಬಿಡುವ ಹಂದೆಗಳಿರ |
ದಾಯದ ಪಂತವೆ ನಿಮಗೆಂದು ಸುಭಟನಿ
ಕಾಯ ಮುತ್ತಿತು ತುರುಕರನು || ೨೪

* ತೋಳಗೊಡದೆ. † ಲಗ್ಗೆಯಲ್ಲೊಂದ.

ಮಂಡಲೇಶ್ವರ ನರಸೇಂದ್ರನ ಪಟ್ಟದ
ಕುಂಡಾಲಗಳ ಕೈ ಗುಣದ ।
ದಂಡಿಯ ನೋಡೆಂದು ಮನ್ನೆಯ ನಿಕರ ಮುಂ
ಕೊಂಡುರುಬಿದರರಿಗಳನು ॥ ೩೫

ಪಿಡಿದ ಬಲ್ಲೆಹದಿಂದಲಿರಿದಿರಿದಶ್ವದ
ಗಡಣವ ಬೀಳ ಗೆಡಹುತ ।
ತುಡುಕಿ ಮುಂದಲೆಯ ರಾವುತರ ಕೊರಳ ಬೇಗ
ಕಡಿದಿಟ್ಟರು ಖಡ್ಗದಿಂದ ॥ ೩೬

ಸುರಗಿಯ ಸುಭಟರು ಸೂಟಿಯೊಳ್ಕೈತಂ
ದುರವಣಿಸುವ ತುರುಕರನು ।
ಉರವನಿಬ್ಬಗೆ ಮಾಡಿ ಬಿಸಿ ರಕ್ತವ ಭೂತ
ಕಿರದೆ ಚೆಲ್ಲಿದರಾ ಕ್ಷಣದೆ ॥ ೩೭

ಚಿನ್ನದ ಹರಡೆ ಯಿಟ್ಟಗಳೊಳಗದವ
ರುನ್ನತದೊಳಗೈದಿ ಬರುವ ।
ಮನ್ನೆಯ ಖಾನ ವಜೀರರ ಬಲವನು
ಬೆನ್ನಟ್ಟಿ ಬೀಳಲಿರಿದರು ॥ ೩೮

* ಹರಿಗೆಯ ಗದೆಯ ನೇಜೆಯದೊಂಟಿರಿಗಾರ
ರುರವಣಿಸುವ ತುರುಕರನು ।
ಮುರಿಯಲಿರಿದು ಮೂಗರಿದು ತಂದಾಕ್ಷಣ
ಸರಗಟ್ಟಿ ಮೆರಿಸಿದರಾಗ ॥ ೩೯

ಬೆಳ್ಳಿಯ ಕಟ್ಟನ ಬಿಲ್ಲಿನ ವೀರರು
ಬಲ್ಲಿದ ಖಾನ ಖಾನರನು ।
ಚಲ್ಲವರಿಯಲೆಚ್ಚು ಗಾಯುಗಳನು ಮಾಡಿ
ತಲ್ಲಣ ಗೊಳಿಸಿದರಾಗ ॥ ೪೦

* ಹರಿಬಿಯುಗರೆಯುನಿಝೋಯುದದೊಂಟಿರಿಗಾರ.

ಮೋಡಿಯು ಹರಿಗೆಯು ಭಟರು ನೇಜೆಯುಗಳ
ನೀಡುತಿರುವ ಮುಲ್ಲುಕರ ।
ಪಾಡುಗೆಡಿಸಿ ಹೊಯ್ದುರೆಯಟ್ಟ ದೆಸೆ ದೆಸೆ
ಗೋಡಿಸಿದುದನೇ ವೇಳ್ವ ॥ ೪೧

ಪ್ರಳಯದ ದಾವಾಗ್ನಿಯು ದಳ್ಳುರಿ ಮುತ್ತಿ
ಮುಳಿದು ಬನವ ಸುಡುವಂತೆ ।
ಕಲಿಗಳು ಕರೆವ ಬಾಣದ ಶಿಖಿ ಖಳ ಬಲ
ದೊಳ ಹೊಕ್ಕು ಸದೆದುವಾ ಕ್ಷಣದೆ ॥ ೪೭

ಕಡು ಕೋಪ ವಿಡಿದ ರುದ್ರನ ಕಣ್ಗಿಡಿಗಳ
ಗಡಣಗಳನೆ ಪಟು ಭಟರು ।
ಇಡುವ ತುಪಾಕಿಯು ಗುಂಡುಗಳುರುಬಿ ಕಂ
ಗೆಡಿಸಿದುವರಿ ಮಾರ್ಬಲವ ॥ ೪೩

* ನೂಕಿ ಸಿಂಗಾಡಿಯುಂಬನು ರಿಪುದಳಿಗಳ
ನಾಕಕ್ಕೆ ಸಿಡಿಯುಲೆಸೆಯಲು ।
† ಸೋಕಿನಲುಗುತಿಹ ಕೆನ್ನೀರ್ಗಳ ರಣ
ಶಾಕಿನಿಯರುಗಳೀಂಟಿದರು ॥ ೪೪

ಇಟ್ಟರು ಕೈಯಿಟ್ಟಿಯಲಿ ಮುಂದಕ್ಕೈದುವ
ದಿಟ್ಟರ ಜವ ದಾಡೆಯಿಂದ ।
ಮೆಟ್ಟಿ ಯಿರಿದು ಯಮ ರಾಜನ ಕೈಲೆಡೆ
ಗೊಟ್ಟರೇನೆಂಬೆನದ್ಭುತವ ॥ ೪೫

ಹರಿಗೆಗಳನು ಖಂಡಿಸಿ ಬೆನ್ನೊಳಗಿಹ
ತರಕಸಗಳ ಹುಡಿ ಮಾಡಿ ।
ಸಿರದ ಮುಂಡಾಸವ ಸೀಳ್ದಿಕ್ಕಿ ದಗಲೆಯ
ಪರಿಪಾಟಿ ಮಾಡಿದರಾಗ ॥ ೪೬

* ತೊಟ್ಟಸಿಂಗಾಡಿಯುಂಬಿಲಿ. † ಮೋಕಿಸಲುಗುತಿಹ.

ಸಿಂಗಾಡಿಗಳ ತುಂಡಿಸಿ ನೇಜೆಯಗಳ
ಲಂಗಿಸಿ ಸೆಳೆಸೆಳೆದಿಡುತ ।
ಹಿಂಗದೆ ಗಾಯ ಗಾಣಿಸಿ ಖಾನ ಖಾನರ
ಭಂಗಕ್ಕೆ ತಂದರಾ ಕ್ಷಣದೆ ॥ ೪೭

ಸಾಯದರಿಲ್ಲ ಖಂಡೆಯದ ಪೆಟ್ಟಲಿ ನೆರೆ
ನೋಯದರಿಲ್ಲ ಬಾಕಿನಲಿ ।
ಗಾಯ ಪಡೆಯದವರಿಲ್ಲದಾಖಳ ಬಲ
ದಾಯಾಸವನೇನೆಂಬೆ ॥ ೪೮

ಆರ ನೋಡಲು ಸುರುಟಿಯ ಕತ್ತಿಗಳ ಹುಯ್ಲ
ಧಾರೆಗಿಕ್ಕಡಿಯಾದವರು ।
ಆರ ನೋಡಲು ನೇಜೆಯದ ಗಾಯದೆ ನೊಂದ
ಮಾರಣದರಿಗಳೊಪ್ಪಿದರು ॥ ೪೯

ಉರುಳುವ ನರಳುವ ತೆರಳುವ ಹೊರಳುವ
ಜರಳ ಕಚ್ಚುವ ಬೇಡಿಕೊಳ್ವ ।
ಕರುಳು ಕಾಳಿಜಗಳು ಸುರಿವ ಖಾನರುಗಳ
ನೆರವಿ ಯೊಪ್ಪಿತು ರಣದೊಳಗೆ ॥ ೫೦

ಕರುಳ ಪೂಗೊಂಚಲು ಖಂಡದ ಕಳಿಕೆ ಬಂ
ಧುರದೆಲು ಶಾಖೆಗಳಾಗೆ ।
ಪಿರಿದು ಚೆಂದೊರಳದಳಿರ ಕಬಂಧ ದ್ರುಮ
ಮೆರೆದುವು ಖಡ್ಗ ಚೈತ್ರದಲಿ ॥ ೫೧

ರಣದೊಳು ಕೆಡೆದ ಕರಿಗಳಟ್ಟೆ ಕಾಳ್ಮೇಘ
ಕ್ಷಣ ರುಚಿ ಶರಗಳ ಬೆಳಕು ।
ಅಣೆದೈದಿದರಿಗಳ ಕೊರಳ ಬನಗಳಲ್ಲಿ
ಕುಣಿದುವು ಭಟರಸಿ ಕೇಕಿ ॥ ೫೨

ತೊರಳೆ ತೊಂಗಳ ಮಜ್ಜೆ ಮಾಂಸಗಳನು ಸವಿ
ದುರು ಭೂತದೆಂಜಲು ಕೈಗೆ ।
ಎರೆವ ಘಟದ ವಾರಿಗಳೆನೆ ರಕ್ತವ
ಕರೆದುವು ಭಟರ ಖಡ್ಗಗಳು ॥ ೫೩

ಭಲರೆ ಭಾಪುರೆ ಕಲಿ ಕಂಠೀರವೇಂದ್ರನ
ಸಲೆ ಪಟ್ಟದಾನೆಗಳನುತ ।
ನಲಿದು ಪಂದಿಗಳು ಕೈವಾರಿಸೆ ರಕ್ತದ
ಬಲುಗಾಲುವೆಯ ಪರಿಸಿದರು ॥ ೫೪

ಕರಿಗಿರಿಯೊಳು ದಗ ದಗಿಸಿ ಹಯಾವಳಿ
ಯುರು ಗುಲ್ಮದೊಳು ಭುಗು ಭುಗಿಸಿ ।
ಬಿರುದಿನ ಮನ್ನೆಯ ಭಟರ ಪ್ರತಾಪಾಗ್ನಿ
ಮೆರೆದುದು ರಿಪುವನದೊಳಗೆ ॥ ೫೫

ಉಸಿರಲಳವೆ ನರ ಸಿಂಹನ ಕಾಲ್ದುಳಿ
ಯೆಸಕದೊಳಗೆ ಹಿರಣ್ಯಾಕನ ।
ಅಸಮ ಮಾರ್ಬಲನುಗ್ಗಾದಂತೆ ತುರುಕರು
ದೆಸೆ ಗೆಟ್ಟುರುಳಿದರಾಗ ॥ ೫೬

ರಾಮಚಂದ್ರನ ಶರದಲಿ ಖರ ದೂಷಣ
ಸ್ತೋಮ ಮಡಿದ ತೆರದಂತೆ ।
ಭೂಮಿಪಾಲನ ಸು ಭಟರ ಶೌರ್ಯದಲ್ಲಿ ನಿ
ರ್ನಾಮವೈದಿದರು ತುರುಕರು ॥ ೫೭

ಹನುಮನ ಕಾಲ್ದುಳಿಯಲಿ ಕೋಟಿ ರಕ್ಕಸ
* ರನುಗೆಟ್ಟಸು ಮರೆದಂತೆ ।
ಘನರಾದ ತುರುಕರು ಕಂಠೀರವೇಂದ್ರನ
ಮನೆಯಾಳ್ಗಳಿಂದ ಮಡಿದರು ॥ ೫೮

* ರನುಗೆಟ್ಟಸಿಯುರದಂತೆ.

ವೀರಭದ್ರನ ಮುಸಕದಲಿ ದಕ್ಷನ ಬಲ
ಕಾರಗಲಸಿದಂದದಲಿ ।
ಪೂರೈಸಿ ತುರುಕರು ಕಂಠೀರವೇಂದ್ರನ
ಕೂರಸಿಯಲಿ ನುಗ್ಗಾಯ್ತು ॥ ೫೯

ತೂರೆಯುತ ಮೊರೆಯುತ ಸುರಿಯುತ ರಕ್ತವ
ಕರ ಚರಣಗಳಾಡಿಸುತ ।
ಅರಿ ಪೆಣಗಳು ಲೆಕ್ಕವಿಲ್ಲದೆ ನೋಟಕ
ಚ್ಚರಿಯ ಪುಟ್ಟಿಸುತೊಪ್ಪಿದುವು ॥ ೬೦

ಅರೆ ಗಚ್ಚಿದ ನಾಲಗೆ ಕಡೆ ವಾಯೊಳು
ಸುರಿ ಜೊಲ್ಲು ಬಿಟ್ಟ ಕಣ್ಣುಗಳ ।
ನೆರೆ ಕೆತ್ತುವಂಗುಳ * ಜೀವ ಬಿಡುವ ಹೆಣ
ಧರಣಿಯೊಳ್ ಮೆರೆದುವದ್ಭುತದೆ ॥ ೬೧

ಒಡೆದ ತಲೆಗಳಿಂದ ಕಡಿದ ಕಾಲುಗಳಿಂದ
ಬಿಡದೆ ತುಂಡಾದ ಕೈಯಿಂದ ।
ಸಿಡಿದ ತೊಡೆಗಳಿಂದ ನಿರಿ ಗರುಳುಗಳಿಂದ
ಜಡಿದುದು ರಣ ಭೂಮಿ ಯಾಗ ॥ ೬೨

ಕುಣಿವ ಮುಂಡಗಳಿಂದ ಮಣಿವ ಭೂತಗಳಿಂದ
ಅಣೆದು ಚಿಮ್ಮುವ ರಕ್ತದಿಂದ ।
ಗಣನೆ ಯಿಲ್ಲದೆ ಮುಸುಕಿದ ಖಗ ಮೃಗದಿಂದ
ರಣ ಭೂಮಿ ಮೆರೆದುದೇ ವೇಳ್ವ ॥ ೬೩

ಕಡಿದ ಹರಿಗೆ ಸೀಳಾದ ಸಿಂಗಾಡಿಗ
ಳುಡಿದ ಹಕ್ಕರಿಗೆ ಯಂಚೆಗಳ ।
ಬಿಡದೆ ಪರಿದ ದಟ್ಟದಗಲೆ ಜೋಡುಗಳಿಂದ
ಜಡಿದುದು ರಣ ಭೂಮಿ ಯಾಗ ॥ ೬೪

* ಬಿದ್ಧ.

ಮುರಿದ ಸತ್ತಿಗೆ ಡಾಳು ಪರಿದ ಟೆಕ್ಕೆಯಗಳಿಂ
ದಿರದಾಗ ಜೀವವ ತೊರೆದ ।
ಕರಿ ತುರಗಗಳ ಸಾಲಿಕ್ಕಿದ ಮಿದೆಯಿಂದ
ಮೆರೆದುದು ರಣ ಭೂಮಿ ಯಂದು ॥ ೬೫

ಖಂಡಿಸಿದುರು ಬಲ್ಲೆಹ ಸರ ನೇಜೆಯು
ತುಂಡಾದ ಖಡುಗ ಕುಂತಗಳ ।
ದಿಂಡುದರಿದು ಕೆಡಹಿದ ಸಾಲ ಕೊಲ್ಲಾರ
ಬಂಡಿಗಳೆಸೆದುವಾ ಧುರದೆ ॥ ೬೬

ಸೀಳಾದ ನಪಿರಿ ಬುರುಗು ಡೋಳು ಕೊಂಬಿನ
ಕಾಳೆಯೊಡೆದ ಡಮಾಮಿಗಳ ।
ಹೋಳಿನೊಟ್ಟಲ ಸಂದಣಿಗಳ ಧಾಳಾ
ಧೂಳಿ ಯೊಪ್ಪಿತು ರಣದೊಳಗೆ ॥ ೬೭

ಹೊಸ ಹೆಣದಾಲಿಗಳನು ಚಂಚು ಪುಟದಿಂದ
* ಮಿಸುಕಿ ಕುಟುಕು ಗೊಳುತಾಗ ।
ಎಸೆದುವು ಬಲಿ ಭುಕ್ಕುಗಳು ಮೊತ್ತ ಮೊತ್ತದಿಂ
ದೊಸೆದಾ ರಣ ಭೂಮಿಯೊಳಗೆ ॥ ೬೮

ಜೋಲುವ ಕೆಂಗರಳು ಗಳ ಕೊಕ್ಕಲಿ ಕಚ್ಚಿ
ಕೀಳುತ ಸವಿ ಸವಿದೊಡನೆ ।
ಮೇಲಾದ ರಣ ಭೂಮಿಯೊಳಗೆ ಕೌಶಿಕ ಕುಲ
ಜಾಲವೊಪ್ಪಿದುವೇ ವೇಳ್ವ ॥ ೬೯

ಬಲುಮೆಯಿಂ ನೆಣನೆಳದೆಳದು ಖಂಡವ ಕಚ್ಚಿ
ಕೊಳುತ ಮೇಲಕೆ ಮೊಗ ನೆಗಹಿ ।
ಸಲೆ ಭೀಕರದೆ ಕೂಗುವ ಸೃಗಾಲಂಗಳ
ಬಳಗವೊಪ್ಪಿದುವಾ ಧುರದೆ ॥ ೭೦

* ಮುಸುಕಿ.

ತಲೆಯೋಡುಗಳಲ್ಲಿ ರಕ್ತವ ತುಂಬಿ ಕೈ
ಯೊಳುರೆ ಸವಿದು ಚಪ್ಪರಿದು ।
ಸಲೆ ಮದಿರಾವೇಶದಲಿ ಕುಣಿಕುಣಿದಾಗ
ನಲಿದಾಡಿದುವು ಮರುಳುಗಳು ॥ ೭೧

ಖಂಡದಿಂಡೆಗಳ ತೆಗೆದು ಬಾಯೊಳು ತುಂಬಿ
ಕೊಂಡು ಚಪ್ಪಳೆಯಿಕ್ಕಿ ನಲಿದು ।
ಕೊಂಡಾಡಿ ಭೂಪನ ಸುಭಟರ ಡಾಕಿನಿ
ತಂಡವೆಸೆದುವಾ ರಣದೆ ॥ ೭೨

ಕರುಳ ತೊಂಡಲು ಖಂಡದ ಬಣ್ಣ ಬಾಸಿಗ
ನರದ ಹಂಜರ ಚಪ್ಪರದಲಿ ।
ನೆರೆದು ಶಾಕಿನಿಯರು ಮದುವೆಯ ಮಾಡುತ
ಮೆರೆದರು ತಮ್ಮೊಳಗಾಗ ॥ ೭೩

ದುರದಲಿ ಮಡಿದ ಖಾನರ ತಮ್ಮ ಹೆಣಗಳ
ನುರೆ ಕಂಡು ಕರ್ಣಾಟದವರು ।
ಸರಿದರು ಹಿನ್ನೆಲೆಗಾಗಿ ಕಂಠೀರವ
ನುರು ಪರಾಕ್ರಮಕೆಣೆ ಯುಂಟೆ ॥ ೭೪

ಖಾನನ ಸುತರಳಿಯುಂದಿರು ಬಲವಂತ
ಖಾನನ ನಂದನರುಗಳು ।
ಏನೆಂಬೆ ಯೆಕಲಾಸ ಖಾನನಾತ್ಮಜರಂ
ದಾನದಳಿದರಾ ರಣದೆ ॥ ೭೫

ಬಳಿಕ ಮುಸ್ತಫ ಖಾನನ ಮೊಮ್ಮಕ್ಕಳು
ಚಲದಂಕ ಕರಿಯಿಸಾತಿ ಖಾನ ।
ಜಲಹರ ಸಹಜೆ ಮಲ್ಲಿಗೆ ಖಾನನಳಿಯಂದಿ
ರಳಿದರು ರಣ ಮಂಡಲದಲಿ ॥ ೭೬

ಬಳಿಕ ಪಾತ್ಸ್ಯಾಹಿನ ಪಜ್ಕೆ ತ್ತಯೂಟದ ಬಲು
ಸಿಲುಖಾನರೈದು ಸಾವಿರಕೆ ।
ಸಲೆ ಯಮ ಪುರದಲಿ ಬೀಡಾರವಾದುದು
ಬಲುಹ ಬಣ್ಣಿಸರಾರು ಭಟರ ॥ ೭೭

ಖಾನನ ವೈಗಾಪಲಿನ ವಜೀರರ
ದೇನೆಂಬೆ ಕಗ್ಗೊಲೆಯಲ್ಲಿ ।
ಆನಲಾರದೆ ಹತ್ತು ಸಾವಿರ ಮಡಿದು ದು
ಮ್ಮಾನವನಿತ್ತರಾತನಿಗೆ ॥ ೭೮

ಅಂಬರಖಾನನ ಬಳಿಯ ಲಕ್ಕರಿಗಳ
ತುಂಬು ಲೆಕ್ಕಕ್ಕೆ ಸಂದಾಗ ।
ಒಂಭತ್ತು ಸಾವಿರ ಮಡಿದುದು ರಣದಲ್ಲಿ
ಕುಂಭಿನಿ ಹೆಣಮಯವಾಗೆ ॥ ೭೯

ಕರಿಯಾತಿ ಖಾನನದ್ದವ ವೇದೋಜಿಯ
ಗುರುತಿನ ಖಾನ ರಾವುತರು ।
ನೆರೆ ಹತ್ತು ಸಾವಿರ ಮಡಿದರದಾರಣ
ದಿರವ ನಾನೇನ ಬಣ್ಣಿಸುವೆ ॥ ೮೦

ಉಳಿದಿಹ ಖಾನ ಖಾನರುಗಳ ಬಳಿಯಲಿ
ನೆಲಸಿಹ ಬಲುರಾವುತರು ।
ಅಳಿದರು ಲೆಕ್ಕವಿಲ್ಲದೆ ರಣದೊಳಗಾಗ
ಇಳೆಯೆಲ್ಲ ರಕ್ತಾಂಬುವಾಗೆ ॥ ೮೧

ಒಡನೈವತ್ತು ಪಲ್ಲಕ್ಕಿಯನೇರುವ
ಕಡು ಗಲಿ ತುರುಕ ದೊರೆಗಳು ।
ಬಿಡದೈವತ್ತು ಸಾವಿರ ಖಾನರುಗೂಡಿ
ಮಡಿದರು ಕಗ್ಗೊಲೆಯೊಳಗೆ ॥ ೮೨

ಹರವನ ಹಳ್ಳಿ ಸೊಂಡೂರು ದೊರೆಗಳೊಳ
ಗೆರಡು ಸಾವಿರ ಪಟು ಭಟರು ।
ತೊರೆದರು ಜೀವವೆ ಮಿಕ್ಕವರಿಗೆ ಬಂ
ದುರು ಭಂಗವನೇ ವೇಳ್ವ ॥ ೮೩

ಕುಂದುರುಪೆಯ ವೀರರು ರಾಯ ದುರ್ಗದ
ಸಂದ ಭಟರು ಮತ್ತಿವೀಡಾ ।
ಮಂದಿಗಳಳಿದುದ ಕಡೆ ಗಾಣೆನಾ ರಣ
ದಂದವನೇನ ಬಣ್ಣಿಸುವೆ ॥ ೮೪

ಹನುಮನ ಹೈ ಗಾವಲಭಟರು ಬೇಲೂರ
ಜನಪನ ಸಮ್ಮುಖದವರು ।
ಘನ ಪಾಳುಪರೆಯುರಸಿನ ಬಲು ಸು ಭಟರು
ಚಿನ ಕಡಿಯಾದರಾ ರಣದೆ ॥ ೮೫

ಹೊಳವನ ಹಳ್ಳಿ ಬಿಜ್ಜಾವರ ಕೋಳಾಲ
ಬಳಲಾಪುರದರಸುಗಳ ।
ತಳತಂತ್ರ ಮಡಿದುದು ಲೆಕ್ಕವಿಲ್ಲದೆ ಯಾ
ಕೊಳುಗುಳದೊಳಗಾ ಕ್ಷಣದೆ ॥ ೮೬

ನೆರೆ ಗಲಿ ಚಿಕಬಳಲಾಪುರ ಬಾವಲೂ
ರೆರೆಯರ ಹೊಸಕೋಟೆಯವರ ।
ವರ ಕಂಗೊಂದಿ ಮಾಸ್ತಿಯ ಬಲ ಜೀವವ
ತೊರೆದುದೇ ವೇಳ್ವನದ್ಭುತವ ॥ ೮೭

ಪಿರಿದು ಸೀರೆಯ ಬೆಂಗಳೂರಿಕ್ಕೇರಿಯ
ದೊರೆಗಳ ಬಲ ನುಗ್ಗಾಗಿ ।
ಸರಿದರು ಹಿನ್ನೆಲೆಗಾಗಿ ಕಂಠೀರವ
ನುರುಪರಾಕ್ರಮಕೆಣೆಯುಂಟೆ ॥ ೮೮

ನಡುವೆಗಲಿನ ಬೇಸಗೆಯ ಮಾರ್ತಂಡನ
ಕಡು ಝಳದುಬ್ಬರಕಾಗ ।
ಅಡಗುವ ಹಿಮದೊಲಿಪ್ಪತ್ತು ಸಾವಿರ ಬಲ
ಮಡಿದುದು ಕರ್ಣಾಟದವರ ॥ ೨೯

ಅದೆ ಬಂದರು ಕಂಠೀರವೇಂದ್ರನ ಭಟ
ರೊದಗಿದರೀ ಕಡೆಯೊಳಗೆ ।
ಸದೆದು ಮೂಗರಿದೈದುತಿಹರೆಂದು ಪಾಳೆಯ
ಗದಗಾಪುಗೊಂಡುದೇ ವೇಳ್ವ ॥ ೩೦

ವಾರುವಗಳ ಡಾವಣೆ ನೇಣ್ಗಳ ಬಲು
ಬೀರುಗುಣಿಕೆಗಳ ಪರಿದು ।
ಕೇರಿ ಕೇರಿಯೊಳು ತಮ್ಮಿಚ್ಛೆಯೊಳಗೆ ಸಲೆ
ತಾರುಮಾರಾಗಿ ಯೋಡಿದುವು ॥ ೩೧

ಮದ ಕರಿಗಳು ಕಟ್ಟಿದ ಮಲ್ಲ ಗಂಭವ
ನೊದೆದು ಕೆಡಹಿಕೊಂಡಾಗ ।
ಬೆದರಿ ತಮ್ಮಿಚ್ಛೆಯೊಳಗೆ ದೆಸೆ ದೆಸೆಗೈದಿ
ಹದಗೆಟ್ಟೋಡಿಯಾಡಿದುವು ॥ ೩೨

ಬಾಲಕೆ ಕಡಿವಾಣವೆನಿಕ್ಕಿ ಕುದುರೆಯ
ಮೇಲು ಮೊಗಕೆ ಹಲ್ಲಣವ ।
ಪೇಳಲಳವೆ ಕಟ್ಟಿ ಕಂಗೆಟ್ಟು ತುರುಕರ
ಜಾಲವೈದಿತು ದೆಸೆದೆಸೆಗೆ ॥ ೩೩

ಪಲ್ಲಿಯ ಹುಲ್ಲೊಳಡಗಿ ಭೀತಿಗೊಂಡಾಗ
ನಿಲ್ಲದೆ ದೆಸೆಯ ನಿಟ್ಟಿಸುತ ।
ಸೊಲ್ಲೀಯದೆಚ್ಚರಿಪರಿಗೆ ಕೈ ಮುಗಿಯುತ
ಪಲ್ಲ ಕಿರಿದರೇನೆಂಬೆ ॥ ೩೪

ವೀರ ಕಂಕಣಗಳ ಮುರಿದು ಶೃಂಗಾರದ
ಹಾರಗಳನು ತೆಗೆದಿಟ್ಟು ।
ಪೈರಣೆಗಳ ಸೀಳಿ ತಲೆಯ ಕೆದರಿಕೊಂಡು
ತಾರು ತಟ್ಟಾಗಿ ಯೋಡಿದರು ॥ ೯೫

ಜಲ್ಲಿಯ ಬಿಲ್ಲನೀಡಾಡಿ ನೇಜೆಯಗಳ
ನಿಲ್ಲೆಂದರಿಗೀಯುತಾಗ ।
ಸಲ್ಲಲಿತದ ಬಿರುದಗಳ ಬಿಟ್ಟು ಕ್ಷಣ
ತಲ್ಲಣಿಸು ತಲೋಡಿದರು ॥ ೯೬

ಹುತ್ತವನೇರಿದವರು ಹುಲ್ಲುಗಳ ಕಚ್ಚಿ
ಬೆತ್ತಲೆ ನೀರ ಹೊಕ್ಕವರು ।
ಕತ್ತಿ ಕಠಾರಿಯ ಬಿಸುಟ ಕಾಲಾಳಿನ
ಮೊತ್ತವನೇನ ಬಣ್ಣಿಸುವೆ ॥ ೯೭

ಇಂದು ಜೀವವ ಕಾಯ್ದೊಡೆ ನಿನ್ನ ಬಸಿರೊಳು
ಬಂದವರೈಸೆ ನಾವೆನುತ ।
ನಿಂದು ಕಲಿಗಳ ಕಾಲ್ಗೆರಗಿ ಬಿಡಿಸಿಕೊಂಡ
ಹಂದೆಗಳಿಗೆ ಲೆಕ್ಕವಿಲ್ಲ ॥ ೯೮

ಸಿರವನುಳುಹಿ ಮೂಗರಿಯ * ಬೇಡೀಟಿಯ
ಲಿರಿದು ಜೀವವ ಕೊಳ್ಳೆನುತ ।
ಚರಣಕೆ ಮಣಿದುಂಗುರಗಚ್ಚಿದ ರಿಪು
ಪರಿವಾರವೆಸೆದುದಾ ರಣದೆ ॥ ೯೯

ತುರಗವನುಳಿದು ಖಂಡೆಯುವ ಬಿಸುಟು ನಮ್ಮ
ಕೊರಳ ಸಲಹಿಕೊಳ್ಳೆನುತ ।
ಕರವ ಮುಗಿದು ಕಲಿಗಳಿಗೆ ಬಿಡಿಸಿಕೊಂಡು
ತುರುಕ ರಾವುತರೋಡಿದರು ॥ ೧೦೦

* ಬೇಡೀಕ್ಷಣವಿರಿದು.

ಗುಳವನೀಡಾಡಿ ಗಜಗಳ ಮಸ್ತಕಗಳಿಂ
ದಿಳಿದೊಪ್ಪಿಸಿ ಕೊಟ್ಟಾಗ ।
ಬಳಿಕ ನಂಬುಗೆಗೊಂಡು ಜೋದಾವಳಿ ಬೇಗ
ತಳುವದೋಡಿತು ದೆಸೆ ದೆಸೆಗೆ ॥ ೧೦೧

ಒಡೆಯನ ಬಿಟ್ಟಾಗ ಬಂಟನಣ್ಣನನುಳಿ
ದೊಡಹುಟ್ಟಿದನು ತಂದೆಯನು ।
ಕೆಡೆ ನೂಕಿ ಮಕ್ಕಳ ತಂಡವಾ ದುರದಲಿ
ಸಿಡಿದೋಡಿತು ದೆಸೆ ದೆಸೆಗೆ ॥ ೧೦೨

ಬಡಬನ ಬಲು ಜಳವನು ತಾಳಲಾರದೆ
ಕಡಲುರೆ ಬತ್ತುವಂದದಲಿ ।
ಪೊಡವಿಪ ಕಂಠೀರವನ ಪ್ರತಾಪಕೆ
ಸಿಡಿದೋಡಿದರು ತುರುಕರು ॥ ೧೧೩

ಗರುಡನ ಗರಿಯ ಗಾಳಿಗೆ ಫಣಿಗಳ ಮೊತ್ತ
ಮುರಿಗೆಡೆದೋಡುವಂದದಲಿ ।
ನರಸ ರಾಜೇಂದ್ರನ ಸಾಹಸದುರುಬೆಗೆ
ತುರುಕರೋಡಿದರ್ದೆಸೆ ದೆಸೆಗೆ ॥ ೧೦೪

ನರ ಸಿಂಹನ ದಿವ್ಯ ನಾಮ ಸ್ಮರಣೆಗೆ
ದುರಿತಗಳ್ ಪರಿದೋಡುವಂತೆ ।
ದೊರೆ ರಾಯ ಕಂಠೀರವೇಂದ್ರನ ಶೌರ್ಯಕ್ಕೆ
ಮುರಿಗೆಡೆದೋಡಿದರ್ಖಳರು ॥ ೧೦೫

ಅರಗಿನೋಲೆಯ ಕಾರ್ರೈದಿ ಕಾಲಾಗ್ನಿಯ
ಸೆರಗ ಹಿಡಿದು ಜೀವಿಪರೆ ।
ನರ ರೂಪ ನರ ಸಿಂಹನೊಡನೆ ಸೆಣಸಿ ಬಾಳು
ವರಗಳುಂಟೇ ಲೋಕದೊಳಗೆ ॥ ೧೦೬

ಗರುಡನ ಗೃಹದೆ ನಾಗರ ಮರಿ ಕನ್ನವ
ಕೊರೆದುಳಿವುವೆ ಜಗದೊಳಗೆ ।
ನರಸೇಂದ್ರನ ದುರ್ಗವ ಮುತ್ತಿದರಿಗಳು
ಮರಳಿ ಪೋಪರೆ ಜೀವ ಸಹಿತ ॥ ೧೦೭

ಸಿಂಗನ ಕೂಡಣು ಕಲಹದೆ ಕರಿಗಳ
ಜಂಗುಳಿ ಜೀವಿಸಲಹುದೆ ।
ತುಂಗ ವಿಕ್ರಮನ ಕೆಣಕಿ ತುರುಕರ ಬಲ
ಭಂಗಕ್ಕೆ ಬಂದುದೇನೆಂಬೆ ॥ ೧೦೮

ಇಂತು ಕಗ್ಗೊಲೆಯೊಳಳಿದ ಖಾನರ ನೋಡಿ
ಸಂತೋಷದಲಿ ಪಾಠಕರು ।
ಕಂತು ಸನ್ನಿಭ ಕಂಠೀರವೇಂದ್ರನ ನೋ
ಡಂತೆ ಕೊಂಡಾಡಿದರಾಗ ॥ ೧೦೯

ಚಂಡ ವಿಕ್ರಮ ತ್ರೈಲೋಕ್ಯದ ವೀರರ
ಗಂಡ ಜಯಾಂಗನಾ ರಮಣ ।
ಪುಂಡರೀಕಾಕ್ಷ ಸದೃಶ ಜಯತೆಂದಾಗ
ಕೊಂಡಾಡಿತು ಪಾಠಕಾಳಿ ॥ ೧೧೦

ರಿಪು ರಾಜ ಮೇಘ ಜಂಝೂ ಮಾರುತ ಬಲು
ನಿಪುಣ ಸಾಹಸ ವಿಕ್ರಮಾರ್ಕ ।
ವಿಪುಲ ಕಂಠೀರವೇಶ್ವರ ಜಯವೆಂದಾಗ
ಚಪಲ ವಂದಿಗಳಂದುಲಿದರು ॥ ೧೧೧

ನಲಿದಾಗ ಜಯ ಲಕ್ಷ್ಮಿ ಕಂಠೀರವೇಂದ್ರನ
ವಿಲಸಿತ ಶೌರ್ಯಕ್ಕೆ ಮೆಚ್ಚಿ ।
ಬಲು ಭುಜದಲಿ ನೆರೆ ನೆಲಸಿ ಸಂತೋಷವ
ತಳೆದು ರಾಜಿಸಿದಳೇ ವೇಳ್ಯ ॥ ೧೧೨

ಧುರವ ಜಯಿಸಿ ಲೆಕ್ಕವಿಲ್ಲದ ಕೊಳ್ಗುಳ
ಸರಗಳ ಕಟ್ಟಿತಂದಾಗ ।
ಗರುವ ಮನ್ನೆಯ ಮಂಡಲಿಕ ನಾಯಕರ ಮೊತ್ತ
ದೊರೆಗೊಪ್ಪಿಸಿದರುಬ್ಬಿನಲಿ ॥ ೧೧೩

ಪಿಡಿದ ಖಾನರ ಭೂಷಣವಾನೆ ಕುದುರೆಯ
ಪಿಡಿತಂದು ಸು ಭಟ ಸಂದೋಹ ।
ಕಡುಗಲಿ ಕಂಠೀರವ ರಾಜ ಶೇಖರ
ನಡಿಗೊಪ್ಪಿಸಿವರರ್ತಿಯಲಿ ॥ ೧೧೪

ಸುರಗಿ ಸಬಳವೆಂಬುಗಳಿಹ ತರಕಸ
ಸರ ನೇಜಯ ಸಿಂಗಾಡಿ ।
ಬಿರುದಿನಾಯುಧಗಳ ಸೆಳೆ ತಂದು ಭೂಪನ
ಚರಣಾಬ್ಜಗಳಿಗೊಪ್ಪಿಸಿದರು ॥ ೧೧೫

ಉಪ್ಪಿನ ತಿತ್ತಿ ಶತಘ್ನಿ ಜಬರು ಜಂಗಿ
ಯೊಪ್ಪುವ ಬಿರುದಿನ ಡಾಳ ।
ದರ್ಪದೆ ಸೆಳೆ ತಂದು ಭೂಪಾಲನಿದಿರಲಿ
ತಪ್ಪದೆ ಮದೆಯನೊಟ್ಟಿದರು ॥ ೧೧೬

ಕಾಳಗವನು ಗೆದ್ದ ಮನ್ನೆಯ ಸು ಭಟರ್ಗೆ
ಮೇಲಾದುವೊಡವೆ ವಸ್ತುಗಳ ।
ಪಾಲಿಸಿ ಜಯ ಲಕ್ಷ್ಮಿ ಸಹಿತ ಕಂಠೀರವ
ಭೂಲೋಲ ಪುರವನೈದಿದನು ॥ ೧೧೭

ದಳಪತಿ ಮೊದಲಾದ ಮನ್ನೆಯ ನಿಕರವ
ನಲಿದು ಕಳುಹಿ ಬೀಡಿಕೆಗೆ ।
ಚಲದಂಕ ಕಂಠೀರವ ರಾಜ ಹರುಷವ
ತಳೆದರಮನೆಗೈತಂದ ॥ ೧೧೮

ಅರ ಮನೆಯಂಗನಾ ಜನದಾರತಿಗಳ
ಹರಕೆಗಳನು ಕೈಕೊಳುತ ।
ದೊರೆ ರಾಯ ನರಸೇಂದ್ರ ಹರುಷದೊಳಂತಃ
ಪುರಕ್ಕೈತಂದನರ್ತಿಯಲಿ ॥ ೧೧೯

ಇತ್ತಲಾ ರಣಧೂಳಿ ಖಾನ ಬಹುಳ ಚಿಂತೆ
ಗಿತ್ತಾಗ ತನ್ನಯ ಮನವ ।
ಸತ್ತವರಿಗೆ ಗೋರಿಯಿಕ್ಕದೆ ಮರಳಿದ
ಚಿತ್ತದೊಳಗೆ ಧ್ಯಾನಿಸುತ ॥ ೧೨೦

ಗೋವುಗಳನು ತಲೆಯೊಡೆಯಲಿಕ್ಕಿದ ಪಾಪ
ಜೀವಿಗಳ್ಪುಣ್ಯ ಭೂಮಿಯಲಿ ।
ಭಾವಿಸಿ ಪಟ್ಟಣದಧಟರಿಂ ಮಡಿದುರೆ
ತೀವಿದರ್ ಸ್ವರ್ಗ ಲೋಕದಲಿ ॥ ೧೨೧

ದಿಕ್ಕು ದೆಸೆಯ ಕಾಣದ ಬಲು ತುರುಕರ
ಲೆಕ್ಕವಿಲ್ಲದ ಹೆಣಗಳನು ।
ಗಕ್ಕನೆ ಶುನಕ ಸೃಗಾಲಗಳಳತಂ
ದೊಕ್ಕುವು ಹೊಳೆಯ ನೀರಿನಲಿ ॥ ೧೨೨

ಮುನ್ನೂರು ಗಜ ಹತ್ತು ಸಾವಿರ ತೇಜಿಯು
ತ್ಯುನ್ನತಮಹ ಖಾನರುಗಳ ।
ಬನ್ನದೊಳ್ಯವತ್ತು ಸಾವಿರವನು ನೀಗಿ
ಖಿನ್ನನಾಗೈದಿದ ಖಾನ ॥ ೧೨೩

ಪಲ್ಲಕ್ಕಿಯೋರುವ ಖಾನ ವಜೀರರ
ನಿಲ್ಲದೈವತ್ತು ಮಂದಿಯನು ।
ಮೆಲ್ಲನೆ ರಣ * ಬಲಿಯಿತ್ತು ಚಿಂತಿಸಿ ಖಾನ
ತಲ್ಲಣಿಸುತಲೈದಿದನು ॥ ೧೨೪

* ದಲಿ.

ನಾದಿಪ ವಾದ್ಯವ ನಿಲಿಸಿ ತನ್ನಯ ಬಿರು
ದೋದುವ ಭಟ್ಟರ ಜಡಿದು ।
ಮೇದಿನಿಯೊಳು ಖಾನ ಮೌನ ದೀಕ್ಷೆಯ ಕೊಂಡು
ಹಾದಿ ದೆಗೆದ ತನ್ನ ಪುರಕೆ ॥ ೧೦೫

ಮಿಗೆ ಬಲಾಹಕ ಕಡೆಗೈದಲು ಕಾಂತಿಯಿಂ
ಸೊಗಸುವ ಮಾರ್ತಂಡನಂತೆ ।
ಝುಗಝುಗಿಸಿದುದು ಪಟ್ಟಣ ಬಲು ಮುತ್ತಿಗೆ
ದೆಗೆಯಲೇನೆಂಬೆನಚ್ಚರಿಯ ॥ ೧೦೬

ಪೀಡಾ ಪರಿಹರ ಸಂ ಪ್ರದಕ್ಷಿಣೆ ಶಾಂತಿ
ಕೂಡೆ ಬ್ರಾಹ್ಮಣ ಭೋಜನಗಳ ।
ಮಾಡಿಸಿ ಬಹು ಬಗೆ ಧರ್ಮವ ವಿಪ್ರರ್ಗೆ
ನೀಡಿ ಮನ್ನಿಸಿದನಾ ನೃಪತಿ ॥ ೧೦೭

ನೆರೆ ಶೌರ್ಯದೇಳಗೆಯಲಿ ಧರ್ಮ ಕೀರ್ತಿಯು
ಪರಪಿ ಸಮಸ್ತ ಭೂ ತಳಕೆ ।
ನರಸ ರಾಜೇಂದ್ರ ಚಂದ್ರಮನೊಪ್ಪಿದನಾಗ
ಪಿರಿದು ಸೌಭಾಗ್ಯದೇಳ್ಗೆಯಲಿ ॥ ೧೦೮

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಗೆಯ ಸಂಧಿ
ಮುದದ ಸು ಧರ್ಮಾನುಬಂಧಿ ॥ ೧೦೯

೧೫ನೆಯ ಸಂಧಿ ಸಮಾಪ್ತಂ

# ಹದಿನಾರನೆಯ ಸಂಧಿ

## ರಾಮಗಿರಿ ಪಟ್ಟಣವನ್ನು ತೆಗೆದುದು

ಸೂಚನೆ || ರಾಮಗಿರಿಯು ತುರುಗೆರೆಯು ಬಾಗೂರ ಸಂ
ಗ್ರಾಮದೆ ನರಸೇಂದ್ರ ಸೆಳೆದ ||

ಶಿವ ವಾಹನನಂದನನ ಮಾವಗೆ ಮುಚಿ
ದವನೊಳು ರಣವೆಂಡಲದೆ |
ತವಕದೆ ಸೆಣಸಿದವನಿಗನುಜೆಯನಿತ್ತ
ಭವ ಹರ ಕರುಣಿಸು ಮತಿಯು || ೧

ಬಳಿಕಲಾ ರಣಧೂಳಿ ಖಾನನುಳಿದ ತನ್ನ
ತಳತಂತ್ರವ ಕೂಡಿಕೊಂಡು |
ಗಳಿಲನೆ ವಿಜಯಾ ಪುರಕ್ಕೈದಿ ಪಾತ್ಸ್ಯಾವ
ತಳುವದೆ ಕಂಡನೇ ವೇಳ್ಯ || ೨

ನೋಡದವನನಡ್ಡ ವೊಗವಿತ್ತು ಕದಪಲಿ
ನೀಡುತ ಹಸ್ತಾಂಬುಜವ |
ಕೂಡೆ ಪಾತ್ಸ್ಯಾವು ತನ್ನಾಪ್ತ ಮಂತ್ರಿಯು ಕರೆ
ದಾಡಿದನೇನ ಬಣ್ಣಿಸುವೆ || ೩

ಶ್ರೀರಂಗ ಪಟ್ಟಣವನು ಕೊಳ * ಕರ್ನಾಟ
ಸೇರುವ್ರುದತಿ ಬೇಗವೆಂದು |
ಆರೈದಿವನ ಕಳುಹೆ ಯಪ ಕೀರ್ತಿಯು
ಸೇರಿಸಿದನು ಖಾನನೆಮಗೆ || ೪

* ಸೆಳೆ ಯೊಂದೊಡೆ

ಕುದುರೆಯೈವತ್ತು ಸಾವಿರ ನಾಲುಕುಲಕ್ಷ
ಪದಚರರನು ಕೂಡಿ ಕೊಂಡು ।
ಮುದದಿಂದ ಪಟ್ಟಣವನು ಸೆಳಯೆಂದೊಡೆ
ಸದೆಯಿಸಿದನು ನಮ್ಮ ಬಲವ ॥ ೫

ಗುರುತಿನ ಖಾನರದೆಲ್ಲಿ ಪಟ್ಟದ ಮದ
ಕರಿಗಳ ಕಾಣೆ ತೇಜಿಗಳ ।
ಬಿರುದಿನ ರಾವುತರೇನಾದರಿದು ನಮ್ಮ
ಸಿರಿಗೊಣೆಯುವಾದುದೆಂದ ॥ ೬

ಪಲ್ಲಕ್ಕಿಗಳನೇರಿ ಬರುವ ವಜೀರರು
ನಿಲ್ಲದೆ ಪಜ್ಕ್ತಿಯೂಟವಲಿ ।
ಸಲ್ಲಲಿತದ ಸಂತೋಷದೆ ನಲಿವಂತ
ಮಲ್ಲರೇನಾದರೊ ಕಾಣೆ ॥ ೭

ಬಂದುರೆ ಸಭೆಯೊಳಗೆ ಕುಳಿತಿರೆ ನೋಡುವ
ಗರ್ಂದವಾಗಿಹ ವಜೀರರನು ।
ಕೊಂದು ಕಳೆದು ಬಂದನಿವನ ಮೊಗವ ನಾ
ನಿಂದೀಕ್ಷಿಪೆನೆಂತೆನುತ ॥ ೮

ಹತ್ತು ಸಾವಿರ ತುರುಕರು ಮೂಕೊರೆಯರೆ
ಮೃತ್ತಿಗೆ ಬರಲಾಗಿ ನಮಗೆ ।
ಕತ್ತನೆತ್ತುವೊಡೆ ನಾಚಿಕೆಯಾಗಿ ಹೈನ್ಯವ
ಹೊತ್ತೆವೆಂದುರೆ ಕೋಪಿಸಿದನು ॥ ೯

ಹೇಳುವುದೇನಿನ್ನೀ ಖಾನ ಮಾಡಿದ
ಖೂಳತನದ ಕಾರ್ಯಗಳನು ।
ತಾಳಲದೇಕೆ ಚಿಂತೆಯನೆಂದು ಕೋಪದೊ
ಳಾಳಿದನಾ ಪಾತ್ಸ್ಯಾವು ॥ ೧೦

ಮನನಡುಗುತ ಖಾನ ಪಾತ್ಸ್ಯವಿನಡಿಯೊಳು
ವಿನಮಿತನಾಗಿ ಕೈ ಮುಗಿದು ।
ಜನಪ ಕಂಠೀರವ ನರಸ ರಾಜೇಂದ್ರನ
ಘನ ಪೌರುಷವ ಬಣ್ಣಿಸಿದ ॥ ೧೧

ಜೀಯ ಚಿತ್ತೈಸು ಕಂಠೀರವ ರಾಜೇಂದ್ರ
ನೀ ಯವನಿಯ ಬಡ ನರನೆ ।
ಕಾಯಜ ಪಿತನರ ಸಿಂಹನ ಸಾದೃಶ್ಯ
ದಾಯತವಾನೃಪಗಿಹುದು ॥ ೧೨

ತುಡುಕಿ ಲಗ್ಗೆಯನೇರಿದ ಖಾನ ಖಾನರ
ಕಡಿದು ತಲೆಯ ಮಿದುಳುಗಳ ।
ಬಿಡದಾಗ ರಣ ಭೂತಗಳಿಗೆ ದಂಡೆಗಳನು
ಮುಡಿಸಿದರವನ ಸೈನ್ಯರು ॥ ೧೩

ಆತನ ಸುಭಟರಿಗಳವಟ್ಟ ಕಾರ್ಯದ
ರೀತಿಯನೊಲಿದು ಬಣ್ಣಿಪೊಡೆ ।
ನೂತನ [ವಾ]ಫಣಿ ರಾಜನ ಜಿಹ್ವೆಗ
ಳೀತರವರಸ ಚಿತ್ತೈಸು ॥ ೧೪

ಬೆಟ್ಟದ ಚಾಮುಂಡಿ ಯಾತನ ಸುಭಟರ್ಗೆ
ಕೊಟ್ಟಾಗ ಬಲು ಶಕ್ತಿಯನು ।
ಪೆಟ್ಟನಿಕ್ಕಿಸಿದಳು ನಮ್ಮೊಳು ನಾವಿನ್ನು
ಮುಟ್ಟಿ ಮಾಡುವ ಕಾರ್ಯವೇನು ॥ ೧೫

ಭಾವಿಸಿ ನೋಡಿದೊಡಲ್ಲಿಹ ಭಟನೊರ್ವ
ಸಾವಿರಾಳಾಗೆನ್ನ ಕಣ್ಗೆ ।
ತೀವಿ ಕಾಣಿಸುತಿಹ ನವಗೆ ಪಶ್ಚಿಮ ರಂಗ
ದೇವನ ಕೃಪೆ * ಕೂಡಿಹುದು ॥ ೧೬

* ಪಡೆಗಿಹುದು.

* ನಾವು ಮಾಡಿದ ಸಾಹಸವನಿಂದು ಪೇಳಿದೊ
ಡಾವುದು ತೋರದು ನಿಮ್ಮ ।
ಭಾವದೊಳ್ ನಮ್ಮ ದೌರ್ಭಾಗ್ಯದಿನೆಂದು ಪಾ
ತ್ನ್ಯಾವಿನಗ್ರದೆ ಮರುಗಿದನು ॥ ೧೭

ನಾನಾ ಸಾಹಸಗೈದೊಡೆ ನಮ್ಮಯ
ಸೇನೆಯು ಸುಪರಾಕ್ರಮಗಳು ।
ಕ್ಷೋಣೀಪ ಕಂಠೀರವನ ಕಲಿಗಳೊಳು
ಕಾಣದೆ ಹೋಯ್ತೆಂದನಾಗ ॥ ೧೮

ನಾಗೂಡಾರವನಿಟ್ಟ ಬಳಿಯಲೊಬ್ಬ
ಬೇಗದೆ ಗೂಡಾರವಿಟ್ಟು ।
ರಾಗದೊಳಗೆ ರಾಜ ಕಾರ್ಯವ ನೆರೆ ಕೊನೆ
ಸಾಗಿಸಲರಿದಪನೆಂದ ॥ ೧೯

ಕಡೆಯು ಮಾತೇನಾ ಕೂರ್ಮೆ ಸಹಿತ ನೀವು
ನಡೆಯಲು ನಿಮ್ಮ ಸಾಹಸಕೆ ।
ಸೆಡೆವನಲ್ಲಾ ನೃಪವರನಾ ಶೌರ್ಯದ
ಕಡುಹನದೇನ ಬಣ್ಣಿಸುವೆ ॥ ೨೦

---

* ನಾವು ಮಾಡಿದ ಸಾಹಸವನಿಷ್ಟ ಯೆಂದು
ಪೇಳಿದರೀಗ ಚಿತ್ತಕ್ಕೆ ।
ತೋರದು ನಮ್ಮ ದೌರ್ಭಾಗ್ಯವನೆಂದಾ
ಖಾನಮರುಗಿದನಿದಿರೊಳು ॥

ನಾನಾ ಸಾಹಸಗೈದರು ನಮ್ಮಯ
ಭಾವಪರಾಕ್ರಮಗಳನು ।
ಭೂಭುಜ ಕಂಠೀರವನ ಕಲಿಗಳೊಳು
ಸಾಗದೆ ಹೋಯ್ತೆಂದನಾಗ ॥

ಎಂಬ ಮಾತನು ಕೇಳಿ ಪಾತ್ಸ್ಯಾವು ಮನದೊಳ
ಗಿಂಬಾದ ಕೋಪವ ಬಿಟ್ಟು ।
ತುಂಬಿದಂತಿರಲಿತ್ತಲಾಗುವ ಕಾರ್ಯದಾ
ಡಂಬರವನು ಬಣ್ಣಿಸುವೆ ॥ ೨೧

ಇಕ್ಕೇರಿಯ ನೃಪ ಪೂಷಲ ಹನುಮನ
ಸೊಕ್ಕ ಮುರಿಯ ಬೇಕೆಂದು ।
ರೊಕ್ಕದಾಸೆಯನಿತ್ತು ತುರುಕರ ದಂಡನು
ಗಕ್ಕನೆ ತಂದನೇ ವೇಳ್ಯ ॥ ೨೨

ಇನ್ನಾದರು ಬಲು ಶೌರ್ಯವೆಸಗಿ ನೆರೆ
ಕನ್ನಡವನು ಸಾಧಿಸೆಂದು ।
ಮನ್ನಿಸಿ ಪಾತ್ಸ್ಯಾವು ರಣಧೂಳಿ ಖಾನನ
ಸನ್ನಾಹದಲಿ ಕಳುಹಿದನು ॥ ೨೩

ಅಳುಕಗಣಿತ ತಳತಂತ್ರವ ಖಾನಗೆ
ತಳುವದಿತ್ತೊಡನೆ ಪಾತ್ಸ್ಯಾವು ।
ಗಳಲನೆ ಬೀಳ್ಕೊಡೆ ಮತ್ತವ ಹೆಬ್ಬೆಯ
ಹೊಳೆಯ ದಾಟುತಲೈತಂದ ॥ ೨೪

ಖಾನ ತನ್ನಯ ಮೇಲೆ ದಂಡೆತ್ತಿ * ಬರುವವಿ
ಧಾನವ ಕಂಡು ಕೆಂಗೇಂದ್ರ ।
ವಿನೆಂಬೆ ಕಾದಬೇಕೆಂದು ಬಲವಮ
ತ್ಸಾನಂದದಿಂದ ಕೂಡಿದನು ॥ ೨೫

ಬಸವ ಪಟ್ಟಣಕೆ ಮುಂ ಜಸದಿಂದ ನಡೆತಂದು
ಮಸೆವ ಮುತ್ತಿಗೆಯನೆ ಬಲಿದು ।
ಬಸ ಮಾಡಿ ಕೊಂಡದಂ ಕೋಪದೆ ತಾನಾಗ
ಳಸೆವ ಸಂತಸವ ತಾಳಿದನು ॥ ೨೬

* ಬರುವರ್ತಮಾನವ.

ಬಳಿಕೊಂದು ದಿನ ಖಾನ ದಾಳಿ ಮಾಡಿದೊಡಲ್ಲಿ
ಯೊಳಗಾದವರು ಬಿಟ್ಟು ತೊಲಗೆ ।
ಗಳಿಲನೆ ಬಸವ ಪಟ್ಟಣದಿಂದಾ ರುದ್ರ
ಪೊಳಲಿಗೆ ಬಂದ ಮುಂಕೊಂಡು ॥ ೨೭

ಆ ಪಟ್ಟಣವನು ಜೈಸಾ ರಾಯನ ಸೆರೆಗೈ
ದಾ ಪುರಕಾ ಠಾಣವಿಕ್ಕಿ ।
[ಕಾಪಿಟ್ಟು ತನ್ನಯ ಸೇನೆಯೊಳ್ ಕೆಲವ ಪ್ರ
ತಾಪದೆ ಮುಂದಡಿಯಿಟ್ಟ] ॥ ೨೮

[ಹಿಂಗದೆ ಕಾದಿದ ಕೆಂಗ ಹನುಮನನು
ಭಂಗಪಡಿಸಿ ಸೆರೆ ಪಿಡಿದು] ।
ತುಂಗ ವಿಕ್ರಮ ಖಾನ ಮುಂದಕ್ಕೆ ನಡೆದದೊಂ
ದಂಗವನೇನ ಬಣ್ಣಿಸುವೆ ॥ ೨೯

ಕೇಳದೆ ಮತ್ತೈದಿ ಬರುತಿಹ ತುರುಕರ
ದಾಳಿಯ ಭರವನು ಕಂಡು ।
* ಲೋಲ ಕಂಠೀರವ ನರಸೇಂದ್ರ ದಳವಾಯೊ
ಳಾಲೋಚಿಸಿದ ಕಾರ್ಯವನು ॥ ೩೦

ಬರಲೊಲ್ಲೆವು ಕನ್ನಡಕೆಂದು ಭಾಷೆಯ
ನಿಂದಿತ್ತು ಮರಳಿ ಬಂದೀಗ ।
ನೆರೆ ಭಾಷೆ ಹೀನರಾಗಿಹ ತುರುಕರ ಮೇಲೆ
ದುರವ ಗೆಯ್ಯಲು ಬೇಕೆಂದ ॥ ೩೧

ರಾಮ ಗಿರಿಯು ದುರ್ಗವೆಂಬುದು ಭೂಮಿಗೆ
ತಾ ಮನೋಹರವಾಗಿಹುದು ।
ಪ್ರೇಮದಿಂ ನಾವದ ಸೆಳೆದೊಡೆ ಕೀರ್ತಿ ಸು
ತ್ರಾಮ ಮಂಡಲವ ಮುಟ್ಟುವುದು ॥ ೩೨

* ಧೀರ.

ತುರುಕರ ಬಸವಡೆದಾ ದುರ್ಗ ವಿಟ್ಟೊಡೆ
ಪಿರಿದಾಯುಸ ಮುಂದಕಹುದು ।
ಭರದೆ ಮುತ್ತಿಗೆಯಿಕ್ಕಿ ಸೆಳೆಯೆಂದು ದಳವಾಯು
ನರಸ ರಾಜೇಂದ್ರ ಬೀಳ್ಕೊಟ್ಟ ॥ ೩೩

ಗಿರಿಯ ಚೌದೆಸೆಯಲಿ ಬಲು ಮನ್ನೆಯರನು
ನೆರೆ ಬಲ ಸಹ ಕಾಹ ಬಲಿದು ।
ಪಿರಿದಾದ ತಳ ಮೇರುವೆಗಳನಡಸಿಯೆ
* ಕಿರಿದಾಗಿಸಿದ ದುರ್ಗವನು ॥ ೩೪

ದುರ್ಗದೊಳಗೆ ಸಾವಿರ ಖಾನರು ಭಟ
ವರ್ಗ ಸಹಿತ ಕಾದುಕೊಂಡು ।
ಭರ್ಗನ ಭಾಳಾಗ್ನಿಯ ಕಿಡಿಗಳೆಳತಿ
ದೀರ್ಘ ವಿಕ್ರಮರೊಪ್ಪಿದರು ॥ ೩೫

ಇರದಾರ್ಭಟಿಸಿ ಹೊಡೆವ ಬಾಣ ಸುಭಟರ
ಹರಣಗೊಳುವ ಪೆಟಲುಗಳ ।
ಕರೆವ ಗುಂಡಿನ ಮಳೆಯೂರೊಳಗೆಸೆದುಬು
ಹೊರ ಪಾಳೆಯುವವರಿಂದ ॥ ೩೬

ಬಳಸಿ ಯಾ ಗಿರಿಯ ಚೌ ದೆಸೆಯ ಕೋಡುಗಳೊಳ
ಗಳವಡಿಸಿಯೆ ಪಿರಂಗಿಗಳ ।
ತಳುವದೆ ಸಂಧಾನಗೊಳಿಸಿ ದುರ್ಗವನಿಡು
ವಳವ ನಾನೇನ ಬಣ್ಣಿಸುವೆ ॥ ೩೭

ಮೇರುವೆಗಳ ಮೇಲೇರಿ ಕೋಪಿಯ ಬಲು
ಧೀರರು ಸಂಧಾನದಿಂದ ।
ಊರೊಳು ಚರಿಪರನಿಟ್ಟು ಕೆಡಹುತಿಹ
ವೀರತ್ವವನೇ ವೇಳ್ವೆ ॥ ೩೮

* ಗಿರಿದಾನಿಸಿಧ.

ಮುಂದಕೊತ್ತರಿಸಿ ತಳಿಯನೂರ ಹೊರಡುವ
ಮಂದಿಯನಿರಿದಿರಿದಾಗ ।
ಕುಂದದೆ ಕೆಡಹಿ ಭಯವ ಬೀರಿ ದುರ್ಗದ
ಮುಂದಕೊತ್ತರಿಸಿ ಮುತ್ತಿದರು ॥ ೩೯

ಬಳಿಕಾ ದುರ್ಗದ ಕೊತ್ತಳಗಳೊಳಾಗ
ಸಲೆ ಸಂದ ತುರುಕ ಸುಭಟರು ।
ಮುಳಿದು ಪಟಿಲ ಗುಂಡುಗಳ ಕಾರ್ಮುಗಳಗಳ
ತಳುವದೆ ಕರೆದರೇ ವೇಳ್ವ ॥ ೪೦

ಇತ್ತಲಾ ಬೆಂಗಳೂರೊಳಗಿಹ ಖಾನನು
ಮುತ್ತಿಹ ಬಲವರಿತಾಗ ।
ಮತ್ತೆ ಕೋಪದೆ ಬಲು ಬಲ ಸಹಿತಾಕ್ಷಣ
ಮುತ್ತಿಗೆದೆಗಿಸಲೈತಂದ ॥ ೪೧

ಗಿರಿಗುತ್ತರದ ದೆಸೆಯಲಿ ತನ್ನಯ ಫೌಜ
ನಿರಿಸಿ ಕಾಣಿಸಿಕೊಳಲಾಗ ।
ಪರಿ ಪರಿಯಿಂದ ಬಲಕೆ ಸನ್ನೆಯನಾಗ
ಘುರವಣಿಸಿದನೇ ವೇಳ್ವ ॥ ೪೨

ಒಡನಾಗ ನೆರೆ ನಾಲ್ಕು ಫೌಜಾಗಿ ತುರುಕರ
ಪಡೆಯನಾ ಕ್ಷಣ ಮುತ್ತಿಕೊಂಡು ।
ಕಡಿದು ಸಿರವ ಚೆಂಡಾಡಿದ ದಳವಾಯಿ
[ಕಡುಗಲಿ] ನಂಜೇಂದ್ರಬೇಗ ॥ ೪೩

ಇರಿಯುತ ತರಿಯುತ ಕೊರೆಯುತ ಮುರಿಯುತ
ಲಿರಿದು ಸಾವಿರ ತಲೆಗಳನು ।
[ತುರುಗಿದ ತುರುಕರ ಪಡೆಯನು ಸದಿಲಿಸಿ
ಮೆರೆದನು ಕಡು ಸಾಹಸವ ॥] ೪೪

[ಸಾವಿಗೆ ಭಯಗೊಂಡು ಬೇಡಿಕೊಳ್ವವರನು
ಕಾವೆನು ಭಯ ಬೇಡೆಂದು] ।
ತೀವಿದ ಧರ್ಮಗಾಳೆಯ ಹಿಡಿಸಿದನಾ
ಭೂ ವರ ನಂಜ ರಾಜೇಂದ್ರ ॥ ೪೫

ಉರವಣಿಸುತಲೊಂದಿರುಳು ಲಗ್ಗೆಗೆ ಬಿಟ್ಟು
ಭರದಿಂದ ಸೆಳೆದು ದುರ್ಗವನು ।
ತುರುಕ ರಾವುತರ ಸಾವಿರನಾ ಕ್ಷಣ ಕೈ
ಸೆರೆಯಾಗಿ ಪಿಡಿದನೇ ವೇಳ್ವ ॥ ೪೬

ಹೊಳೆವ ತೇಜಿಗಳೈನೂರನು ಪಿಡಿದಾಗ
ಸೆಳದು ಕೊಂಡಾಯುಧಗಳನು ।
ತಲಗಾಯ್ದವರ ಮನ್ನಿಸಿ ಬಿಟ್ಟೊಡೆಯಗೆ
ಬಲು ಕೀರ್ತಿಯ ತಂದನಾಗ ॥ ೪೭

ದುರದಲಿ ಪಿಡಿದ ಕುದುರೆ * ಗಳ ದುರ್ಗದ
ತುರುಕರಿಂ ಸೆಳೆದ ತೇಜಿಗಳ ।
ನರಸ ರಾಜೇಂದ್ರಗೆ ಕಾಣಿಕೆ ಗೆಯ್ಯಲು
ಹರುಷವ ತಾಳ್ದು ಮನ್ನಿಸಿದ ॥ ೪೮

ಈ ಸುದ್ದಿಯ ದೂತರು ಖಾನಗರುಹೆ ಶಾ
ಬಾಸೆಂದು ಕೊಂಡಾಡುತಾಗ ।
ಲೇಸು ಸಾಕ್ಷಾತ ಕರ್ತಾರ ಮೈಸೂರ ನು
ಹೀಶನೆಂದವ ಪೊಗಳಿದನು ॥ ೪೯

ಗಣನೆ ಯಿಲ್ಲದ ಬಲ ಸಹಿತ ನಾವಿರೆ ನಮ್ಮ
ತೃಣಕೆ ಲೆಕ್ಕಿಸದೆ ಯಾ ಗಿರಿಯ ।
ಕ್ಷಣದಲ್ಲಿ ಸೆಳೆದ ಮಹಾತ್ಮನ ಪುಣ್ಯಕಿ
ನ್ನೆಣೆ ಯಾವುದೆಂದನಾ ಖಾನ ॥ ೫೦

* ಕೊಳು.

ಒಡನಾತನ ದಳಪತಿ ಬಲು ಶೌರ್ಯದ
ಕಡುಹ ತೋರಿದ ನಮ್ಮ ಕೂಡೆ ।
ಬಿಡದಾತನ ರಕ್ಷಿಸಿ ಕೊಂಡು ಬರುತಿಹಾ
ವ್ರೊಡೆಯನ ಶೌರ್ಯವಿನ್ನೆಂತೊ ॥ ೫೧

* ಎಂದಿತ್ತಲೈದುವೊಡತಿ ಭೀತಿ ವಟ್ಟಾಗ
ಹಿಂದಕ್ಕೆ ನಡೆದು ಬೇಲೂರ ।
ನಿಂದು ಮುತ್ತಿಗೆಯಿಕ್ಕಿ ಸೆಳೆಕೊಂಡು ಖಾನನ
ಲ್ಲಿಂದೈತಂದನೇ ವೇಳ್ವ ॥ ೫೨

ಚಿಕನಾಯಕನ ಹಳ್ಳಿಯ ದಾಳಿಯಲಿ ಕೊಂಡು
ಸಕಲ ವಜೀರರು ಸಹಿತ ।
ಚಕಿತ ಪರಾಕ್ರಮಿ ರಣಧೂಳಿ ಖಾನ ಬ
ಲ್ಸಕದೊಳಗಿರ್ದನೇ ವೇಳ್ವ ॥ ೫೩

ಇನಿತರೊಳ್ ಚಿನಪಟ್ಟಣವ ನೋಡ ಬೇಕೆಂದು
ಜನನಾಥ ಕಂಠೀರವೇಂದ್ರ ।
ಘನ ತೀವ್ರದಲಿ ಬಲ ಸಹಿತೈತಂದಾಗ
ಮನ ಹರಿಸದೊಳೊಪ್ಪುತಿರಲು ॥ ೫೪

ಬಳಿಕ ಖಾನನ ದಳಪತಿ ಯಬುದುಲನಾಗ
ತಳತಂತ್ರವ ಕೂಡಿ ಕೊಂಡು ।
ಹುಲಿಯೂರ ಬಳಿಯ ಬೀಡಿಳಿದಿರ್ದ ದಾಳಿಯ
ತಳುವದೆ ಮಾಡಿದನಾಗ ॥ ೫೫

ಒಡನೆ ದಾಳಿಯ ಮಾಡಿ ಯಬ್ದುಲ್ಲ ಖಾನನ
ಪಡೆಯನೆಲ್ಲವ ಮುರಿಯಿರಿದು ।
ಬಿಡದೋಡಿಸಿ ಕುದುರೆಗಳ ಸೆಳೆದು ಕೀರ್ತಿ
ವಡೆದನು ನರಸ ರಾಜೇಂದ್ರ ॥ ೫೬

---

* ಇಂದಿತ್ತಲೈದುವರತಿ.

ಹೊಗ ದೆಸೆಯನು ಕಾಣದಬ್ದುಲ್ಲ ಖಾನ ಬಹು
ಬಗೆಯಲಿ ಕಂಗೆಟ್ಟಾಗ ।
ಮಿಗೆ ಹುಲಿಯೂರ ಬಳಿಯ ಬಿಟ್ಟ ಪಾಳೆಯ
ದೆಗೆದೋಡಿದನೇ ವೇಳ್ವ ॥ ೫೭

ಪಿರಿದು ಜಯಾಂಗನೆ ವೆರಸಿ ಕಂಠೀರವ
ದೊರೆ ರಾಯ ಪಟ್ಟಣಕ್ಕೈದಿ ।
ಹರುಷದೊಳಿರುತೊಂದು ದಿವಸ ನಂಜೇಂದ್ರನ
ಕರೆದು ನುಡಿದ ಕಾರ್ಯದಿರವ ॥ ೫೮

ಅಸಮ ಸಾಹಸಿ ಖಾನ ಸರಹದ್ದಲಿರುವಾಗ
ಮುಸುಕಿ ಬಾಗೂರ ಸೆಳೆದರೆ ।
ಪಸರಿಸುವುದು ಬಲು ಕೀರ್ತಿ ನಮಗೆ ಮುಂ
ದೆಸೆವುದು ಖಾನಗೆ ಭೀತಿ ॥ ೫೯

ಯೆಂದು ನುಡಿದ ತನ್ನೊಡೆಯನ ಚರಣಾರ
ವಿಂದಗಳಿಗೆ ತಲೆ ವಾಗಿ ।
ವಂದಿ ಕುದುರೆ ಸಹ ದಳವಾಯಿ ನಂಜೇಂದ್ರ
ಬಂದು ಮುತ್ತಿದನಾ ಪುರವ ॥ ೬೦

ರಾಮ ಚಂದ್ರನ ನೇಮದಲಿ ಸಕಲ ಬಲ
ಸ್ತೋಮ ಸಹಿತ ರವಿ ಸುತನು ।
ಪ್ರೇಮದಿಂ ಲಂಕೆಯ ಮುಸುಕಿದಂದದಲಾಗ
ಭೂಮಿಪನಿಟ್ಟ ಮುತ್ತಿಗೆಯ ॥ ೬೧

ಹರನ ನೇಮದೆ ಬಲ ರಿಪು ತ್ರಿ ಪುರವನಾಗ
ಸುರರು ಸಹಿತ ಮುತ್ತಿದಂತೆ ।
ನರಸ ರಾಜೇಂದ್ರನಾಜ್ಞೆಯಲಿ ಬಾಗೂರ ಬಂ
ದಿರದೆ ಮುತ್ತಿದ ದಳವಾಯಿ ॥ ೬೨

ಮುಳು ವೇಲಿ ಮೋರುತೆ ತಳಿ ಸುರಂಗಗಳಿಂದ
ಬಳಸಿ ಬಂಧಿಸಲಾ ಪುರವ ।
ಹೊಳಲೊಳಗೆಸೆವ ಜನವು ಭೀತಿಗೊಂಡಾಗ
ಕಳವಳಿಸಿದರೇನೆಂಬೆ ॥ ೬೩

ಬಲನಿತ್ತು ವಜ್ಜೀರೈತಂದು ಖಾನಗೆ
ಬಿಡದೆ ಸಲಾಮನು ಮಾಡಿ ।
ತಡೆಯದೆ ಬಾಗಿಲ ಮುತ್ತಿಗೆ ದಿನ್ನಗಳ
ಕಡಿಯು ಬೇಕೆಂದುಸಿರಿದರು ॥ ೬೪

ಇನ್ನುಂಟೆ ಪ್ಯಾಸೂರ ನ ಪನೊಳು ಸಂಗರ
ಬನ್ನ ಕೊಟ್ಟೋಡಿ ನಾಪೇಗ ।
ಉನ್ನತ ಖಂಡೆಯ ಪಿಡಿದು ಕಗನಕ್ಕೈದೆ
ತನ್ನಂತೆ ಭಟರಾರೆಂದ ॥ ೬೫

ರಣಧೂಳಿ ಖಾನಸಿಂಗನೊಡೆ ಹೊಗಳಿ ಗರ್ಭ
ಮಣಿದು ಬೀಳ್ವಪ್ರ ಭೂತಳಕೆ ।
ತೃಣಕೆ ನಮ್ಮನು ಲೆಕ್ಕಿಸದ ನರಸೇಂದ್ರನಿ
ಗೆಣೆಯುಂಟೆ ತ್ರಿಜಗದೊಳೆಂದ ॥ ೬೬

ಎಂದು ಪೇದೊಡೆಯು ಗುರಿ ಮಾಡಿ ರಾಜ್ಯವ
ನಂದಿತ್ತು ಪಿರಿದು ಮನ್ನಿಸುತ ।
ಮುಂದಣ ರಾಜ ಕಾರ್ಯ್ಯವ ನಿನ್ನಯ ಮನ
ಬಂದಂತೆ ಮಾಡೆಂದ ಖಾನ ॥ ೬೭

ಕಗ್ಗೊಲೆಯಲಿ ಬಾಗಿಲ ಹೊಗುವೆನೆಂದು
ವೆಗ್ಗಳ ಬಲದ ಪೇದೊಜಿ ।
ಬೊಗ್ಗನೈತಂದು ಭಾಗಿಲ ಬಂದು ಮನನೊಂದು
ಸಿಗ್ಗಾಗೆ ತೆರಳಿದನಾಗ ॥ ೬೮

ಇಳೆಯಾಣ್ಮ ಕಂಠೀರವೇಂದ್ರನ ದಳವಾಯಿ
ತಳುವದೊತ್ತರಿಸಿ ಯಾ ಪುರವ |
ಗಳಿಲನೆ ಸೆಳೆದು ರಾಣಿಯಪಿಟ್ಟು ನಿಮಿಷದೆ
ಬಲು ಹರುಷದೊಳೈತಂದ || ೧೯

ಒಡೆಯನ ಬಳಿಗಾಗ ಮನ್ನೆಯ ನಾಯಕ
ಪಡೆ ಸಹ ತಳುವದೈತಂದು |
ಪೊಡವಿಪ ನರಸ ರಾಜೇಂದ್ರಗೆ ತಲೆ ವಾಗೆ
ಕಡು ಹರುಷದಲಿ ಮನ್ನಿಸಿದ || ೨೦

ಧರಣಿಪ ಕುಲ ಕುಶೇಶಯ ಭಾನು ಸುರ ಧೇನು
ನರಸೇಂದ್ರ ಸತ್ಕೀರ್ತಿ ಸಾಂದ್ರ |
ಕರೆದು ಮನ್ನಿಸಿ ದಳ ಪತಿ ನಂಜೇಂದ್ರನ
ತುರುಗೆರೆಯನು ಸೆಳೆಯೆಂದ || ೨೧

ಲಂಕಾ ದುರ್ಗಕೆ ಸರಿಯೆಂಬಾ ಪುರ
ಬಿಂಕದೆ ಕೊಂಡಾಡುತಿಹರು |
ಮುಂಕೊಂಡು ಬಲ ಸಹಿತೈದಿ ಯಾ ಪುರವನು
ಶಂಕೆ ಯಿಲ್ಲದೆ ಸೆಳೆಯೆಂದ || ೨೨

ದೇವರವರ ಪುಣ್ಯ ಶೌರ್ಯದೇಳಿಗೆಯಿಂದ
ತೀವಿದ ಬಲ ಸಹಿತೈದಿ |
ಭೂ ವಲಯಕೆ ಚೋದ್ಯವಡೆದ ಮಂಗಳ ಕಾರ್ಯ
ಭಾವವ ಚಿತ್ತೈಸೆಂದ || ೨೩

ಎಂದಾಗ ಸಕಲ ಬಲವ ಕೂಡಿ ದಳ ಪತಿ
ನಿಂದಲ್ಲಿ ನಿಲ್ಲದೈತಂದು |
ಮುಂದೊಪ್ಪುವ ತುರುಗೆರೆಯನು ಮುತ್ತಿ
ದಂದವನೇನ ಬಣ್ಣಿಸುವೆ || ೨೪

ಗಗನ ಮಾರ್ಗವ ತುಡುಕುವ ಮೇರುವೆಗಳ
ಮಿಗೆ ಚೌದೆಸೆಯಲಿ ಬಲಿದು ।
ಅಗಳ ಘಾತವ ಹೂಳಿ ಯಾ ಪುರವನು ಬೇಗ
ಜಗ ಮೆಚ್ಚುವಂತೆ ಬಂಧಿಸಿದ ॥ ೨೫

ಬಳಸಿ ಭೋರ್ಗರೆವ ಫಿರಂಗಿಯ ಗುಂಡುಗ
ಳೊಳ ಹೊಕ್ಕು ಕೋಟೆಯ ಕೆಡಹಿ ।
ಕಳಕುಳವನು ಮಾಡ ತೊಡಗಿದುವೇನೆಂಬೆ
ಯಿಳೆಗತಿ ಚೋದ್ಯವ ಬೀರೆ ॥ ೨೬

ಬಾಣಗಳಾರ್ಭಟಿಸುತಲೈದಿ ಯೂರೊಳು
ಕೇಣ ಸರದೊಳಹ ಭಟರ ।
ಪ್ರಾಣಗಳನು ನೀಗಿ ಭಯವಿತ್ತು ಪುರ ಜನ
ಶ್ರೇಣಿಯ ಸುಡ ತೊಡಗಿದುವು ॥ ೨೭

ಮುತ್ತಿಗೆ ದೆಗಿಸುವೆವೆಂದು ಖಾನರುಗಳು
ಮೊತ್ತ ಮೊತ್ತದಲೈತಂದು ।
ಮತ್ತೆ ವಾರುವ ಬಲ ಸಹ ನೊಣಬನ ಕೆರೆ
ಯೊತ್ತಲಿ ಬೀಡನಿಳಿದರು ॥ ೨೮

ಕೇಳಿದನಾ ತುರುಕರ ವಾರುವಗಳ
ದಾಳಿಯ ದಳ ಪತಿ ಯಾಗ ।
ಮೇಳೈಸಿ ಬಲವ ಕಗ್ಗೊಲೆಯ ಕಾಳಗಕಂದು
ತೂಳಿದನೇನ ಬಣ್ಣಿಸುವೆ ॥ ೨೯

ರಘು ನಾಥನ ಸೇಮದಲಿ ದಳ ಪತಿ ನೀಲ
ಮಿಗೆ ಪ್ರಹಸ್ತನ ಮಾರ್ಬಲವ ।
ಹೊಗುವಂತೆ ಕಂಠೀರವೇಂದ್ರನ ದಳವಾಯಿ
ಚಿಗುಳಿದುಳಿದ ತುರುಕರನು ॥ ೩೦

ಮುರಿಯಲಿರಿದು ಮುನ್ನೂರು ಬಲ್ತೇಜಿಯ
ಭರದೆ ಕೈ ಸೆರೆ ಯಾಗೆ ಪಿಡಿವು ।
ತುರುಕ ರಾವುತರೈನೂರನೊಂದೇ ವೇಳೆ
ತರಿದೊಟ್ಟಿದ ರಣದೊಳಗೆ ॥ ೮೧

ಹುತ್ತವನೇರಿದವರು ಬಂದು ತೃಣಗಳ
ಮೆತ್ತ ಕಚ್ಚುತ ನೀರ ಹೊಕ್ಕು ।
ಕತ್ತಿ ಕಠಾರವ ಬಿಸುಟು ಕೈ ಮುಗಿವರ
ಮೊತ್ತವನೇನ ಬಣ್ಣಿಸುವೆ ॥ ೮೨

ಬದಿಗಳೊಳಗೆ ಬಿದ್ದು ಪೊರಳದವರು ನರೆ
ಕೆದರಿದ ತಲೆಯಿಂದಲಾಗ ।
ಗದಗಾಪುಗೊಳುತ ಹೋಗಲು ದೆಸೆ ಕಾಣದೆ
ಸದೆಯಿಸಿಕೊಂಡರೇನೆಂಬೆ ॥ ೮೩

ಹೇಳುವುದೇನೊಂದು ಯೋಜನ ವರಿಯಂತ
ಬೀಳಲಿರಿದು ತುರುಕರನು ।
ಕೋಳು ವಾರುವ ಸಹ ದಳವಾಯಿ ನಂಜೇಂದ್ರ
ಪಾಳೆಯಕೈತಂದನಾಗ ॥ ೮೪

ಪುರವ ಕೊಡದೆ ದುರಗಲಿ ಖಾನನು ಕಾದು
ತಿರಲಾಗ ಕೋಪವ ತಾಳಿ ।
ನರಸೇಂದ್ರನ ದಳಪತಿ ತನ್ನ ಸುಜನ
ಕರೆದಿಂತೆಂದು ನೇಮಿಸಿದ ॥ ೮೫

ಚಲವ ಬಲಿದು ಗಡಿ ಮನ್ನೆಯರುಗಳಿಗೆ
ತಳುವದೇಣಿಗಳ ಸೇನಿತ್ತು ।
ಹೊಳಲ ಲಗ್ಗೆಗೆ ಬಿಡಿಸೆಂದು ಲಿಂಗೇಂದ್ರಗೆ
ದಳಪತಿ ನೇಮವನಿತ್ತ ॥ ೮೬

ಒಡನೆ ಹಸಾದವೆನ್ನುತ ಲಿಂಗ ರಾಜೇಂದ್ರ
ಗಡಿಮನ್ನೆಯರ ಕರೆಕರೆದು ।
ಬಿಡದಾ ಪುರವನು ಲಗ್ಗೆಗೇರಿಸುತಿಹ
ಕಡುಗಲಿತನವನೇನೆಂಬೆ ॥ ೮೭

ದೆಸೆ ದೆಸೆಯಲಿ ಮನ್ನೆಯರು ಮಾರ್ಬಲ ಸಹ
ಮುಸುಕಿ ಪುರವ ಲಗ್ಗೆಗೇರಿ ।
ಬಸೆದಾ ಪುರವನೊಂದೇ ಕ್ಷಣದಲಿ ಕೊಂಡು
ಜಸವ ಬೀರಿದರೇ ಪೇಳ್ವೆ ॥ ೮೮

ಊರೊಳಗಿಹ ಖಾನರುಗಳ ಹಿಡಿದಾಗ
ಹಾರುವ ಮದ ಗಜಗಳನು ।
ಧೀರನೆ ಸೆಳೆದು ಲಿಂಗೇಂದ್ರನಣ್ಣನ ಪದ
ವಾರಿಜಗಳಿಗೊಪ್ಪಿಸಿದ ॥ ೮೯

ಪಿರಿದು ತನ್ನನುಜನ ಶೌರ್ಯದೊಳಗೆಗಾಗ
ಹರುಷವ ತಾಳಿ ನಂಜೇಂದ್ರ ।
ಪುರಕೆ ಠಾಣೆಯನಿಟ್ಟು ಕರಿ ತುರಗಗಳನು
ನರಸ ರಾಜೇಂದ್ರಗೊಪ್ಪಿಸಿದ ॥ ೯೦

ಒಡನೆ ಕಂಠೀರವ ರಾಜೇಂದ್ರ ಹರುಷದ
ಕಡಲೊಳಗೋಲಾಡುತಾಗ ।
ಬಿಡದೆ ನಂಜೇಂದ್ರ ಲಿಂಗೇಂದ್ರರ ಮನ್ನಿಸಿ
ಪಡಗರದೊಳಗೆ ರಾಜಿಸಿದ ॥ ೯೧

ನರ ರಕ್ಕಸರ ಸಂಹರಿಸಿ ಭೂ ಭಾರವ
ಪರಿ ಹರಿಸುವೊಡ್ಯೈಕಂದ ।
* ನರ ರೂಪಿ ನರ ಸಿಂಹ ನರಸ ರಾಜೇಂದ್ರಸಂ
ದುರೆ ಪೊಗಳಿತು ಸರ್ವ ಜನವು ॥ ೯೨

* ನರರೂಪಿನ ಸಿಂಹ ನರಸ.

ಪಟ್ಟಣ ಖಳ ವಶ ವಾಗೆ ಕರ್ಣಾಟಕ
ಕೆಟ್ಟ ನಮ್ಮಯ ರಾಜ್ಯ ಸಿರಿಗೆ ।
ಮುಟ್ಟಡೆಯಾಗುವೆಂದದ ನಿಲಿಸಿದನೆಂದು
ಸೃಷ್ಟೀಶರು ಪೊಗಳಿದರು ॥ ೯೩

ಶ್ರೀ ರಂಗ ಪುರವನು ತುರುಕರ್ಗೆ ಕೊಡದೆ ನ
ಮ್ಮೋರಂತೆ ಸಲಹಿದನೆಂದು ।
ಮೂರು ಮನೆಯ ದೊರೆಗಳು ಪೊಗಳಿದರಾ
ವೀರ ಕಂಠೀರವ ನೃಪನ ॥ ೯೪

ತೀವಿದ ಪುಣ್ಯ ಸ್ಥಳದ ರಾಜ್ಯವ ಪಾಪ
ಜೀವಿಗಳಿಗೆ ವಶ ಗೊಡದೆ ।
ದೇವ ಬ್ರಾಹ್ಮಣರ ಪೊರೆದು ರಕ್ಷಿಸಿದನೀ
ಭೂ ವರನೆಂದುದು ಲೋಕ ॥ ೯೫

ಎಲ್ಲಿ ನೋಡಿದೊಡನ್ನ ಸತ್ರ ದಾಸೋಹಗ
ಳಲ್ಲಿ ನೋಡಲು ದೇವ ಪೂಜೆ ।
ಪಲ್ಲೈಸಿದುದೀ ನರಸೇಂದ್ರನ ರಾಜ್ಯ
ದಲ್ಲಿ ನಾನೇನ ಬಣ್ಣಿಸುವೆ ॥ ೯೬

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದ ಸುಧವರ್ಣಾನುಬಂಧಿ ॥ ೯೭

೧೬ನೆಯ ಸಂಧಿ ಸಮಾಪ್ತಂ

# ಹದಿನೇಳನೆಯ ಸಂಧಿ

ಸಾಂಬಳ್ಳಿಯಂ ಕಟ್ಟಿಕೊಂಡುದು

ಸೂಚನೆ || ಧರಣಿಗಗ್ಗಳ ಸಾಂಬಳ್ಳಿಯು ರಾಜ್ಯವ
ದುರದೆ ಸಲಿದ ನರಸೇಂದ್ರ ||

ಕಮಲ ಧರನ ನಿಜ ವೈರಿಗೆ ಬಳಿಕ ಸಂ
ಭ್ರಮದೊಳಾಹಾರವಾದವನ |
ಗಮನಕೋಡುವನೊಡೆಯನ ತನುಜನ ಕೊಂದ
ರಮೆಯು ರಮಣ ಸಲಹೊಲಿದು || ೧

ಇರುತಿರೆ ಸಾಂಬಳ್ಳಿಯು ಮೊದಲಾರಿಯು
ಹಿರಿಯು ತನುಜ ಪಟ್ಟದಯ್ಯ |
ಪಿರಿದು ಗರ್ವಿಸಿ ಯೆಲ್ಲೆಗಟ್ಟಿಗೆ ಮೈಸೂರ
ದೊರೆಯೊಳು ಧುರವನೆಸಗಿದ || ೨

ಮೊಲ ಮರಿ ಸಿಂಗದೊಡನೆ ಬಲು ಸಂಗರ
ಕೆಳಸಿ ಭೂಮಿಯೊಳು ಜೀವಿಪ್ಪುವೆ |
ಚಲದಂಕ ಕಂಠೀರವೇಂದ್ರನ ಕೆಣಕಿ ಮ
ತ್ತುಳಿವರೆ ರಿಪು ಮನ್ನೆಯರು || ೩

ಸಾಳುವೇಂದ್ರನ ಕೂಡರಗಿಳಿ * ಗಳಿಗೆ ಸಂ
ಮೇಳವೆ ಕಂಠೀರವನ |
ಕಾಳಗದೊಳಗಿದಿರಾಗಿ ಜೀವಿಸುವ ನೃ
ಪಾಲರುಂಟೇ ಲೋಕದೊಳಗೆ || ೪

---

* ಗೂಡನೆ ಸಂ.

ಧರೆಗೆ ದುರ್ಜನರಾದ ತುರುಕರ ಬಲವನು
ಹರಿ ಹಂಚ ಮಾಡಿಯೋಡಿಸಿದ ।
ದೊರೆ ರಾಯ ನರಸ ರಾಜೇಂದ್ರನ ಕೆಣಕಿ ಸು
ತ್ತರಿಗಳುಳವರೆ ಲೋಕದಲಿ ॥ ೫

ತನಗಿಂತ ಬಲ್ಲಿದನೊಳು ಶೌರ್ಯವಿಲ್ಲದೆ
ಯನುವರವನು ಕೆಣಕಿದನ ।
ಘನತರ ಮೂಢನೆಂದುಲಿವರಲ್ಲದೆ ಮತ್ತೆ
* ಘನ ಪ್ರಾಜ್ಞನೆಂಬರೆ ಬುಧರು ॥ ೬

ಬಳಿಕಾಗ ನರಸ ರಾಜೇಂದ್ರ ಚಂದ್ರನು ತನ್ನ
ದಳವಾಯ ಕರಿಸಿಯೋಲಗಕೆ ।
ಗಳಿಲನೆ ಮನ್ನಿಸಿ ನಗುತ ಮುಂದಣ ಕಾರ್ಯ
ದಳವಿಯ ನುಡಿದನಿಂತೆಂದು ॥ ೭

ಮಧುರೆಯವನ ಬಲುಹಿಂದ ನಮ್ಮೊಳಗುರಿ
ಕದನವ ಗಂಟಿಕ್ಕಿಕೊಂಡ ।
ಮೊದಲಾರಿಯ ಸುತನವನ ಗರ್ವ ಮುರಿ
ದೆದೆಗೆಡಿಸೈದಿ ನೀನೆಂದ ॥ ೮

ಮೂರಟ ಹಳ್ಳಿ ನಮ್ಮಯ ಮಳ್ಳಿ ಗಡಿಗಳು
ವೈರ ಬಂಧದೊಳಿರುತಿಪುದು ।
ಓರಂತೆ ಮುತ್ತಿಗೆ ಯಿಕ್ಕಿ ಯಾ ದುರ್ಗವ
ಸೇರಿಸು ನಮಗೆ ಹೋಗೆಂದ ॥ ೯

ಎಂದಾಗ ದಳವಾಯಿ ನಂಜ ರಾಜೇಂದ್ರನ
ಮಂದಿ ಸಹಿತ ಬೀಳ್ಕೊಟ್ಟು ।
ಚಂದದೆ ನರ ಲೋಕ ಭೋಗ ಸುರೇಂದ್ರನಾ
ನಂದದೊಳೆಸೆದನೇ ವೇಳ್ವ ॥ ೧೦

* ಮನ.

ಇತ್ತಲಾ ದಳವಾಯಿ ನಂಜರಾಜೇಂದ್ರ ಭೂ
ಪೋತ್ತಮನೊಡೆಯನಾಜ್ಞೆಯಲಿ ।
ಮೊತ್ತದ ಬಲ ಸಹಿತೈದಿ ಯಾ ಪುರವನು
ಮುತ್ತಿಗೆಯಿಟ್ಟನೇ ಪೇಳ್ವೆ ॥ ೧೧

ಹರಿಯು ನೇಮಿಡಲಿ ಸಾತ್ಯಕಿ ಸಾಲ್ವನ ಪುರ
ವರವ ಮುತ್ತಿಗೆಯಿಕ್ಕಿದಂತೆ ।
ನರಸರಾಜೇಂದ್ರನಾಜ್ಞೆಯಲಿ ಮೂಗಟ ಹಳ್ಳಿ
ಗಿರದೆ ಮುತ್ತಿಗೆಯಿಟ್ಟನಾಗ ॥ ೧೨

ಪುರದ ಚೌದೆಸೆಯಲಿ ತಳಿ ಮೋರುವೆಗಳ
ಪಿರಿದಾಗಿಹ ಸುರಂಗಗಳ ।
ಭರದಲಿ ರಚಿಸಿಯೊತ್ತರಿಸಿ ಮುತ್ತಿಗೆಯಿಕ್ಕಿ
ನೆರೆ ಬಂಧಿಸಿದನೇ ಪೇಳ್ವೆ ॥ ೧೩

ಕೇಳಿ ಬಳಿಕ ಪಟ್ಟದಯ್ಯ ಮಧುರೆಯುವ
ರಾಳು ಕುದುರೆಗಳು ಸಹಿತ ।
ಮೇಳದೊಳಗೆ ನಡೆತಂದಾ ಸ್ಥಳಕಾಗ
ದಾಳಿ ಮಾಡಿದನುಬ್ಬಿನಿಂದ ॥ ೧೪

ನಗುತೊಂದು ಲಕ್ಷ ಕಾಲಾಳಾನೆ ಕುದುರೆಗ
ಳಗಣಿತವನು ಕೂಡಿಕೊಂಡು ।
ಮಿಗೆಯಾ ಪುರವ ಮುತ್ತಿದ ಪಾಯಿ ದಳದೊಳು
ಜಗಳವ ಬಲಿದನೇನೆಂಬೆ ॥ ೧೫

ಕಂಡನು ವೈರಿನೃಪಾಲನ ಬಲ ಮುಂ
ಕೊಂಡೈದಿ ಬರುವ ಬಗೆಯನು ।
ಚಂಡ ವಿಕ್ರಮ ರಿಪು ಗಜ ಕಂಠೀರವ
ಮಂಡಲೇಶನ ದಳವಾಯಿ ॥ ೧೬

ಗಣಿಸದ್ವೈತರುವ ದಾವಾಗ್ನಿಯೊಳಗಾಣಗಿದ
ತೃಣದ ಬಣಬೆ ಯಡ್ಡವಹುವೆ ।
ರಣದೊಳು ನರಸ ರಾಜೇಂದ್ರನ ದಳಪತಿಯ
ಕೆಣಕಿ ಜೀವಿಪರುಂಟೆ ಜಗದೆ ॥ ೧೭

ಕಣಿವೆಯ ಬಾಗಿಲ ಕಟ್ಟಿಕೊಂಡಾ ಕ್ಷಣ
ಗುಣ ವಿಹೀನನ ಸರ್ವ ಬಲವ ।
ಹಣಿದವನಾಡಿ ನಂಜೇಂದ್ರ ಚಂದ್ರನಾಗ
ರಣ ಭೂತಗಳಿಗಿತ್ತ ಬಲಿಯ ॥ ೧೮

ಗಿರಿ ಗಹ್ವರವ ಹತ್ತಿಸಿ ವೈರಿ ಸು ಭಟರ
ಶಿರಗಳ ಸರ ಮಾಲೆಗಟ್ಟಿ ।
ಕರಿಗಳ ಪಿಡಿದು ದುರ್ಗವ ಕೊಂಡು ದಳಪತಿ
ನರಸ ರಾಜೇಂದ್ರನ ಕಂಡ ॥ ೧೯

ಚರಣಕ್ಕೆ ನಮಿಸಿ ಸಂತೋಷದೆ ಸೆಳೆ ತಂದ
ಕರಿತುರಗಗಳನೊಪ್ಪಿಸಲು ।
ಬಿರುದಿನ ಕಾಲ ಪೆಂಡೆಯ ಕಂಠ ಮಾಲೆಯ
ಕರೆದಿತ್ತು ಮಿಗೆ ಮನ್ನಿಸಿದ ॥ ೨೦

ಜಗಳದೊಳಿರಿದ ಮನ್ನೆಯ ಮಂಡಲಿಕರಿಗೆ
ಮಿಗೆ ಭೂಷಣಗಳುಡುಗೊರೆಯ ।
ನಗುತಾಗ ಕಂಠೀರವ ರಾಜ ಕರೆದಿತ್ತು
ಜಗಕತಿಶಯದೆ ಮನ್ನಿಸಿದ ॥ ೨೧

ಒಡನಂದು ಮುರಿದ ಬಲವ ಕೂಡಿ ಕಲಿ ಮಾಡಿ
ಬಿಡದೆ ಸಾಂಬಳ್ಳಿಯ ಭೂಪ ।
ತುಡುಗುಣಿ ತನದಲಾಲಂಬಾಡಿಯ ಕೊಂಡ
ಕಡೆಗೆ ಠಾಣೆಯವಿಕ್ಕಿದನು ॥ ೨೨

ಆಲಂಬಾಡಿಯು ಸೆಳೆದನೆಂಬೀ ಸುದ್ದಿ
ಬೀಳಲು ಕರ್ಣದೊಳಾಗ |
ಭೂ ಲೋಲ ನರಸೇಂದ್ರ ದಳವಾಯು ಕರೆದಾಗ
ಪಾಳಿ ಮಾಡೆಂದು ನೇಮಿಸಿದ ॥ ೨೩

ಪಸಿದಾರ್ಭಟಿಸುವ ಹುಲಿಯು ಮೀಸೆಯು ಮುರಿ
ಶಶಕ ಬಂದಲುಗಿಸುವಂತೆ |
ಹಸನರಿಯುದೆ ಕೆಣಕಿದ ವೈರಿ ಬಲವನು
ದೆಸೆ ಬಲಿಗೊಡು ಹೋಗೆಂದ ॥ ೨೪

ಪ್ರಳಯ ಕಾಲಾಗ್ನಿಯಂ ತುಡುಕಿ ಪತಂಗದ
ಹುಳು ಜೀವ ಸಹಿತವುಳಿವುದೆ |
ಅಳವರಿಯುದೆ ನಮ್ಮ ಕೆಣಕಿದನಾತನ
ಬಲುಹ ಭಂಗಿಸು ಹೋಗೆಂದ ॥ ೨೫

ಎಂದು ನುಡಿದ ತನ್ನೊಡೆಯನಾಜ್ಞಾಪನೆ
ಯಿಂದ ಬಲವ ಕೂಡಿ ಕೊಂಡು |
ಸಂದಣಿಸುತ ದಳವಾಯಿ ನಂಜೇಂದ್ರಸ್ಯ
ತಂದು ಮುತ್ತಿದ ರಿಪು ಬಲವ ॥ ೨೬

ಕವಿ ಕವಿ ಹೆಬ್ಬಲದೊಡನಿಂತು ಕಿರು ಬಲ
ಬವರಕಾನುವುದೆಯೆಂದೆನುತ |
ತವಕದಿನಾನೆ ಕುದುರೆ ಕಾಲಾಳು ಬಂ
ದವಗಡಿಸಿದುದೇ ವೇಳ್ವ ॥ ೨೭

ಪಿರಿದಾದ ಚತುರಂಗದ ಪದ ಹತಿಯುಲಿ
ಮುರಿದೇಳ್ವ ಕೆಂದೂಳ್ಗಳಾಗ |
ತರಣಿ ಮಂಡಲವ ಮುಂ ಬಲಿದು ಮುಂ ಕೊಳುತಂದು
ಕಿರಣದೇಳಗೆಯ ತಗ್ಗಿಸಿತು ॥ ೨೮

ಎಸೆವಾಳು ಕುದುರೆ ಗಜಗಳ ಮೋಹರದಲಿ
ನುಸುಳಲಾರದೆ ಪವಮಾನ |
ಹಸಗೆಟ್ಟು ಮಂದ ಗತಿಯನ್ನೈದಿದನಿ
ನ್ನುಸಿರಲಳವೆ ಯಾ ಬಲುವ || ೧೯

ಬೊಬ್ಬೆ ಯಾರ್ಭಟೆ ಬಿಲ್ಲ ಜೇವಡೆ ಹಯಗಳ
ಕೊಬ್ಬಿನ ಬಲು ಹೇಷಿತದಾ |
ಅಬ್ಬರ ಗಜದ ಘಂಟಾ ರವ ಮೊಂದಾಗಿ
ಮರ್ಬಿ ಮುಸುಕಿದುವೆಣ್ದೆಸೆಯ || ೨೦

ಹಿಂದಕ್ಕೆ ಹಜ್ಜೆಯ ತೆಗೆದವರಿಗೆ ಸ್ವರ್ಗ
ವೆಂದೆಂದಿಗಿಲ್ಲವೆಂದೆನುತ |
ಕುಂದದೆ ಭಾಷೆಗಳನು ಮಾಡಿ ಪಟು ಭಟ
ಬೃಂದ ಮುಸುಕಿತೇ ವೇಳ್ವ || ೨೧

ಅಳ್ಳಿದೆಗಳ ಮನ್ನೆಯರೈದ ಬೇಡೆಂದು
ನಿಲ್ಲದೆ ಗಜರಿ ಗರ್ಜಿಸುತ |
ಬಲ್ಲಿದ ಭಟರು ಭಾಷೆಯ ಮಾಡಿ ಮೊದಲೆ
ಸೊಲ್ಲುಗಳಿಂ ತರುಬಿದರು || ೨೨

ಹಸಿದೊಡೆ ಬಾಯ ಬಸುರ ಬಡಿದಳುತಾಗ
ಳಸೆವಂಗುಳ ಹಂದೆಗಳು |
ಜಸ ಪರಿಪೂರ್ಣ ಕಂಠೀರವೇಂದ್ರನ ಪೌ
ರುಷಕಿದಿರಾಗಿ ನಿಲ್ಲುವರೆ || ೨೩

ಇರಿ ಕಡಿ ತರಿ ಹೊಯ್ ಗಂಜಿಗುಡುಕರಸಿಂ
ದುರುಬಿ ಮುಮ್ಮೊನೆಯ ನಾಯಕರು |
ಕರದ ಖಂಡೆಯದಿಂದಲಿಟ್ಟು ಬಾಕಿನೊಳಾಗ
ತರಿದಿರಿದವುಕುತಟ್ಟಿದರು || ೨೪

ಡೊಳ್ಳು ಹೊಟ್ಟೆಯನೆತ್ತಿಕೊಂಡೋಡಲಾರದೆ
ಹಳ್ಳ ಕೊಳ್ಳದಲಿ ಮುಗ್ಗರಿದು ।
ಮುಳ್ಳಲ್ಲಿ ಬಿದ್ದು ಮೂಗರಿಸಿಕೊಂಡರ ಲೆಕ್ಕ
ವೆಲ್ಲವನಾರು ಬಣ್ಣಿಪರು ॥ ೩೫

ಪೊನ್ನ ಮುಲಿಯು ಗೌಡನು ಪುಳಿಗೌಡನು
ಚೆನ್ನ ವೆಂಕಟ ರಾವೆಣೆಯು ।
ಉನ್ನತ ಸೀನಿವಾಸನು ಮೊದಲಾಗಿಹ
ಮನ್ನೆಯರನು ಸೆರೆ ವಿಡಿದ ॥ ೩೬

ಆತನ ತಳತಂತ್ರವ ಸದೆಬಡಿದು ಮ
ತ್ತಾತನ ದಳವಾಯು ಪಿಡಿದು ।
ಆತ ಸೆಳೆದ ದುರ್ಗವ ಕೊಂಡು ನಂಜೇಂದ್ರ
ಖ್ಯಾತಿವಡೆದನೇ ಪೇಳ್ವ ॥ ೩೭

ನಲ್ಲೂರು ವೊಂಟು ಹಳ್ಳಿಯು ಚಂಗಪಾಡಿಯು
ನುಲ್ಲಾಸದಲಿ ಸೆಳದಾಗ ।
ಪಲ್ಲೈಸುವ ಹರುಷದೊಳಾಗ ತೋಳೆಯು
ದಲ್ಲಿ ಬಿಟ್ಟನು ಪಾಳೆಯವ ॥ ೩೮

ಮನ ನೊಂದು ಸಾಂಬಳ್ಳಿಯ ಭೂಪ ಮಧುರೆಯ
ಜನ ನಾಥಗೆ ಮೊರೆ ಯಿಟ್ಟು ।
ಘನವಾದ ತಳತಂತ್ರವ ಕೂಡಿಕೊಂಡಾಗ
ಮುನಿದೈತಂದನೇನೆಂಬೆ ॥ ೩೯

ಕುದುರೆ ನಾಲ್ಕೈದು ಸಾವಿರ ಪಾಯಿದಳ ಲಕ್ಷ
ಮದ ಗಜ ನೂರಾರುವೆರಸಿ ।
ಮಧುರೆ ನೃಪನ ಪೋಷರ ದಳಪತಿ ಗೂಡಿ
ಕದನಕ್ಕೈತಂದನೇ ವೇಳ್ವ ॥ ೪೦

ಬಂದೊಂದು ಪೌಜಿನೊಳಗೆ ಹತ್ತು ಸಾವಿರ
ಮಂದಿ ಕುದುರೆ ಯೈನೂರು ।
ಕುಂದದೆ ಗಜ ಘಟೆ ಸಹಿತ ದೊರೆಗಳಾಗ
ನಿಂದರು ಧುರ ಮೋಹರದೆ ॥ ೪೧

ಕೊರಳ ಯಜ್ಞೋಪವೀತದ ಮುಡಿ ಹೂಗಳ
ಪರಿಮಳಿಸುವ ಗಂಧದಿಂದ ।
ಕರದೊಳು * ಪಿಡಿಯುನಾಂತರಸು ಮಕ್ಕಳುಗಳು
ಧುರಕನುವಾದರೈನೂರು ॥ ೪೨

ಎಲ್ಲಿ ನೋಡಲು ಕಾಲಾಳು ಕುದುರೆ ಯಾನೆ
ಯೆಲ್ಲಿ ನೋಡಲು ವಾದ್ಯಗಳ ।
ಘಲ್ಲಣೆ ತುಡುಮುಗಳಬ್ಬರ ಮೊರೆದುವ
ಲ್ಲಲ್ಲಿ ಮೆರೆದುವೇ ವೇಳ್ಯ ॥ ೪೩

ಅಂದು ಸಪ್ತವ್ಯೂಹದಲಿ ಕಲಿ ಪಾರ್ಥನ
ಬಂದು ಮುತ್ತಿದ ಕೌರವನ ।
ಮಂದಿ ಕುದುರೆ ಯೆನೆ ಮಧುರೆಯ ಬಲವ್ಕೆ
ತಂದು ಮುತ್ತಿತು ದಳ ಪತಿಯು ॥ ೪೪

ಬಾಲಾರ್ಕ ಬಿಂಬವ ಮುಸುಕಿದ ಮಂಜಿನ
ದಾಳಿ ಯೆಂದೆನೆ ದಳ ಪತಿಯು ।
ತೂಳುವ ವಾದ್ಯ ರಭಸದಿಂದ ರಿಪು ಭಟ
ಜಾಲ ಮುತ್ತಿದುದೇ ವೇಳ್ಯ ॥ ೪೫

ಬಡಬಾಗ್ನಿಯು ಮುನ್ನೀರ ತೆರೆಗಳೈದಿ
ತುಡುಕಿ ತೂಳುವ ತೆರದಿಂದ ।
ಕಡು ತವಕದೆ ಕುದುರೆಯ ರಾವುತರೈದಿ.
ಬಿಡದೆ ಮುತ್ತಿದರುಬ್ಬಿನಲಿ ॥ ೪೬

---

* ಪಿಡಿಯುವಾಂತ.

ಕುಲ ಗಿರಿಗಳ ಬಳಗಗಳ್ಳೈದಿ ನಿವಿಂಷದೆ
ಬಲ ರಿಪುವನು ತಡೆದಂತೆ ।
ದಳವಾಯಿ ನಂಜರಾಜೇಂದ್ರನ ಕರಿ ಸಂ
ಕುಳವೈತಂದು ಮುತ್ತಿದುವು ॥ ೪೭

ಕಂಡನು ವೈರಿ ಮಾರ್ಬಲ ಕದನಕೆ ಮುಂ
ಕೊಂಡೈದಿ ಬರುವ ಭಾವವನು ।
ಚಂಡ ವಿಕ್ರಮ ದಳ ಪತಿ ನಡು ಹಗಲ ಮಾ
ರ್ತಂಡನಂತಿದಿರಾದ ಬಲಕೆ ॥ ೪೮

ಹೊಡೆವ ಡಮಾಮಿ ಕಹಳೆ ಡವುಡೆ ವಾದ್ಯದ
ಜಡಿವ ನಾನಾ ಯುಧಗಳಲಿ ।
ಬಿಡುವ ಪಟಲು ಸೂಸುವ ಬಾಣದುರಿಯಿಂದ
ತುಡುಕಿದ ರಿಪು ಮೋಹರವ ॥ ೪೯

ಬೊಬ್ಬೆಯುಬ್ಬರ ಗಜಗಳ ಘಂಟಾ ರವ
ದುಬ್ಬು ಕುದುರೆಗಳ ಖುರದ ।
ಮಬ್ಬಿನ ಕೆಂದೂಳು ಮಧುರೆಯುವರ ಬಲ
ದೊಬ್ಬುಳಿಯನು ಬೆರಸಿದುದು ॥ ೫೦

ದಳವಾಯಿ ನಂಜರಾಜೇಂದ್ರನ ಡಾಳಿನ
ಹೊಳಹು ಡಮಾಮಿಯುಬ್ಬರದ ।
ಸುಳಿವ ಕಂಡಾಕ್ಷಣ ಹತ್ತು ಪಾಜೊಂದಾಗಿ
ತಳಹೊಳಗೊಂಡುದೇ ವೇಳ್ವ ॥ ೫೧

ರಾಯ ರಾವುತರು ತೂಳಿಸಿ ಕುದುರೆಗಳನು
ಭೋಯೆಂದು ಬೊಬ್ಬಿರಿದೇರಿ ।
ಬಾಯ ಬಿಡಲು ರಿಪು ಬಲ ಪೌಜನೊಳ ಹೊಕ್ಕು
ಸಾಯಲಿರಿದರೇ ವೇಳ್ವ ॥ ೫೨

ರಾಮನೆಚ್ಚಂಬು ರಾವಣನ ಬಹುಳ ಬಲ
ಸ್ತೋಮವ ಜಯಿಸುವಂದದಲಿ ।
ಭೂಮಿಪ ನರಸೇಂದ್ರನ ದಳಪತಿ ಸಂ
ಗ್ರಾಮದೊಳರಿದ ವೈರಿಗಳ ॥ ೫೩

ಹರಿ ಯಿಟ್ಟ ಚಕ್ರ ರಕ್ಕಸರ ಮಾರ್ಬಲದೊಳ್
ಗುರುವಣಿಸುವ ತೆರದಿಂದ ।
ನರಸ ರಾಜೇಂದ್ರನ ದಳವಾಯಿ ರಿಪುಗಳ
ನರೆಯಟ್ಟಿದ ರಣದೊಳಗೆ ॥ ೫೪

ಭೀಮ ಸೇನನ ಗದೆ ಕೌರವ ಬಲವನು
ಭೂಮಿಗೆ ಕೆಡಹುವಂದದಲಿ ।
ಸ್ವಾಮಿ ಕಂಠೀರವೇಂದ್ರನ ದಳಪತಿ ನಿ
ಸ್ಸೀಮ ಹೊಯ್ದನು ರಿಪು ಬಲವ ॥ ೫೫

ಓಡಿದವರು ಗಾಯವಡೆದಾಗ ಜೀವವ
ನೀಡಿದವರು ಯಮ ಪುರಕೆ ।
ಕೂಡಾಗ ಮಧುರೆಯ ಬಲ ಹರಿ ಹಂಚಾಗಿ
ಜೋಡಿಸಿದರು ಪಲಾಯನವ ॥ ೫೬

ಹಿಂದಕ್ಕೆ ಹಜ್ಜೆಯ ತೆಗೆದೊಡೆ ಪಾತಕ
ವೆಂದಾಗ ಮಧುರೆಯರಸನ ।
ಮಂದಿಯೊಳ್ಳೈನೂರರಸು ಮಕ್ಕಳು ಕಾದಿ
ಸಂದರು ಸಗ್ಗ ಹೆಂಗಳಿಗೆ ॥ ೫೭

* ಕಲುಗೋಟೆಯ ವೇಂಕಟಪ್ಪ † ನಾಯಕನೊಳು
ದಲೆಯನರಿದು ಸೆಂಡಾಡಿ ।
ದಳವಾಯಿ ನಂಜ ರಾಜೇಂದ್ರ ತನ್ನೊಡೆಯಗೆ
ಬಲು ಕೀರ್ತಿಯ ತಂದನಂದು ॥ ೫೮

* ವೇಲುಗೋಟೆಯ. † ನಾಯಕನನುತಲೆ.

ಸಲೆ ಮೂರು ಗಾವುದ ಪರಿಯಂತ ರಿಪುಗಳ
ಬಲವ ಮುರಿದು ಬೆನ್ನಟ್ಟಿ ।
ತಳುವದೆ ನಾಲ್ಕು ಸಾವಿರ ಕೋಳು ಸಹಿತಾಗ
ದಳ ಪತಿ ಬಂದ ಪಾಳಯಕೆ ॥ ೫೯

ಪೊಡವಿಪ ಕಂಠೀರವನಪ್ಪಣೆಯಿಂದ
ಬಿಡದೆ ಸಾಂಬಳ್ಳಿಯ ಮುತ್ತಿ ।
ಕಡು ಬೇಗದಲಿ ಕೊಂಡು ಠಾಣೆಯ ವಿಕ್ಕಿ ತ
ನ್ನೊಡೆಯನಿದ್ದೆಡೆಗೈತಂದ ॥ ೬೦

ಸಂದಣಿಸುವ ಮನ್ನೆಯರಿಂದ ದಳ ಪತಿ
ಬಂದಾಗ ನರಸ ಭೂ ವರನ ।
ಬಂಧುರವಹ ಪಾದಕ್ಕೆರಗಲಾನಂದ
ದಿಂದವರನು ಮನ್ನಿಸಿದ ॥ ೬೧

ಮುರಿದಿತ್ತು ತನ್ನಯ ಬಲ ಹರಿಹಂಚಾಗೆ
ದೊರೆ ಮಕ್ಕಳಳಿದ ವಾರ್ತೆಯನು ।
ಇರದಾಗ ಮಧುರೆಯರಸ ಕೇಳಿ ಮನ ನೊಂದು
ವರ ಮಂತ್ರಿಗಳೊಳಿಂತೆಂದ ॥ ೬೨

ನೆರೆ ಲಕ್ಷ ಬಲವ ಕಿರಿದು ಬಲದಿಂದಾಗ
ಮುರಿದೋಡಿಸಿದವನಿಪನ ।
ನರಸಿಂಹ ಮೂರ್ತಿ ಯೆಂದೆನ ಬೇಕಲ್ಲದೆ
ಕಿರಿದೊಂದನೆಣಿಸಲೇಕೆಂದ ॥ ೬೩

ಪೊಡವಿಯೊಳಾತನ ದಳವಾಯಿಗಿದಿರಾಗಿ
ಕಡುಗಿ ನಿಲ್ವರಿಗಳ ಕಾಣೆ ।
ಕಡೆಯ ಮಾತಿನ್ನೇನವನ ರಕ್ಷಿಸಿ ಬಹಾ
ವೊಡೆಯನ ಶೌರ್ಯವಿನ್ನೆಂತೊ ॥ ೬೪

ಗರುಡನ ಗರಿಯು * ಗಾಳಿಗೆ ದೆಸೆ ದೆಸೆಗಾಗ
ಪರಿವ ಪನ್ನಗ ಕುಲ ದಂತೆ ।
ಮುರಿದೋಡಿತು ನಮ್ಮ ಬಲವಾ ದಳವಾಯ
ಬುರುಗಿನ ದನಿಯು † ನಾಲಿಸುತ ॥ ೬೫

ಮುತ್ತಿಗೆ ಯಿಕ್ಕಿ ಸಾಂಬಳ್ಳಿಯ ಸೆಳದವ
ನೊತ್ತಿ ಬಂದೆಮ್ಮ ರಾಜ್ಯಗಳ ।
ಸುತ್ತಿ ಸುಳಿದು ಧೂಳಿ ಪಟ ಮಾಡೆ ನಮಗಿ
ನ್ನೆತ್ತಣ ದೊರೆ ತನ ವೆಂದ ॥ ೬೬

ನೆರೆ ಲಕ್ಷ ಪರಿ ಪಾಯ ದಳದ ಮನ್ನೆಯ ಸೋತು
ಹೆರ ಸಾರಿದನಲ್ಲ ಬಲಕೆ ।
ಧರೆಯೊಳಾತನ ಮಾತೇಕೆಂದು ನಮ್ಮನು
ಸರಿದೊರೆ ನಗುವಂತಾಯ್ತು ॥ ೬೭

ಕಡೆಯ ಮಾತೇಕಿನ್ನು ಸರ್ವ ಬಲವ ಕೂಡಿ
ನಡೆದು ಸಾಂಬಳ್ಳಿಯ ಮುತ್ತಿ ।
ಬಿಡದೆ ಸೆಳದು ಭಂಗಿಸಿದಲ್ಲದೆ ನಮ್ಮ
ಪೊಡವಿಗುಕ್ಕಳವಿಲ್ಲೆಂದ ॥ ೬೮

ಎಂದಾಗ ಮೂಲ ಬಲವ ಕೂಡಿ ಕೋಪದೆ
ನಿಂದಲ್ಲಿ ನಿಲ್ಲದೈತಂದು ।
ಕುಂದದೆ ಸಾಂಬಳ್ಳಿಯ ಮುತ್ತಿಗೆಯಿಟ್ಟ
ನಂದಾಗ ಮಧುರೆಯ ಭೂಪ ॥ ೬೯

ಬಡನಾಗ ಚರರೈತಂದೀ ಸುದ್ದಿಯ
ಕಡುಗಲಿ ಕಂಠೀರವಗೆ ।
ಬಿಡದೆ ಬಿನ್ನೈಸಲು ಕೇಳಿ ಕೋಪಾಗ್ನಿಯ
ಕಿಡಿಯ ಸೂಸಿದ ಕಂಗಳೊಳಗೆ ॥ ೭೦

---

* ಗಾಳಿಯ. † ಲಾಲಿಸುತ.

ಮೂಗರಿದೊಡೆ ಜಾಂಗು ಭಲರೆಂಬ ಭಂಡ * ನೀ
ನಾಗದೆ ಮಧುರೆಯ ನೃಪನ ।
ಬೇಗದೆ ಮುತ್ತಿಗೆ ದೆಗಿಸೆಂದು ದಳವಾಯ
ಭೋಗಧೀಶ್ವರ ಬೀಳ್ಕೊಟ್ಟ ॥ ೨೧

† ಬಲು ಪಯಣದ ಮೇಲೆ ಮನ್ನೆಯರ್ ದಳ ಸಹ
ನಿಲುಗಡೆ ಯಿಲ್ಲದೆ ನಿಲದೆ ।
ತಳುವದೈತರಲು ಸಾಂಬಳ್ಳಿಯ ರಾಷ್ಟ್ರಕ್ಕೆ
ದಳವಾಯಿ ಸಹ ನಡೆತಂದ ॥ ೨೨

ಪ್ರಳಯ ಕಾಲದ ಮಾರುತ ಮೇಘದೊಡ್ಡನು
ತುಳಿದು ತೂರುವ ತೆರದಂತೆ ।
ತಳತಂತ್ರ ಸಹ ದಳ ಪತಿ ಬಂದು ರಿಪು ಬಲ
ಜಳಧಿಯ ಮೊಗೆದನೇನೆಂಬೆ ॥ ೨೩

ಹುಲಿಯಬ್ಬರಕೆ ಪಶು ಸಂಕುಳ ದೆಸೆ ದೆಸೆ
ಗಳವಳದೋಡುವಂದದಲಿ ।
ದಳವಾಯಿ ನಂಜರಾಜೇಂದ್ರನ ಕಾಣುತ
ನಿಲಲಾರದರಿಗಳೋಡಿದರು ॥ ೨೪

ಶಿವ ಪಂಚಾಕ್ಷರಿ ಮಂತ್ರಕೆ ಜೀವರ
ಭವ ಬಂಧ ಪರಿದೋಡುವಂತೆ ।
ತವೆ ನರಸೇಂದ್ರನ ದಳವಾಯ ಘಾತಿಗೆ
ಸು ವಿಲಾಸವಳಿದರರಿಗಳು ॥ ೨೫

* ನಿರಾಗದಿ ಮಧುರೆಯನೃಪನು.
† ಪಯಣ ಪಯಣದ ಮೇಲೆ ಬಂದಾಗ ದಳ ಸಹ
ನಿಲುಕದೆ ನಿಲ್ಲದೆ ನಿಲದೆ ।
ತಳುವದೈತಂದು ಸಾಂಬಳ್ಳಿಯ ರಾಷ್ಟ್ರಕ್ಕೆ
ಪರಿವಾರಸಹ ನಡೆತಂದ ॥

ಹರಿ ನಾಮ ಸ್ಮರಣೆಗೆ ಪಾಪದ ಪುಂಜವು
ಮುರಿದೋಡುವಂದದೊಳಾಗ ।
ದೊರೆ ರಾಯ ಕಂಠೀರವನ ಪ್ರತಾಪ
ಕ್ಕರಿಗಳೋಡಿದರ್ದೆಸೆ ದೆಸೆಗೆ ॥ ೭೬

ಮದ ಕರಿ ಕದಳಿಯ ಬನವ ಹೊಕ್ಕೊಡನಾಗ
ಹೊದರ ಕಿತ್ತೀಡಾಡುವಂತೆ ।
ಮಧುರೆಯ ನೃಪನ ಮಾರ್ಬಲವ ತತ್ತರಿದರಿ
ದೆದೆಗೆಡಿಸಿದ ದಳವಾಯಿ ॥ ೭೭

ಆನೆಯ ಬಲವೊಂದೆಸೆ ಕುದುರೆಯ ಪೌಜಿ
ನಾನಿಕೆ ಯೊಂದೆಸೆಗಾಗೆ ।
ಏನೆಂಬೆ ಕಾಲಾಳು ದಿಕ್ಕು ದಿಕ್ಕಿಗೆ ದು
ಮ್ಮಾನದೆ ತೆಗೆದೋಡಿದುದು ॥ ೭೮

ತಿರುಮಲೇಶ್ವರನ ಬಿರುದಿನ ಡಮಾಮಿಯ
ನೆರೆ ಡಾಳುಗಳ ಸೆಳೆದಾಗ ।
ದುರ ಗಲಿ ದಳವಾಯಿ ನಂಜರಾಜೇಂದ್ರ ಮ
ತ್ತುರುವಣಿಸಿದನೇ ವೇಳ್ವ ॥ ೭೯

ಊರೊಳಗಣ ಭಟರೈತಂದು ಮಧುರೆಯ
ಧಾರಿಣೀಶ್ವರನ ಪಾಳೆಯವ ।
ಸೂರೆಯನಾಡಿ ಗೂಡಾರಗಳನು ಕಿತ್ತು
ಜಾರಿಸಿದರು ದೆಸೆ ದೆಸೆಗೆ ॥ ೮೦

ಕಡಿದು ಮುತ್ತಿಗೆಯನೆಬ್ಬಿಸಿ ಯೆಂದೆಂದಿಗೀ
ಕಡೆಯುಲಿ ಸುಳಿಯದಂತಾಗ ।
ಕಡು ಭೀತಿಯ ಪುಟ್ಟಿಸಿ ದಳವಾಯಿ ಮ
ತ್ತೊಡನೆ ಮುಂಡಕೆ ದಾಳಿ ಗೈದ ॥ ೮೧

ತಿರುಣಾಮಲೆ ತಿರುಚಂಗೂಡು ಮೊದಲಾಗೆ
ತಿರುಚನಪುರಿ ಪರಿಯಂತ ।
ತಿರುಗಿ ದಾಳಿಯನಾಡಿ ದಳವಾಯಿ ನಂಜೇಂದ್ರ
ತಿರುಗಿದನೊಡೆಯನಿದ್ದೆಡೆಗೆ ॥ ೮೨

ಬಂದಾಗ ಕಂಠೀರವೇಂದ್ರನ ಪಾದಾರ
ವಿಂದಕ್ಕೆ ಮನ್ನೆಯರ್ಕೂಡಿ ।
ವಂದಿಸೆ ದಳವಾಯಿ ನಿಟ್ಟಿಸಿ ನಗುತಾ
ನಂದವೈದಿದ ಭೂ ಪಾಲ ॥ ೮೩

ದಳ ಪತಿ ಮನ್ನೆಯರಿಗೆ ಸಂತೋಷದೆ
ಸು ಲಲಿತ ಭೂಷಣಾಂಬರವ ।
ನಲಿದಿತ್ತು ಕಂಠೀರವ ರಾಜ ಮನ್ನಿಸಿ
ಕಳುಹಿದನೇನ ಬಣ್ಣಿಸುವೆ ॥ ೮೪

ಇಂತೊಪ್ಪುತಿಹ ಜಯ ಸಿರಿ ಭಾಗ್ಯ ಲಕ್ಷ್ಮಿಗೆ
ಸಂತತ ನಾಯಕನಾಗಿ ।
ಕಂತು ಸನ್ನಿಭ ನರಸೇಂದ್ರ ಚಂದ್ರಮನ
ತ್ಯಂತ ಸೌಖ್ಯದೊಳೊಪ್ಪುತಿರ್ದ ॥ ೮೫

ಚಂಡಿ ಚಾಮುಂಡಿಯ ಕರುಣದೆ ಭೂಮಿಾ
ಮಂಡಲಪ ಕಂಠೀರವನು ।
ಚಂಡ ಸಾಹಸಿ ಯೆನಿಸಿದ ಗರ ಪುರಿ ನಂ
ಜುಂಡನ [ಕಡು] ದಯದಿಂದ ॥ ೮೬

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದ ಸು ಧರ್ಮನು ಬಂಧಿ ॥ ೮೭

೧೭ ನೆಯ ಸಂಧಿ ಸಮಾಪ್ತಂ.

# ಹ ದಿ ನೆ ೦ ಟ ನೆ ಯ ಸ ೦ ಧಿ

ಪಿರಿಯ ಪಟ್ಟಣದ ಲಗ್ಗೆ

ಸೂಚನೆ॥ ಪಿರಿಯ ಪಟ್ಟಣ ಪಾಲುಪರೆಯ ಸೆಳೆದು ಜಯಃ
ಸಿರಿಯ ತಾಳಿದ ನರಸೇಂದ್ರ ॥

ಇಂತೊಪ್ಪುತಿಹ ರಿಪು ಭೂಮಿಪಾ ಪಾಲರ
ಪಂತ ಪಾಡುಗಳನು ಮುರಿದು ।
ಕಂತು ಸನ್ನಿಭ ಕಂಠೀರವ ಧರಣೀ
ಕಾಂತ ರಾಜ್ಯವನಾಳುತಿರ್ದ ॥ ೧

ಇತ್ತಲಾ ನರಸಿಂಹ ಪುರವನಾಳುವ ಭೂ
ಪೋತ್ತಮು ಕಪ್ಪವ ಕೊಡದೆ ।
ಮತ್ತಾಗ ತುರುಕರ ಬಲುಮೆವಿಡಿದು ಚಲ
ವೆತ್ತಿರ್ದನೇನ ಬಣ್ಣಿಸುವೆ ॥ ೨

ಕಪ್ಪವ ಕೇಳ ಬಂದಿಹ ಕಂಠೀರವ
ನೊಪ್ಪದೋಲೆಯ ದೂತರನು ।
ತಪ್ಪ ನುಡಿದು ಕೋಪದೆ ಕಳುಹಿಸಿ ಮೇರೆ
ದಪ್ಪಿದನೇನೆಂಬೆನದನು ॥ ೩

ಚರರೈದಿ ನರಸ ರಾಜೇಂದ್ರ ಚಂದ್ರನ ಪಾದ
ಸರಸಿಜಗಳಿಗೆ ಕೈ ಮುಗಿದು ।
ನರಸಿಂಹ ಪುರದವ ಗರ್ವಿಸಿದಂದವ
ಪಿರಿದಾಗೆ ಬಿನ್ನೈಸಿದರು ॥ ೪

ಬಳಿಕದ ಕೇಳಿ ಕರಿಸಿ ಕಂಠೀರವ
ದಳವಾಯಿ ನಂಜ ಭೂ ವರನ ।
ಚಲವ ಬಲಿದು ನರ ಸಿಂಹ ಪುರದ ಭೂಪ
ಮಲೆತ ಬಗೆಯ ಪೇಳ್ದನಾಗ ॥ ೫

ಬಡವನ ಕೋಪವೌಡಿಗೆ ಮಾರಿಯಾದಂತೆ
ಕಡು ನೊಂದು ನರ ಸಿಂಹ ಪುರದ ।
ಪೊಡವಿಪ ಕಪ್ಪವ ಕೊಡನೆ ರಾಜ್ಯವ ಕೊಂಡು
ಕಡೆಗೆ ತೇಲಿಸು ನೀನೆಂದ ॥ ೬

ಆದಿ ಗಾಲವು ನಮ್ಮ ನಂಬಿದ ದೊರೆ ಯೆಂದು
ಕಾದು ಬಂದೊಡೆ ತನಗೀಗ ।
ವಾದವೆ ನಮ್ಮೊಳು ನರಸಿಂಹ ಪುರವನು
ಸಾಧಿಸು ಹೋಗು ನೀನೆಂದ ॥ ೭

ಜೀಯ ಹಸಾದವೆನುತ ಬಲು ಮನ್ನೆಯ
ನಾಯಕ ತಳತಂತ್ರ ಸಹಿತ ।
ಆಯತದೊಳಗಾ ಪುರವ ಮುತ್ತಿದ ದಳ
ವಾಯಿ ನಂಜೇಂದ್ರನೇ ವೇಳ್ವ ॥ ೮

ಮುತ್ತಿಗೆ ಯಿಕ್ಕಿದ ಬಲಕೆ ಚೌ ದೆಸೆಯೊಳ
ಗಿತ್ತಾಗ ಬಲು ಜಗಳವನು ।
ಚಿತ್ತದೊಳಣಿಕೆಗೊಳ್ಳದೆ ಶೌರ್ಯ ಗರ್ವೋ
ನ್ಮತ್ತನಾಗಿರ್ದನೇ ವೇಳ್ವ ॥ ೯

ಬಳಿಕಾಗ ಪುರದ ಚೌ ದೆಸೆಯಲಿ ತಳಿಗಳ
ನಳವಡಿಸಿಯೆ ಮನ್ನೆಯರು ।
ದಳವಾಯ ನೇಮದೆ ನೆರೆದಾನಿಸಿದೊಂ
ದಳವ ನಾನೇನ ಬಣ್ಣಿಸುವೆ ॥ ೧೦

ಸೇರಿ ಯಾ ಪುರದ ಚೌದೆಸೆಯ ಸುರಂಗ
ದ್ವಾರಗಳನು ಮೂಡಿಯಾಗ ।
ಪೂರೈಸಿ ಪೆಟಲುಪ್ಪಿನಿಂದ ಕೊತ್ತಳಗಳ
ಹಾರಿಸಿದುದನೇನೆಂಬೆ ॥ ೧೧

ಒಂದು ದಿನದೆ ಯಾ ಪುರಕೆ ಸಂವರಣೆಯ
ತಂದಾಗ ತುರುಕ ಮನ್ನೆಯರು ।
ಮುಂದು ವರಿದು ಪೊಳ ಹೊಗ ಬೇಕೆಂದೈ
ತಂದಬ್ಬರವನೇನೆಂಬೆ ॥ ೧೨

ಕುದುರೆ ನಾಲ್ಕೆಂಟು ಸಾವಿರ ಸಹ ಖಾನರು
ಮದ ಮುಖದೊಳಗೈತಂದು ।
ಕದನವ ಗಂಟಿಕ್ಕಿ ಮುತ್ತಿದ ಬಲದೊಳು
ಹದಗೆಟ್ಟರೇನ ಬಣ್ಣಿಸುವ ॥ ೧೩

ದುರವನೆಸಗುತಿಹ ಖಾನ ಖಾನರುಗಳ
ಮುರಿಯಲಿರಿದು ದೆಸೆಗೆಡಿಸಿ ।
ನರಸೇಂದ್ರನ ದಳ ಪತಿ ನಂಜರಾಜೇಂದ್ರ
ಬಿರುದ ಮೆರೆದನುಬ್ಬಿನಲಿ ॥ ೧೪

ಸಿಡಿಲಿನುರುಬೆಯ ತಾಳಲೆಯೊಳು ಮೂಡಿದ
ಕೊಡೆ ತಾಳಲಾಪುದೇನಾಗ ।
ಕಡುಗಲಿ ಕಂಠೀರವೇಂದ್ರನ ಶೌರ್ಯಕಾ
ಬಡ ಮನ್ನೆಯರಿದಿರಹರೆ ॥ ೧೫

ಪಿರಿದು ಮುತ್ತಿಗೆಯುರುಬೆಯ ತಾಳಲಾರದೆ
ನರಸಿಂಹ ಪುರದ ಭೂಪಾಲ ।
ಕರೆದು ಕಪ್ಪವ ಕೊಟ್ಟು ಕಂಠೀರವೇಂದ್ರಗೆ
ಶರಣಾಗತನಾದನಾಗ ॥ ೧೬

ತಳುವದೆ ನರಸಿಂಹ ಪುರದ ಭೂಪನ ಕೈಯ
ಸೆಳದು ಸೀಮೆಗಳ ಕಪ್ಪವನು ।
ದಳಪತಿ ನರಸ ರಾಜೇಂದ್ರ ಚಂದ್ರನ ಪಾದ
ನಳಿನವ ಕಂಡನರ್ತಿಯಲಿ ॥ ೧೭

ಮೇರೆಯಿಲ್ಲದ ಸಂತೋಷಾಂಬುಧಿಯಲಿ
ಧಾರಿಣೀಶ್ವರನೋಲಾಡಿ ।
ಪಾರುಖಾಣೆಯವಿತ್ತು ದಳವಾಯಿ ಮೆನ್ನೆಯ
ವೀರರುಗಳ ಮನ್ನಿಸಿದ ॥ ೧೮

ಬಳಿಕವರನು ಬೀಳ್ಕೊಟ್ಟು ಸಂತೋಷವ
ತಳೆದು ಭೂವರ ನರಸೇಂದ್ರ ।
ಸುಲಲಿತ ಬಹು ಧರ್ಮ ಮಾರ್ಗದೊಳಂದಾಗ
ಇಳೆಯ ಪಾಲಿಸುತಿರ್ದನೊಲಿದು ॥ ೧೯

ಪಿರಿಯ ಪಟ್ಟಣದ ರಾಜ್ಯವನಾಳುವ ದುಷ್ಟ
ದುರುದುಂಬಿ ನಜುಂಡ ರಾಜ ।
ಹಿರಿದು ಗರ್ವಿಸಿ ಯಿಕ್ಕೇರಿಯವರ ನೇಹ
ದಿರವಲಿ ಮಲೆತಿರ್ದನಾಗ ॥ ೨೦

ಕಪ್ಪವ ಕೊಡದೆ ಕೂಟವ ಮಾಡದೆ ಮೇರೆ
ದಪ್ಪಿ ಚಂಡಿಸಿ ಚಲವಿಡಿದು ।
ಇಪ್ಪುದ ಕಂಡು ಕಂಠೀರವ ರಾಜ ಕಂ
ದಪ್ಪ ಸನ್ನಿಭ ಕೋಪಿಸಿದ ॥ ೨೧

ಒಡನೆ ತನ್ನಯ ದಳಪತಿ ನಂಜರಾಜನ
ಕಡು ಬೇಗ ಕರಿಸಿಕೊಂಡಾಗ ।
ನುಡಿದನಾತನ ಕೂಡೆ ಮೇಲೆಸಗುವ ಕಾರ್ಯ
ದಡವ ನಾನೇನ ಬಣ್ಣಿಸುವೆ ॥ ೨೨

ದೆಸೆ ದೆಸೆಗಳ ದೊರೆಗಳು ಮನ್ನೆಯರೆಮ್ಮ
ವಶ ವರ್ತಿಗಳಾಗಿ ಬಂದು ।
ಮುಸುಕಿಕೊಂಡೋಲೈಸುತಿಹರೀಗಳವನಾಟ
ಹಸನಲ್ಲವೆಂದು ಕೋಪಿಸಿದ ॥ ೨೩

ತುರುಕರು ತಿರುಕರಾದರು ಕೊಂಗರ ಬಲ
ಸುರ ಚಾಪದ ಸಿರಿ ಯಾಯ್ತು ।
ನೆರೆ ನಮ್ಮ ಪೌರುಷಕಾಂಧ್ರರು ಜಗುಳದ
ರಿರದಿವನುಗ್ರವಿನ್ನೆಂತೊ ॥ ೨೪

ಬೇಡರ ರೂಢಿ ತಗ್ಗಿತು ಮಳೆಯಾಳರು
ಪಾಡಳಿದಿರದೋಡಿದರು ।
ಆಡುವುದೇನಾ ಕೊಡಗರು ನಮೆಗಳ್ಕಿ
ಜೋಡಿಯು ತೆರುತಿಹರೀಗ ॥ ೨೫

ಮೂರು ಮನೆಯು ಮನ್ನೆಯರಳ್ಕಿ ಗಜ ಹಯ
ಚಾರುತರದ ವಸ್ತುಗಳ ।
ಮೋರೆಯಿಲ್ಲದೆ ಕಾಣಿಕೆಯ ತಂದೀವರು
ಧೀರತ್ವವೇನೀ ನೃಪನ ॥ ೨೬

ಮೇಲನರಿಯದ ಮನ್ನೆಯನ ಬಾಳಿಕೆ ಬೀದಿ
ಗಾಳಿಗೆತ್ತಿದ ಸೊಡರೆಂದು ।
ಹೇಳಲಿಲ್ಲವೆ ಭಾರತದಲ್ಲಿ ಯಿವಗಿಷ್ಟು
ಖೂಳತನವೆ ನಮ್ಮೊಡನೆ ॥ ೨೭

ಪಿರಿದು ಬಲವೆ ಮನ್ನೆಯರ ಮಂಡಲಿಕರ
ಕರಿಸಿಕೊಂಡೆಲೆ ನಂಜೇಂದ್ರ ।
ಪಿರಿಯಪಟ್ಟಣ ಪಾಲುಪರೆಯು ಕೊಂಡಾ ಕ್ಷಣ
ಹೊರಡಿಸು ಮಲೆಯಾಳಕವನ ॥ ೨೮

ಇಕ್ಕೇರಿಯ ತುರುಕರ ಸ್ನೇಹದೊಳಗತಿ
ಸೊಕ್ಕಿ ಗರ್ವದೊಳಿರುವವನ ।
ಉಕ್ಕಂದವ ನೆರೆ ಮುರಿದು ರಾಜ್ಯವ ಸೆಳೆ
ದಿಕ್ಕು ಠಾಣೆಯುವೆ ಹೋಗೆಂದ ॥ ೨೯

ಎನಲು ಹಸಾದವೆನ್ನುತ್ತಾಗ ದಳ ಪತಿ
ಜನ ನಾಥನಂಘ್ರಿಗೆ ನಮಿಸಿ ।
ಘನವಾದ ತಳತಂತ್ರ ಸಹ ಶುಭ ದಿನದೊಳು
ಮನ ಹರುಷದೆ ತೆರಳಿದನು ॥ ೩೦

ಹರಿ ಕೃಪೆವಡೆದ ಧರ್ಮಾತ್ಮ ನೆನೆದ ಕಾರ್ಯ
ಭರದೆ ಕೈಸಾರುವುದದಕೆ ।
ದೊರೆ ರಾಯ ನರಸ ರಾಜೇಂದ್ರನಲ್ಲದೆ ಪುಣ್ಯ
ಪುರುಷರುಂಟೇ ಲೋಕದೊಳಗೆ ॥ ೩೧

ಚಂಡಿಕಾ ದೇವಿಯಾ ಕಂಠೀರವೇಂದ್ರನ
ಖಂಡೆಯುದಲಗಿನೊಳಾಗ ।
ಮಂಡಿಸಿ ಮೆರೆವಳಾತನ ಪ್ರತಾಪಕೆ ಮಿಕ್ಕ
ಮಂಡಲೇಶ್ವರರೆಣೆ ಬಹರೆ ॥ ೩೨

ಬೆಟ್ಟದ ಚಾಮುಂಡಿ ಯಾ ನೃಪಾಲಕ ಬೇಡಿ
ದಿಷ್ಟಾರ್ಥವನಿತ್ತಾಗ ।
ಕಟ್ಟೆರಕದೆ ಕಾದಿಹಳಾ ಭೂಪನ
ದಿಟ್ಟತನಕೆ ಸರಿಯುಂಟೆ ॥ ೩೩

ಒಡನೆ ನಿಟ್ಟಿಸಿ ನೋಡುವರಿಗಗೋಚರ
ವಿಡಿದಾಗ ಬಲು ಮಲೆಯೊಳಗೆ ।
ಅಡಗಿಕೊಂಡಿಹ ಪಾಲುಪರೆಯ ಸಾಧಿಸುವೊಡೆ
ಮೃಡನಿಗಸಾಧ್ಯವೇ ವೇಳ್ವ ॥ ೩೪

ಕಾರೆ ಮಗ್ಗಾರೆ ಗೂಳವು ಮುಳ್ಳು ಬೊಬ್ಬುಲಿ
ಕೂರುಗೆಂಜಿಗ ಮಂಡೆಸೀಗೆ ।
ಹೇರಿಜೆ ಯೆಲಚಿ ತಂಡಸಿ ಮುಳ್ಳು ಬೇಲಿಗಳ್
ಸೇರಿ ಮುಟ್ಟಿಹುವಾಗಸವನು ॥ ೩೫

ಹಾಲೆ ಹೊಂಗೇತಕಿ ವನ ಸಂಪಿಗೆ ಹಿಂ
ತಾಲ ಹೆಮ್ಮರ ಕಮ್ಮರಗಳು ।
ಆಲ ಮುಳ್ಮುತ್ತುಗ ಕೊಡಸಿಗೆ ಬನ್ನಿಗ
ಳ್ಮೇಲಕಡರಿ ಮುಸುಕಿಹುವು ॥ ೩೬

ತಾರೆ ತೇಗರುಟಾಳ ಚಿಲ್ಲ ನೆಲ್ಲಿಯು ಹೊಂಗೆ
ನೇರಿಲು ಹೆಬ್ಬಿದಿರುಗಳು ।
ಕಾರಾಚ ಕಗ್ಗಲಿ ಕಂಚಿವಾಳದ ಮರ
ಸೂರ ಮಾರ್ಗವ ತಡೆದಿಹುವು ॥ ೩೭

ಆವ ದಿಕ್ಕಿನಲಿ ದಿಟ್ಟಿಸಿ ನೋಡಲು ಕ
ಗ್ಗಾವಳ ಮುಸುಕಿಕೊಂಡಾಗ ।
ಭಾವಿಸೆ ದೆಸೆಗಳರಿಯ ಬಾರದೆ ಭಯ
ತೀವಿಕೊಂಡಿಹುದು ಕಣ್ಗಳಗೆ ॥ ೩೮

ಬಳ್ಳಿ ದುರುಚಿ ನೆರೆ ಮುಳ್ಳು ನೆಗ್ಗಿಲು ಕಾಡ
ಕಳ್ಳಿ ಕಬ್ಬುಳಿ ನೊಸೆದಬ್ಬೆ ।
ಹುಲ್ಲುಗಳ್ ಬೆಳದಾಗ ದಾರಿ ಬಿಡದೆ ಜಾರು
ಗಲ್ಲ ಮರಿಸಿಕೊಂಡಿಹುವು ॥ ೩೯

ಜಿಗುಳ್ ಕೆಂಜಿಗ ಕಟ್ಟಿರುಹೆ ಯೋತಿಯು ಗೊದ್ದ
ನೆಗೆವ ಹಾವರಣೆ ಕೆಂಜೇಳು ।
ಮಿಗೆ ಭೋರ್ಗರೆದು ಬುಸ್ಸೆಂಬ ಪಾವುಗಳಾಗ
ವಿಗಡದೆ ಪರಿದಾಡುತಿಹುವು ॥ ೪೦

ಶರಭ ಶಾರ್ದೂಲ ಕಾಸರ ವೃಕ ಸಂಘವು
ಮರಿ ಸಾರಗ ಮೊಲ ಹುಲ್ಲೆ ।
ನರಿ ಕಾಡ ಬೆಕ್ಕು ಮುಂಗಿಲಿಗಳ ಮೊತ್ತವಾ
ವರಿಸಿಕೊಂಡಿಹುವು ಹೆಮ್ಮಲೆಯ ॥ ೪೧

ಕಾಡಾನೆಗಳ ಮಾರ್ಗದಿನೊಂದಿ ಕೊಂಬಿನಿಂ
ದೀಡಿರಿದೆಡೆಯಾಡುತಿರ್ಪ ।
ಕ್ರೋಡನಬ್ಬರ ಘೂಕಭೀಕೃತಿಯಿರಿಕಿಪ
ಯೋಡಿಗಳಸೆದುವೇವೇಳ್ವ ॥ ೪೨

ಎಲ್ಲಿ ನೋಡಲು ಸರಿ ಜರಿ ಹಳ್ಳ ಬರೆಗಳು
ಕಲ್ಲ ಪಡೆಗಳು ಗುಹೆಗಳು ।
ಮುಳ್ಳು ಮರದ ಬೇರೆಡಹುಗಲ್ಲುಗಳಿಂದ
ನಿಲ್ಲದೊಪ್ಪಿದುದು ಕಾನ್ತಾರ ॥ ೪೩

ಮೊನೆಗಲ್ಲು ಗುಂಡುಗಲ್ಲುಗಳರೆಗಲ್ಲುಗಳ್
ಘನವಾದ ಪರಳುಗಲ್ಲುಗಳು ।
ಇನ ಕಿರಣಕೆ ತಳತಳಿಪ ಭೃಂಗದ ಕಲ್ಲು
ವನ ಮಾರ್ಗವ ತುಂಬಿಹುವು ॥ ೪೪

ಕಿರು ಬಿದಿರುಗಳ ಕಂಟಕಿಗಳು ನೆಯ್ದುಕೊಂ
ಡಿರುಹೆಗೆ ದಾರಿಯು ಕೊಡದೆ ।
ಧರಣಿಯೊಳ್ಪಸರಿಸಿಕೊಂಡು ಪಚ್ಚೆಗಳಿಗೆ
ತೆರಹುಗೊಡದೆ ಮುಸುಕಿಹುವು ॥ ೪೫

ಕಾಡುಗಿಚ್ಚೆದ್ದು ಕಾದಿಹ ಬೂದಿ ತನಿಗೆಂಡ
ಜಾಡಿಪ ಕಿಡಿ ಹೊಗೆ ಮುಸುಗಿ ।
ನೀಡುವ ದಳ್ಳುರಿಗಳ ದಾವದಿಂ ವನ
ಕೂಡೆ * ಭೀ ಭರವ ಪುಟ್ಟಿಸಿತು ॥ ೪೬

---

* ಭೀಕರವ.

ತಲೆಯೆತ್ತಿ ಕೂದಲ ಸೆಳೆಕೊಳ್ವ ಮುಳ್ಳು ಮೈ
ಯಲುಗೆ ಸೀಳುವ ಬಲು ಮುಳ್ಳು ।
ಸಲೆ ಪಜ್ಜೆಯನಿಡೆ ನಾಂಟುವ ಮೊನೆಮುಳ್ಳನಿಂ
ದೊಳಗಾಡೆಸೆದುದೇನೆಂಬೆ ॥ ೪೭

ಇಂತಪ್ಪ ಕಾನನದುಡುವೆಯೊಳಡಗಿ ಯೋ
ರಂತಿಹ ಪಾಲುಪರೆಯನು ।
ಕಂತು ಸನ್ನಿಭ ನರಸೇಂದ್ರ ಸೆಳೆದ ಬಲು
ಪಂಥವನೇನ ಬಣ್ಣಿಪೆನು ॥ ೪೮

ಪಾತಾಳದ ಬರೆಗಳ ದಾಟಿ ಮಾರ್ಗದ
ರೀತಿಯನರಿದೊಳ ಹೊಕ್ಕು ।
ಚಾತುರ್ಬಲಗೂಡಿ ದಳಪತಿ ಯದ ಮುತ್ತಿ
ಭೀತಿಗೊಳಿಸಿದನೇ ವೇಳ್ವ ॥ ೪೯

ಬೊಬ್ಬೆಯಬ್ಬರದುಬ್ಬಿಗೆ ಭೀತಿಗೊಂಡಾಗ
ತಬ್ಬಿಬ್ಬಿಗೊಂಡುರೆ ಭಟರು ।
ಮಬ್ಬು ಕವಿದು ಕಂಗೆಟ್ಟೋಡೆ ದುರ್ಗವ
ನಬ್ಬರಿಸುತ ಕೊಂಡನಾಗ ॥ ೫೦

ಇದಿರಾದವರ ಕಡಿಖಂಡಗಳನು ಮಾಡು
ತದೆಗೆಟ್ಟು ಮರೆ ಹೊಕ್ಕರಿಗೆ ।
ಮುದದೊಳಭಯ ದಾನವನಿತ್ತು ನಂಜೇಂದ್ರ
ಪದುಳದೆ ಕೊಂಡನಾ ಪುರವ ॥ ೫೧

ಬಳಿಕಾಗ ಪಾಲುಪರೆಗೆ ಠಾಣೆಯವಿಕ್ಕಿ
ತಳತಂತ್ರವ ಕೂಡಿಕೊಂಡು ।
ಗಳಿಲನೆ ಪಿರಿಯಪಟ್ಟಣಕೆ ಮುತ್ತಿಗೆಯಿಡು
ಒಲವಿಂದ ದಳಪತಿ ನಡೆದ ॥ ೫೨

ಊರೊಳು ಚಲವಿಡಿದೊಪ್ಪುವ ದೊರೆಯು ಕು
ಮಾರರ ಸುಭಟಮನ್ನೆಯರ ।
ಧೀರತ್ವವ ನೆರೆ ತೃಣಕೆ ಲೆಕ್ಕಿಸದಾಗ
ಸೇರಿ ಮುತ್ತಿಗೆಯನಿಕ್ಕಿದನು ॥ ೫೩

ಗಗನಮಾರ್ಗವ ತುಡುಕುವ ಮುಗಿಲಟ್ಟಣೆ
ಖಗಮಂಡಲವ ಸೋಕಿ ಮೆರೆವ ।
ಜಗಜಗಿಸುವ ಕೋಟೆ ನೋಡುವರಕ್ಷಿಗೆ
ಮಿಗೆ ಭಯಾಂಕುರವ ಪುಟ್ಟಿಸಿತು ॥ ೫೪

ಪಾತಾಳ ಗಡಿಯಾದಗಳು ದಿಟ್ಟಗೆ ನೆರೆ
ಭೀತಿಗೊಳಿಸುವ ಕೊತ್ತಳವು ।
ನೂತನದಾಳ್ವೇರಿಯಿಂದಲಾ ಪಟ್ಟಣ
ಖ್ಯಾತಿವಡೆದುದಿಳೆಯೊಳಗೆ ॥ ೫೫

ಬಿರುದಿನ ಸುಭಟಸಂದೋಹದೆ ಜೋಡಿಸಿ
ದುರುದುರ್ಗಸಂವರಣೆಯಲಿ ।
ಅರಸುಮಕ್ಕಳ ಕಾಹಿನ ಕಟ್ಟಳೆಯಿಂದ
ಪಿರಿಯಪಟ್ಟಣವೆನಿಸಿದುದು ॥ ೫೬

ದ್ವಾರಾವತಿ ನೀರೊಳದ್ದುದು ಸುರಪುರ
ಸೇರಿತು ಖಳರುಪಟಳಕೆ ।
ಧಾರಿಣಿಯೊಳು ದುರ್ಗ ತನಗೆಣೆಯಿಲ್ಲೆಂದು
ಚಾರುತರದೆ ಮೆರೆದಿಹುದು ॥ ೫೭

ಹಿಂದಣ ರಾಯರೊಳಾವನಾಗಲಿಯದ
ಬಂಧಿಸಿ ಮುತ್ತಿಗೆಯಿಕ್ಕಿ ।
ಮುಂದುವರಿದು ಕೊಂಡರ ಕಾಣೆಯಾದುರ್ಗ
ದಂದವನೇನ ಬಣ್ಣಿಸುವೆ ॥ ೫೮

ದೇವತ್ವವುಂಟಾದ ಪುರುಷಗಲ್ಲದೆ ಮತ್ತೆ
ಭೂವಳಯದಲಿ ರಾಜಿಸುವ ।
ದೈವ ವಿಹೀನರಿಗಳವಡದಾ ದುರ್ಗ
ದಾವಿವರವನೇನನೆಂಬೆ ॥ ೫೯

ಕದನದೆ ಕಾಲಾಳ ಮೇಲೆ ಕೈಯಿಕ್ಕದೆ
ಮದ ಕರಿಗಳನೊಡೆ ತಿವಿದು ।
ಹೆದರಿಪ ಕಡುಗಲಿ ನೇಜೆಯದಧಟರು
ಮುದದೊಳು ಪುರವ ಕಾದಿಹರು ॥ ೬೦

ಗಿರಿಗಳು ಮೇಲೆ ಕವಿಯೆ ಲೆಕ್ಕಿಸದಿಹ
ನೆರೆದೆಂಟು ದೆಸೆಗೆಬ್ಬಿಸುವ ।
ಹರಿಗೆಯ ಸುಭಟಸಮೂಹ ಸಂತಸದೊಳು
ಮೆರೆವುದೇನೆಂಬೆನದ್ಭುತವ ॥ ೬೧

ಕೋವಿಯನೆದೆಗೆತ್ತಿದ ಮೇಲೆ ರಿಪುಗಳ
ಜೀವಕೆ ಸಂಚಕಾರವನು ।
ಭಾವಿಸಿ ಕೊಡುತಿಹ ದುರಗಲಿ ಪಟಲ ಭ
ಟಾವಳಿ ಯೆಸೆವುದಾ ಪುರದೆ ॥ ೬೨

ಕಾಲ ಪೆಂಡೆಯ ತೋಳ ಭಾಪುರಿ ಕಟಿಯೊಳು
ಜೋಲುವ ಪೀತಾಂಬರದ ।
ಮೇಲು ದಟ್ಟಿಯೊಳೊಪ್ಪುವ ಸುರಗಿಯ ಬಿಲ್ಲ
ಕಾಲ ಪಾಯಕರೊಪ್ಪುತಿಹರು ॥ ೬೩

ಮಿಕ್ಕ ನಾನಾ ಬಗೆಯಾಯುಧಗಳ ಪಿಡಿ
ದುಕ್ಕಂದದ ಕಲಿತನದೆ ।
ಸೊಕ್ಕಿ ರಾಜಿಸುತಿಹ ಸುಭಟ ಸಮೂಹದ
ಲೆಕ್ಕವನಾರು ಬಣ್ಣಿಪರು ॥ ೬೪

ವೃಷ ಸೇನನ ಪೌರುಷವಭಿಮನ್ಯುವಿ
ನೆಸಕದ ಬಹುಳ ಧೀರತ್ವ ।
ಅಸಮ ಬಲಾನ್ವಿತ ಶಕ್ರಾರಿಯಧಟಾ
ವಸುಮತೀಶ್ವರನೊಳಗಿಹುದು ॥ ೬೫

ಇಂತಪ್ಪ ಸಕಲ ಸಾಮಗ್ರಿ ಸಂವರಣೆಯು
ನಾಂತಿಹ ಪಿರಿಯ ಪಟ್ಟಣವ ।
ಕಂತು ಸನ್ನಿಭ ಕಂಠೀರವ ನರಸ ಭೂ
ಕಾಂತ ಹೊಕ್ಕುದನೇ ವೇಳ್ವ ॥ ೬೬

ಅರಿ ನೃಪ ವಿಪಿನ ಕುಠಾರ ಸಂಗರ ಧೀರ
ಬಿರುದೆಂತೆಂಬರ ಗಂಡ ।
ದೊರೆ ರಾಯ ಮೈಸೂರ ನರಸ ರಾಜೇಂದ್ರನಾ
ಪಿರಿಯ ಪಟ್ಟಣವ ಮುತ್ತಿದನು ॥ ೬೭

ಇರುಹೆ ನುಸುಳಲಳವಲ್ಲದ ಮುಳು ವೇಲಿ
* ಗರುಡನಮಾರ್ಗವನಡರ್ವ ।
ಪಿರಿದಪ್ಪ ಮೇರುವೆಗಳು ಲೆಕ್ಕವಿಲ್ಲದೆ
ಪುರವ ಬಂಧಿಸಿದುವೇ ವೇಳ್ವ ॥ ೬೮

† ಬಡನೀಶಾನ್ಯಭಾಗದೊಳಂಬರವನು
ತುಡುಕುತ ಸರ್ಪ ಸನ್ನಹದೆ ।
ಕಡುಗಲಿ ದಳವಾಯ ಮೇರುವೆಯೊಪ್ಪಿತು
ಪಡಿಯಾಗಿ ಕೈಲಾಸಗಿರಿಗೆ ॥ ೬೯

ಬಳಿಕದುತ್ತರ ದೆಸೆಯಲಿ ಲಿಂಗ ರಾಜೇಂದ್ರ
ತಳುವದಂದೊಲಿದೆತ್ತಿಸಿದ ।
ಬಲವಾಂತ ಮೇರುವೆ ಗೋವರ್ಧನಾದ್ರಿಯೊಲ್
ಸಲೆ ರಂಜಿಸಿತುನ್ನತದೆ ॥ ೭೦

* ಕುರುಡನ. † ವದಗೀಶಾನ್ಯ.

ವರ ಚನ್ನರಾಯ ಪಟ್ಟಣದ ದೊಡ್ಡೇಂದ್ರನು
ತುರುಗೆರೆಯಾಳ್ವ ಹಂಪೇಂದ್ರ ।
ಪಿರಿದೆತ್ತಿಸಿದ ಬಲು ಮೇರುವೆ ಮೆರೆದುದು
ಸುರುಚಿರ ನೀಲಾದ್ರಿಯಂತೆ ॥ ೩೧

ಕೆರೆ ಮೂಡಲು ವಿಡಿವಾಗ್ನೆಯ ಪರಿಯಂತ
ಹರದ ಪುರದ ದೊಡ್ಡೇಂದ್ರ ।
ಗರುವ ಲಿಂಗೇಗೌಡ ತಿಮ್ಮ ರಾಜೇಂದ್ರರ
ಪಿರಿದು ಮೇರುವೆಗಳೊಪ್ಪಿಹುವು ॥ ೩೨

ಈ ಪರಿಯೊಳಗಾ ಪುರದ ಚೌ ದೆಸೆಯೊಳು
ಗೋಪ ಮಂಡಲವನಣೆಯುತ ।
ತಾ ಪಿರಿದಾಗಿ ಮೇರುವೆಗಳು ಗಗನವ
ವ್ಯಾಪಿಸಿ ಮೆರೆದುವದ್ಭುತದೆ ॥ ೩೩

ಬಿಡದೆ ಬಳಸಿದ ಕಾವಲ ಹೊಡೆಯ ಮೇ
ಲಿಡುವ ಪಿರಂಗಿಯ ತವಗ ।
ಒಡನೆ ಚೌ ದೆಸೆಯೊಳೊಪ್ಪುವ ಸುರಂಗ ದ್ವಾರ
ಕಡು ಭಯಾಂಕುರವ ಬೀರಿದುವು ॥ ೩೪

ಮೇರುವೆಗಳ ಮೇಲೊಡನೆ ತುಪಾಕಿಯ
ಸೇರಿಸುತೆದೆಯೊಳಗಾಗ ।
ಊರೊಳು ಸಂಚರಿಪರನಿಟ್ಟು ಕೆಡಹಲು
ಬೀರದಿಂ ಕಾಪಿನ ಭಟರು ॥ ೩೫

ಕೋಟೆಯ * ತೆನೆಯೆಡೆಗಂಡಿಯೊಳ್ ತಲೆಯಿಟ್ಟು
ನೀಟಲಿ ನೋಡುವರುಗಳ ।
ಸೂಟಿಯ ಬಾಣಗಳಿಂದಿಟ್ಟು ಜೀವವ
ದಾಟಿಸಿದರು ಯಮ ಪುರಿಗೆ ॥ ೩೬

* ತೆನೆಯೆಡೆಯೊಳಗಿರ್ಪ ಕಂಡಿಯೊಳ್ ತಲೆಯಿಟ್ಟು.

ತಳಿಯ ಮರೆಯೊಳಿರ್ದು ನುಸುಳುಗಂಡಿಯೊಳಾಗ
ಮುಳಿದು ಕಗ್ಗೊಲೆಗೈದುವರ ।
ತಲೆಯನರಿದುಪ್ಪರಕಿಟ್ಟು ಬಲ್ಕೀರ್ತಿಯ
ಬಲಿವರೇ ವೇಳ್ವನದ್ಭುತವ ॥ ೭೭

ಹೊರ ಪಾಳಯದವರುಪಟಳಕಂಜದೆ
ಬಿರುದಿನ ಹೊಂತಕಾರಿಗಳು ।
ಸರಿ ಮಿಗಿಲಾಗಿ ಸಂಗರವನೆಸಗಿ ತಮ್ಮ
ದೊರೆಯು ಮೆಚ್ಚಿಸಿದರಾ ಕ್ಷಣದೆ ॥ ೭೮

ಉಕ್ಕಂದದ ಮುತ್ತಿಗೆದೆಗಿಸುವೆವೆಂ
ದಿಕ್ಕೇರಿಯ ಬಲಗೂಡಿ ।
ಗಕ್ಕನೆ ತುರುಕರ ಧೀರರಾ ಸ್ಥಳಕಾಗ
ಸೊಕ್ಕುತ್ತೈತಂದರುಬ್ಬಿನಲಿ ॥ ೭೯

ಭೂ ದಿವಗಳ ಕೆಚ್ಚಿ ಪಂದದ ಕೆಂದೂಳ
ಹಾದಿಯ ತೆರಪುಗಾಣಿಸದೆ ।
ವೇದೋಜಿಯು ಬಲುಗುದುರೆ ಸಹಿತ ನೆರೆ
ಕಾದುವೊಡೈತಂದನಾಗ ॥ ೮೦

ಕುಂಬಿನಿಯನು ಖುರ ಪುಟದೆ ಹೊಯ್ದಡಗಿಸಿ
ಮುಂಬರಿದಭ್ರಕಡರುವ ।
ಅಂಬರಖಾನನ ಕುದುರೆ ಸಾವಿರ ಬೇಗ
ಬೆಂಬಿಡದಿರದೈದಿದುವು ॥ ೮೧

* ಕಾಳೆ ಡಮೂಮಿ ಟೆಕ್ಕೆಯ ಸಾಲು ಸತ್ತಿಗೆ
ಚೂಳಿ ಸೂರೇಪಾನ್ಗಳಿಂದ ।
ಮೇಲಾದ ಸಾವಿರ ಕುದುರೆಯು ಸಹ ಬಂದ
ಗಾಲಿಯನೇನ ಬಣ್ಣಿಪೆನು ॥ ೮೨

---

* ಕಹಳೆ ಡಮಾಮಿತಕ್ಕೆಯು ಸಾಲಸತ್ತಿಗೆ । ಚೌರಿ ಸೂರಿಪಾನ್ಗಳಿಂದ ॥
ಮೇಲಾದಸಾವಿರಕುದುರೆಯುಬಲಸಹ । ಬಂದಾಹಾಜಿಯನೇನಬಣ್ಣಿಪೆನು ॥

ತಲೆ ಠವುಳಿ ಜೋಡು ದಗಲೆ ಬೆನ್ನೊಳಳವಟ್ಟ
ಬಿಲು ಬಾಣಗಳ ಬತ್ತಳಿಕೆಯು ।
ಸಿಲೆಯು ಸಂಜೋಗದ ಕುದುರೆಯ್ಯೆತಂದುವು
ಮುಲುಕರಹಿಮನೆಂಬವನ ॥ ೮೩

ಅಂಕೆಯಿಲ್ಲದ ನಾನಾ ಬಗೆ ಚಿತ್ರಗ
ಳಂಕಿತವಹ ಡಾಳಂಗಳ ।
ಅಂಕುಶ ಖಾನನ ತೇಜಿ ಸಾವಿರವಾಗ
ಮುಂಕೊಂಡು ಬಂದುವೇ ವೇಳ್ವ ॥ ೮೪

ಪಿಡಿದ ಗುರಾಣಿ ಚಿಮ್ಮುವ ಖಂಡೆಯ ಮೇಲ
ಕೊಡನಿಟ್ಟೊಂಪ ನೇಜೆಯುದ ।
ಬಿಡದಾ ಕರ್ಣವಾಂತೆಸೆವ ಸಿಂಗಾಡಿಯ
ದಡಿಗ ರಾವುತರ್ಯೆದಿದರು ॥ ೮೫

ಆಗಸ ಬಿತ್ತಿಯು ಖುಂದೆ ಚಿತ್ರಿಸವೋಲು
ಬೇಗ ಮಾರ್ತಂಡ ಮಂಡಲವ ।
ರಾಗದೆ ನುಂಗುವೊಲ್ಮೊಗವೆತ್ತಿ ಕುದುರೆಯು
ಸಾಗರ ಮೊರೆಯುತ್ತೈದಿದುದು ॥ ೮೬

ಕರಿಗಳೂ ಕಲ್ಪಾಂತ ಮೇಘದೊಬ್ಬುಳಿಗಳ
ಸರಿಗಳೂ ಕಾಲಾಳ ಪವುಜೊ ।
ಪಿರಿದು ದಾವಾಗ್ನಿಯುಬ್ಬರದ ಕೆಂಗಿಡಿಯೆನೆ
ತುರುಕರ ಬಲವೈದಿದುದು ॥ ೮೭

ಗಜಗಳ ಘಂಟಾ ರವ ಬಲ ವಾಜಿ
ವ್ರಜಗಳ ಹೇಷಿತ ರವವು ।
ನಿಜವಾದ ಕಾಲಾಳ ಬೊಬ್ಬೆ ತ್ರಿಜಗಕಾಗ
ಸೃಜಿಸಿತಂಜಿಕೆಯನೇ ವೇಳ್ವ ॥ ೮೮

ಕೊಂಬಿನ ಕಹಳೆ ಡಮಾಮಿ ಮೊರೆವ ಮವುರಿ
ಚಂಬಕ ಹರೆ ಬುರುಸುಗಳ ।
ಮುಂಬರಿದೆಸೆವಬ್ಬರ ಚೌದೆಸೆಯೊಳು
ತುಂಬಿತೇನೆಂಬೆನದ್ಭುತವ ॥ ೮೯

ಒಡನೆಂಟು ಸಾವಿರ ಸಿಲೆಯ ಸಂಜೋಗದ
ಕಡು ಮನಸಿನ ತೇಜಿಗಳ ।
ಗಡಣದೆ ಹದಿನೈದು ಸಾವಿರ ಕಾಲಾಳ
ಪಡೆ ಸಹ ತುರುಕರೈದಿದರು ॥ ೯೦

ಬಂದು ಬೆಟ್ಟದ ಪುರದೆಲಿ ಬೀಡ ಬಿಟ್ಟಾಗ
ಳೊಂದು ದಿವಸ ಪಾಳಯಕೆ ।
ಮುಂದನರಿಯದೈತಂದು ಕಾಳಗಗೊಟ್ಟು
ನೊಂದುದನೇನ ಬಣ್ಣಿಸುವೆ ॥ ೯೧

ಬಳಿಕ ಚೌದೆಸೆಯೊಳಗೈದಾರು ಮೋಹರ
ದಳದುಗ್ರ ಕೋಪವ ತಳದು ।
ಖಳ ಸೈನ್ಯ ಪುರವ ಮುತ್ತಿದ ಸೇನೆಯೊಳಗಾಗ
ಬಲಿದರು ಬಹುಳ ಸಂಗರವ ॥ ೯೨

ಖುರದೊಳಗರೆಯುತ ಧರಣಿಯ ಹರಿ ಬಲ
ಶರಧಿಯ ತೆರೆ ಮಾಲೆಯಂತೆ ।
ಮುರಿಯುತ ಹರಿಯುತ ಬೆರೆಯುತ ಮುಂಗಡೆ
ಗುರುವೆಣಿಸಿದರೇ ವೇಳ್ವ ॥ ೯೩

ಅರೆ ಭಾಂಚೋದು ಗಂಡಿಯಕು ಕುಚ್ ನಹಿ ದೇವು
ಸಿರ ಮಾರು ಮಾರು ಮಾರೆನುತ ।
ತುರುಕ ಮಾತಿನಲಬ್ಬರಿಸಿ ಬೊಬ್ಬಿಡುತಾಗ
ಸರಿಗ ರಾವುತರೇರಿದರು ॥ ೯೪

ದಿಲ್ಕರನ ಸಾಹೇಬು ಅಬ್ ತುಮೆ ಜಾನಪರ್
[ಖಿಲ್ಕೀ]ಆಸಬಿ ಚೋಡ್ಕೆ ।
ಡಲ್ಕ ತಲವಾರಿಮೇ ಮರಗಯೇತೋ ಹಮೇ
ಹಲ್ಕ ಹೋಯೇಂಗೆ ರಾಜಾಕು ॥ ೯೫

ಕರಿಗಳ ಕುಂಭ ಸ್ಥಳ ಮಧ್ಯದಂಕುಶ
ವಿರದೊತ್ತಿ ಬಿರಿ ಬಿರಿ ಯೆನುತ ।
ದುರಗಲಿ ಜೋದರು ಬೀದಿ ವರಿಸುತಾಗ
ಳುರವಣಿಸಿದರಾ ಕ್ಷಣದೆ ॥ ೯೬

ಪಿಡಿದ ಬತ್ತೀಸಾಯುಧಗಳ ಸು ಭಟರು
ವೆಡ ಬಲದೊಳು ಮುಂದು ವರಿದು ।
ಬಿಡದೆ ಪುರವ ಮುತ್ತಿದರಿ ವಾಹಿನಿಯೊಳು
ತೊಡಗಿದರತುಳ ವಿಗ್ರಹವ ॥ ೯೭

ಕಂಡನು ರಿಪು ರಾಯ ನಿಕರ ಶರಭ ಭೇ
ರುಂಡ ಕಂಠೀರವೇಶ್ವರನ ।
ಚಂಡ ವಿಕ್ರಮ ದಳ ಪತಿ ಖಳ ಬಲವ ಮುಂ
ಕೊಂಡು ಮುತ್ತಿದನು ಮೋಹರಿಸಿ ॥ ೯೮

ದೊರೆ ರಾಯ ನರಸ ರಾಜೇಂದ್ರ ಸಾಕಿದ ಬಲು
ಗುರಿಕಾರ ಮನ್ನೆಯರುಗಳ ।
ಪಿರಿದು ವಿಂಗಡಿಸುತಾರೇಳು ಪೌಜುಗಳಂ
ದರಿ ಬಲಾಂಬುಧಿಯನು ಮೊಗೆದ ॥ ೯೯

ಕುದುರೆಗೆ ಕುದುರೆ ಕಾಲಾಳಿಗೆ ಕಾಲಾಳು
ಮದ ಗಜಗಳಿಗೆ ಗಜಗಳು ।
ಕದುಬಿನ ಮನ್ನೆಯರಿಗೆ ಮನ್ನೆಯರುಗಳು
ಕದನದೊಳರಿದಾಡಿದರು ॥ ೧೦೦

ಬಲು ಬೊಬ್ಬೆ ಸಿಡಿಲು ಖಡ್ಗಗಳ ತೊಳಪು ಮಿಂಚು
ಸಲೆ ತುರಗದ ದನಿ ಗುಡುಗು |
ಖಳರವೆಯುವ ಕಾಲ ಮೇಘವೆಂಬಿನ ಬಲು
ಮಳೆಗಳ ಕರೆದುವೇ ವೇಳ್ವ || ೧೦೧

ಘನ ಶೌರ್ಯದಲಿ ಮುಂದ.ವರಿವ ವೈರಿಗಳವಾ
ಹಿನಿಯ ಕಂಡರೆ ಕೋಪದಲಿ |
ಜನ ನಾಥ ಕಂಠೀರವೇಂದ್ರನ ದಳ ಪತಿ
ವೊನೆಯಾಳು ಸಹಿತುರುಬಿದನು || ೧೦೨

ತುರಗಗಳನು ಬೀಳಲಿರಿದು ರಾವುತರ ಬ
ಲ್ಸಿರಗಳ ಮೆಟ್ಟಿ ಮೂಗರಿದ |
ದುರ ಗಲಿಗಳ ಕಂಡು ಭಾಪು ಶಾಬಾಸೆಂದು
ತುರುಕರು ಕೊಂಡಾಡಿದರು || ೧೦೩

ಕಂಠೀರವೇಂದ್ರನ ಹಳೆಯ ಪೈಕದ ಬಲು
ವೊಂಟರಿಗಾರ ನಾಯಕರು |
ಪಂಠಿಸಿ ರಿಪುಗಳ ಮುರಿಯಲಿರಿದು ಮನ
ಕಂಟಿಸಿದರು ಭೀತಿಯನು || ೧೦೪

ಕುದುರೆಯ ರಾಯ ರಾವುತರುಬ್ಬಿ ಭೋಯೆಂದು
ಮದವೇರಿ ಬೊಬ್ಬಿರಿದಾಗ |
ಕದುಬಿ ಕಾದುವ ರಿಪುಗಳ ನೆರೆ ಮುರಿಯಿರಿ
ದೆಡೆಗೆಡಿಸುತ್ತೋಡಿಸಿದರು || ೧೦೫

ಆನೆಯ ಮೇಲಣ ಜೋದರು ಮುಂದೆ ಬಂ
ದಾನ.ವ ತುರುಕರ ಕರಿಯ |
ಏನೆಂಬೆ ಮುರಿದೆಚ್ಚು ಮುರಿದೋಡಿಸಿ ದು
ಮ್ಮಾನವಿತ್ತರು ರಿಪುಗಳಿಗೆ || ೧೦೬

ಸಂದಿಸಿ ಕಾಲಾಳ ಬೀಳಲಿರಿದು ಬಲು
ಮುಂದಲೆಗಳ ಮೆಟ್ಟಿಕೊಂಡು ।
ಕುಂವದೆ ಭಟರು ಮೂಗರಿದು ಮೊಲೆಯ ಕಟ್ಟಿ
ತಂದೊಪ್ಪಿಸಿದರೊಡೆಯನಿಗೆ ॥ ೧೦೭

ತೂಳುವ ಪಟಲ ಗುಂಡುಗಳ ಬಾಣದ ಹೊಯ್ಲ
ದಾಳಿಗೆ ಬಲು ಗಾಯವಡೆದು ।
ಕಾಲಾಳು ತುರಗವನೊಪ್ಪಿಸಿ ತುರುಕರ
ಜಾಲವೈದಿತು ದೆಸೆ ದೆಸೆಗೆ ॥ ೧೦೮

ಮುಸುಕಿದ್ದೈದಾರು ಮೋಹರವನೇಕವ ಮಾಡಿ
ಕುಸುರಿದರಿದು ಕಾಲುಗೆಡಿಸಿ ।
ವಸುಧೇಶನ ಮನ್ನೆಯರು ತುರುಕರನು
ದೆಸೆ ಬಲಿಗೊಟ್ಟರೇನೆಂಬೆ ॥ ೧೦೯

ಕಾಲಾಳು ಮುರಿದೋಡಿ ಕುದುರೆಯ ಪವುಜಿನ
ಮೇಲೆ ಬೀಳಲು ರಾವುತರು ।
* ಸೋಲ ಹಿಡಿದು ಗಜಗಳ ಮರೆ ಹೊಗೆ ಶುಂ
ಡಾಲವೈದಿತು ಕಂಡ ಕಡೆಗೆ ॥ ೧೧೦

ಅರೆ ಗಾವುದ ಪರಿಯಂತರ ತುರುಕರ
ಮುರಿಯಲಿರಿದು ಬೆನ್ನಟ್ಟಿ ।
ಎರಡು ಸಾವಿರ ಕೋಳ ಹಿಡಿದಾಗ ದಳ ಪತಿ
ತಿರುಗಿದ ತನ್ನ ಪಾಳಯಕೆ ॥ ೧೧೧

ಇಕ್ಕೇರಿಯ ಬಲ ಹರಿ ಹಂಚಾಗಿ ಯಿಾ
ದಿಕ್ಕಿಗೆ ಬರಲವ್ಕೆವೆನುತ ।
ಲೆಕ್ಕವಿಲ್ಲದ ಸಿರಗಳ ಕೊಟ್ಟೋಡಿತು
ಸೊಕ್ಕು ಮುರಿದು ತಸ್ಮ ಸ್ಥಳಕೆ ॥ ೧೧೨

* ತೇರಹಿಡಿದು.

ನರ ರೂಪ ನರಸಿಂಹನ ಶೌರ್ಯವರಿಯದೆ
ದುರವನೆಸಗಿ ಯಪಕೀರ್ತಿ ।
ತರುಣಿಗೊಡೆಯರಾದೆವೆಂದಾಗ ಸಹಜೆಯು
ಪರಿವಾರ ಪುರಿದೋಡಿದುದು ॥ ೧೧೩

ಮುಂದಿನ್ನೀ ಕಡೆಯಲಿ ಸುಳಿದೊಡೆ ಬಹು
ಕುಂದು ಬಹುದು ತಮಗೆನುತ ।
ಅಂದಂಕುಶಖಾನನ ಮೂರ್ಬಲವಾಗ
ನಿಂದಲ್ಲಿ ನಿಲ್ಲದೋಡಿದುದು ॥ ೧೧೪

ದೊರೆ ರಾಯ ಮೈಸೂರ ನರಸೇಂದ್ರನೊಡನೆ ಸಂ
ಗರವನೆಸಗಿ ತುರಗಗಳ ।
ದುರ ಬಲಿ ಯಿತ್ತೆವೆಂದಂಬರ ಖಾನನ
ಪರಿವಾರ ತೆಗೆದೋಡಿದುದು ॥ ೧೧೫

ಚಲದಂಕ ಕಂಠೀರವೇಂದ್ರನ ವೈರದೆ
ಬಲು ಭಂಗ ವಡದೆವೆಂದಾಗ ।
ಮುಲುಕ ರಹಿಮನಾ ತಳತಂತ್ರ ಭಯದಿಂದ
ತಳುವದೋಡಿತು ತಮ್ಮ ಸ್ಥಳಕೆ ॥ ೧೧೬

ಭೂ ಧವ ಕಂಠೀರವ ನರಸೇಂದ್ರನೊಳ್
ಕಾದಿ ಬಲವ ನೀಗಾಡಿ ।
ಆಧಾರಗೆಟ್ಟೆನೆನುತ ಚಿಂತಿಸುತಾಗ
ವೇದೋಜಿ ಸುತನೈದಿದನು ॥ ೧೧೭

ರಣವ ಸಾರಿಸಿ ಹೆಣಗಳನೆತ್ತುವೊಡೊಂದು
ಕ್ಷಣ ನಿಲಲಂಜಿ ಚೌ ದೆಸೆಗೆ ।
ಕುಣಪಗಳೀಡಾಡಿ ಬಿರುದ ಬಿಸುಟು ಹಿಂದ
ಕಣಿಗೆಟ್ಟು ಸರಿಗರೇನೆಂಬೆ ॥ ೧೧೮

ಮುತ್ತಿಗೆದೆಗಿಸುವುದ್ಯೊತಂದು ಖಳ ಕುಲ
ವೊತ್ತಲಾರದೆ ಮುರಿದೋಡೆ ।
ಮತ್ತಾಗ ದುರ್ಗದ ಭಟರು ಶೌರ್ಯಕೆ ಮನ
ವಿತ್ತರೇ ವೇಳ್ವನಚ್ಚರಿಯು ॥ ೧೧೯

ಕಳದ ಹಗಲ ತಾವರೆಯಂತೆ ಜೌವನ
ಗಳದ ಹೆಣ್ಣಿನ ನೇಹದಂತೆ ।
ಸುಳವಿಂದ್ರ ಚಾಪದ ಸಿರಿಯಂತೆ ಕಲಿತನ
ವೆಳಸಿತೂರೊಳಗಣ ಬಲಕೆ ॥ ೧೨೦

ಸಿತ ಪಕ್ಷದ ಚಂದ್ರಮನ ಕೌಮುದಿಯಂತೆ
ಘೃತದಾಹುತಿಗಿರದೇಳ್ವ ।
ಹುತವಹನೊಲು ಹೊರ ಪಾಳಯುದವರಿಗಂ
ದತಿಶಯುವಾಯ್ತು ಪ್ರತಾಪ ॥ ೧೨೧

ನೆರೆ ತನ್ನ ದುರ್ಗ ಮುತ್ತಿಗೆಗೊಳಗಾಗಿ ಯಾ
ನರಸ ಭೂಪನಿಗೆ ಸೇರುವುದ ।
ಅರಿತಾಗ ನಂಜುಂಡ ರಾಜ ಚಿಂತಿಸಿ ಬಲು
ವೆರಗು ವಟ್ಟಿರ್ದನೇ ವೇಳ್ವ ॥ ೧೨೨

ಸುತರು ಬಂಧುಗಳು ಮುತ್ತಿಗೆಯೊಳು ಸಿಕ್ಕಿ ಬ
ಲ್ಪಿತಿಲರಾದರು ತನಗಿನ್ನು ।
ಗತಿ ಯಾವುದೆಂದು ಚಿಂತಿಸುತ ಶಿರವ ತೂಗಿ
ಮತಿಗೆಟ್ಟಿರ್ದನಾ ಭೂಪ ॥ ೧೨೩

ಬಳಕಾತನ ಪಟ್ಟದಂಗನೆ ತನ್ನಯ
ಕೆಳದಿಯುರುಗಳೊಂದುಗೂಡಿ ।
ಸಲೆ ತನ್ನ ಪತಿಯೆಡೆಗೈತಂದು ನೀತಿಯ
ತಳುವದೆ ಬಿನ್ನೈಸಿದಳು ॥ ೧೨೪

ಎಲೆ ಪ್ರಿಯ ಪೂರ್ವ ಮೊದಲು ನಿಮ್ಮ ವಂಶದ
ನೆಲದಾಣ್ಮರು ಮೈಸೂರ ।
ಸಲೆ ದೊರೆಗಳು ಸಂತತ ಸ್ನೇಹವೆರಸಿ ಬ
ಲ್ಬಲಯುತರಾಗಿ ರಂಜಿಪರು ॥ ೧೬೫

ಅಂದಿಂದ ಬಳೆದ ಸ್ನೇಹವ ನಿಮ್ಮ ದೊರೆತನ
ದಿಂದ ಪರಿದು ವೈರ ವೆರಸಿ ।
ಮುಂದು ಗಾಣದೆ ವಂಶಕೆ ಹಾನಿಯ ತಹು
ದಂದವೆ ಹೇಳೆಂದಳವಳು ॥ ೧೬೬

ದೀಪದ ಕಿಡಿಯೊಳುನ್ನತವಾದ ಪಂಜಿನಂ
ತಾ ಪುರುಷರ ಪುಣ್ಯದೇಳ್ಗೆ ।
ಭೂಪ ಕೇಳ್ದಿನ ದಿನಕಭಿವರ್ಧಿಸುತಿದೆ
ಶ್ರೀ ಪತಿಯೊಲುಮೆಯಿಂದವಗೆ ॥ ೧೬೭

ನೆರೆ ಮೈಸೂರವರೊಳು ವೈರ ವೆರಸಿದ
ತಿರುಮಲ ರಾಜನೇನಾದ ।
ದುರಗಲಿ ಕಾರಗ ಹಳ್ಳಿಯ ಭೂಪರ
ಪಿರಿದು ಸೌಭಾಗ್ಯವೇನಾಯ್ತು ॥ ೧೬೮

ಅಂದಿನ ಪ್ರಭುಗಳಾ ಭೂಪರೊಡನೆ ವೈರ
ಬಂಧದೆ ವಂಶಗಳಳಿದು ।
ಕುಂದ ಹೊತ್ತಾಗ ರಾಜ್ಯ ಭ್ರಷ್ಟರಾಗಿರು
ವಂದವ ನೀ ಕೇಳ್ದರಿಯ ॥ ೧೬೯

ತಳಕಾಡ ಮನ್ನೆಯನವರೊಳು ಗರ್ವಿಸಿ
ಸ್ಥಳ ಕುಳವೆಲ್ಲವ ನೀಗಿ ।
ತೆಲುಗರನೋಲೈಸಿ ಪಡಿ ದಂಡಿ ತನದಲಿ
ನೆಲಸಿರುವುದ ನೀನರಿಯ ॥ ೧೭೦

ಸಲೆ ಹದಿನಾಡವೆ ಮೈಸೂರ ಭೂಪರೊಳ್
ಕಲಹವನಿತ್ತು ಗಂಟಿಕ್ಕಿ ।
ತಲೆಯ ನೀಗಾಡಿ ದೇಶವನೊಪ್ಪಿಸಿ ಕೊಟ್ಟು
ಚಲಗೆಟ್ಟುದ ಕೇಳ್ದರಿಯ ॥ ೧೩೧

ದುರ ಗಲಿ ಪರಮ ರಾವುತನಿವರೊಳು ವೈರ
ವೆರಸಿ ಪ್ರಾಣವ ನೀಗಿಕೊಂಡು ।
ಪಿರಿದಪಕೀರ್ತಿಯ ತನ್ನೊಡಯಗೆ ತಂದ
ಪರಿಯರಿಯದೆ ಯೀ ಲೋಕ ॥ ೧೩೨

ಸಾಕದಂದಿನ ಮಾತು ನರಸ ರಾಜೇಂದ್ರನೀ
ಲೋಕದ ಬಡ ಭೂಮಿಪನೆ ।
ಶ್ರೀ ಕಾಂತ ನರಸಿಂಹ ನರ ರೂಪ ತಾಳಿ ಬಂ
ದೀ ಕರ್ಣಾಟವ ಹೊರೆವ ॥ ೧೩೩

ಕರ್ಣಾಟವ ಕೆಡಿಸಲು ಬಂದ ತುರುಕರ
ನಿರ್ಣಾಮವ ಮಾಡಿ ಜಗವ ।
ಪೂರ್ಣದೆ ಸಲಹಿದ ಕಂಠೀರವೇಂದ್ರ ಸು
ಪರ್ಣವಾಹನ ಮೂರ್ತಿಯೈಸೆ ॥ ೧೩೪

ಸುತ್ತಣ ದೊರೆಗಳು ತುರುಕಗೆ ಕಂಗೆಟ್ಟು
ಮತ್ತಾಗ ರಾಜ್ಯವ ಕೊಟ್ಟು ।
ಹತ್ತಿದಗಿರಿ ಗಹ್ವರವನೀ ಭೂಪನ
ಬಿತ್ತರದ ಶೌರ್ಯವ ನೋಡು ॥ ೧೩೫

ಆ ತುರುಕರ ರಾಮ ಗಿರಿ ದುರ್ಗ ಬಾಗೂರ
ನೂತನವಹ ತುರುಗೆರೆಯ ।
ಖ್ಯಾತಿವಡೆದು ರಣದಲಿ ಸೆಳೆದವರಿಗೆ
ಭೀತಿಯ ಭಿತ್ತಿದ ಭೂಪ ॥ ೧೩೬

ಸಲೆ ಮೊದಲಾರಿಯ ಸುತ ಮಧುರೆಯ ನೃಪ
ನೊಲವಿಂದ ಚಲದೆ ಗರ್ವಿಸಲು ।
ಸೆಳದು ಸಾಂಬಳ್ಳಿ ಸಹಿತ ರಾಜ್ಯವನಾಗ
ಬಲುಹ ಮುರಿದನಾ ನೃಪನ ॥ ೧೩೭

ಬಳಿಕಾಗ ಮಧುರೆಯ ತಿರುಮಲ ನಾಯಕ
ಮುಳಿದುರೆ ಕದನವನೆಸಗೆ ।
ಬಲವ ಮುರಿದು * ಕಲು ಗೋಟೆಯ ನೃಪನ ಬಾ
ಳ್ದಲೆಯ ಖಂಡಿಸಿದುದನರಿಯ ॥ ೧೩೮

ಚೆಂಜಿ ತಂಜಾವೂರ ನೃಪರೀ ಭೂಪಗೆ
ಅಂಜಿಪ ಶೌರ್ಯವ ಕೇಳಿ ।
ಸಂಜನಿಸುವ ಹರುಷದೆ ಕಪ್ಪವ ಕೊಟ್ಟು
ಮಂಜುಳೋತ್ಸವದೊಳೊಪ್ಪಿಹರು ॥ ೧೩೯

ದೊರೆ ರಾಯ ಕಂಠೀರವೇಂದ್ರನ ಮರೆ ಹೊಕ್ಕು
ನರಸಿಂಹ ಪುರದ ಭೂಪಾಲ ।
ಪಿರಿದು ಮನ್ನಣೆ ವಡೆದಿರುತಿಹನವನಂತೆ
ಸ್ಥಿರ ಬುದ್ಧಿ ಬೇಡವೆ ನಿನಗೆ ॥ ೧೪೦

ನೆರೆ ಸತ್ಯಮಂಗಲ ವಾಲಂಬಾಡಿಯ
ದುರಗಲಿ ನಾಯಕರುಗಳು ।
ನರಸ ರಾಜೇಂದ್ರಗೆ ಶರಣಾಗತರಾಗಿ
ಪರಮ ಸಂತೋಷದೊಳಿಹರು ॥ ೧೪೧

ಹಿಂದಣ ಯುಗದಲಿ ದಶಮುಖ ಮೂರ್ಖತೆ
ಯಿಂದ ಭಾಗ್ಯವ ಬರಿಕೈದು ।
ಅಂದವಳಿದ ಕಥೆಯನು ಕೇಳ್ದರಿದು ನೀ
ಮಂದತ್ವವೆತಳದಿಹುದೆ ॥ ೧೪೨

* ವೇಲುಗೋಟೆಯ.

ದಾರಿಣಿಯೊಳ್ವ ಲೋಲುಪ್ತಿಯಿಂ ಲುಬ್ಧತ್ವ
ದಾರ್ರೈಕೆಗೆ ಮನ ಸರಿದು ।
ಕೌರವೇಶ್ವರನೇನಾದನೆಂದದರ ವಿ
ಸ್ತಾರವು ನೀನರಿಯದುದೆ ॥ ೧೪೩

ಹಿತವ ನುಡಿವರು ನಿನ್ನಯ ಮುಂದೆ ಹಿಂದಪ
ಕೃತಿಗಳನೆನಿಸುತಲಿಹರು ।
ಕೃತಕವಲ್ಲರಸ ಚಿತ್ತೈಸಿದು ಕುಜನರ
ಮತ ನೀನವರ ನಂಬ ಬೇಡ ॥ ೧೪೪

ಸಾರಿ ಹೇಳದೆ ನಾ ನಿನಗೆ ಕಂಠೀರವ
ಧಾರಿಣೀಶನ ಮರೆ ಹೊಕ್ಕು ।
ವೈರ ಬುದ್ಧಿಯ ನೀನುಳದೊಡೆ ನಿನ್ನನು
ಮೀರೆಯರಿದು ರಕ್ಷಿಪನು ॥ ೧೪೫

ಎಂದಾಗ ತನ್ನ ಪಟ್ಟದ ರಾಣಿಯಾಡಿದ
ಬಂಧುರ ನೀತಿ ವಾಕ್ಯಗಳ ।
ಹಿಂದುಗಳೆದು ತನ್ನ ಕ್ರೂರದಾಳಾಪವ
ನಂದೊರೆದನು ಮಾನಿನಿಗೆ ॥ ೧೪೬

ಬಿಡೆನು ಚಲವ ನಾನು ಕಂಠೀರವೇಂದ್ರಗೆ
ಕೊಡೆನು ಗೋಷ್ಪದದ ಭೂಮಿಯನು ।
ಮಡದಿ ನನ್ನಯ ಶೌರ್ಯವರಿಯೆಯ ಮರಳಿ ನೀ
ನುಡಿಯ ಬೇಡಿರದೆ ಹೋಗೆಂದ ॥ ೧೪೭

ಎಂದವಳನು ಬೀಳ್ಕೊಟ್ಟು ಚಿಂತಾ ಭಾರ
ದಿಂದಲಾ ನಂಜುಂಡ ರಾಜ ।
ಮುಂದರಿಯದೆ ಚಿಂತಿಸುತಿರಲಿತ್ತಲಾ
ದಂದವನೇನ ಬಣ್ಣಿಸುವೆ ॥ ೧೪೮

ಬಳಿಕಾಗ ದುರ್ಗವ ಕೊಡದೆ ಕಾದುತಲಿಹ
* ತುಳಿಯಾಳು ದೊರೆ ಕುಮಾರಕರ ।
ಚಲವನರಿತು ದಳ ಪತಿ ನಂಜ ರಾಜೇಂದ್ರ
ಸಲೆ ಮನ್ನೆಯರೊಳಿಂತೆಂದ ॥ ೧೪೯

ಇವರಿಗೇಕಿನಿತು ದುಡುಕು ಲಗ್ಗೆಗೆ ಬಿಟ್ಟು
ತವಕದೆ ಸೆರೆಯ ಕೊಂಡೀಗ ।
ಭುವನಕಚ್ಚರಿಯನು ಬೀರಿ ತನ್ನೊಡೆಯಗೆ
ಸುವಿಲಾಸವ ತೋರ್ಪೆನೆಂದ ॥ ೧೫೦

ಎಂದಾಗ ಸಕಲ ಮನ್ನೆಯ ಬಲು ನಾಯಕ
ವೃಂದವ ಕರಸಿಕೊಂಡಾಗ ।
ಚಂದದೆ ಮನ್ನಿಸಿ ಹಗಲು ಲಗ್ಗೆಯ ಬಿಡ
ಲೆಂದು ಪೇಳೈಸಿದ ಬಲವ ॥ ೧೫೧

ಬರ ಸಿಡಿಲುಗಳ ಮೊತ್ತಗಳೈದಿ ಗಿರಿಗಳ
ಸಿರವನಪ್ಪಳಿಸುವಂದದಲಿ ।
ಉರವಣಿಸಿತು ದಳ ಪತಿಯ ನೇಮದೆ ಬಲ
ಪುರದ ನಾಲ್ಕ್ರೊಗದೊಳುಬ್ಬರಿದು ॥ ೧೫೨

ಅಗಳ ಘಾತವ ಸೊಪ್ಪಿನ ಹೊರೆಯಲಿ ಹೂಳಿ
ಮಿಗೆ ನೆಲ ಸರಿ ಸಮ ಮಾಡಿ ।
ಮುಗಿಲ ಮುಟ್ಟುವ ನಿಚ್ಚಣಿಗೆಗಳನು ತಂದು
ನಿಗುರಿಸಿದರು ಕೋಟೆ ತೆನೆಗೆ ॥ ೧೫೩

ಪೆಟಲಿನಂಬರ ಬಾಣದಾರ್ಭಟ ಮುಸುಕಿದ
ಪಟು ಭಟರುಗಳ ಬೊಬ್ಬಾಟ ।
ಪುಟವೇರಿ ದುರ್ಗದವರಿಗೆ ಭೀತಿಯು ನೆರೆ
† ಘಟಿಸಿದುದೇನ ಬಣ್ಣಿಸುವೆ ॥ ೧೫೪

---

* ಕಳಿಯಾಳು. † ಪುಟ್ಟಿಸಿದುದೇನ

ಪುರದ ಹತ್ತಿರ ಚೌದೆಸೆಯೊಳು ಬಲು ಘಾತ
ಮೆರೆವ ಸುರಂಗಗಳೊಳಗೆ ।
ಕರಿಯ ಮದ್ದನು ತುಂಬಿ ಹತ್ತಿಸೆ ಬಲು ಗಿಚ್ಚು
ತರಣಿ ಮಂಡಲವ ಮುಟ್ಟಿದುದು ॥ ೧೫೫

ಲಂಕೆಯ ಸುಡುವಾಗ ಹನುಮನ ಬಾಲದೊ
ಳಂಕುರಿಸಿದ ಕಿಚ್ಚಿನಂತೆ ।
ಬೋಂಕನೆ ಕೊತ್ತಳಗಳ ಹಾರಿಸಿ ಶಿಖಿ
ಸೋಂಕಿತು ಗಗನ ಮಂಡಲವ ॥ ೧೫೬

ಧಗಧಗಿಸುವ ಕಿಚ್ಚಿನೇಳಿಗೆ ನೆಗೆಯಲು
ನಗರದೊಳಿಹ ಪಟು ಭಟರು ।
ಜಗಳವ ಮಾಡುತ ಕೈಗೆಡದಂದಾಗ
ಮಿಗೆ ಕಲಿತನವ ಮೆರೆದರು ॥ ೧೫೭

ಉರವಣಿಸುತ್ತೊಳ ಹೊಕ್ಕರಾ ಸಮಯದೆ
ಜರಿದ ಕೊತ್ತಳದ ಮಾರ್ಗದಲಿ ।
ನರಸ ರಾಜೇಂದ್ರ ಸಾಕಿದ ಬಲ ಮನ್ನೆಯ
ಪರಿವಾರ ಸಹಸವೇ ವೇಳ್ವ ॥ ೧೫೮

ದುರವನೆಸಗುತ್ತೈತಹ ರಿಪು ಭಟರನು
ತರಿದರಿದೌಕುತಲಾಗ ।
ಮುರಿಯುಲಿರಿದು ಹೊರ ಕೋಟೆಯ ಕೊಂಡು ಮ
ತ್ತುರುಬಿದರೊಳಗೋಟೆಗಂದು ॥ ೧೫೯

ಆನೆಗಳನು ಕೊಂಬುಗತ್ತಿ ಸಹಿತ ತಂ
ದಾನಿಸಿ ಕೆಡಹಿ ಬಾಗಿಲನು ।
ಭೂನಾಥನ ದಳ ಪತಿ ನಂಜರಾಜೇಂದ್ರ
ತಾನೊಳ ಹೊಕ್ಕನುಬ್ಬಿನಲಿ ॥ ೧೬೦

ಅನಿತರೊಳಗೆ ಸಂಜುಂಡ ರಾಜನ ಸುತ
ಕನಲಿ ಖಡ್ಗವನುಗಿದಾಗ ।
ಘನವಾದ ಹೆಬ್ಬಲಕಿದಿರಾಗಿ ಪೌರುಷ
ದನುವ ಮೆರೆದನೇನೇಳ್ವೆ ॥ ೧೬೧

ಪುಟ ಚೆಂಡಿನಂತೆ ಲಂಘಿಸುತಾಗೊಳ್ ಹೊಕ್ಕು
ಪಟುವಾದ ಶೌರ್ಯದೇಳ್ಗೆಯಲಿ ।
ಲಟ ಲಟಿಸುತ ಕಾಲಾಳ ಖಂಡಿಸುತು
ತ್ಕಟದಲಿ ಕಲಿಯೇರಿ ಮೆರೆದ ॥ ೧೬೨

ಉರುಪಣಿಸುತ ಹಿಂದಕ್ಕೆ ಹಜ್ಜೆಯನಿಡ
ದುರುಬಿ ಮುಮ್ಮೊನೆಯ ನಾಯಕರ ।
ತರಿದಿರಿಯುತ ವೃಷಸೇನನ ಪೌರುಷ
ದಿರವ ಮೆರೆದ ರಣದೊಳಗೆ ॥ ೧೬೩

ಎಡ ಬಲದೊಳು ಚಾರಿವರಿದರೆಯಟ್ಟುತ
ತುಡುಕಿ ಹಿಂಗಡೆ ಮನ್ನೆಯರ ।
ಕೆಡಹುತಲಿಂದ್ರಾರಿಯ ಸಾಹಸವನು
ಬಿಡದೆ ಮೆರೆದ ಸುಕುಮಾರ ॥ ೧೬೪

ಅಬ್ಬರಿಸುತ ಬೊಬ್ಬಿಡುತ ಕಾಲಾಳಂಗ
ಳೊಬ್ಬುಳಿಯೊಳು ಬೀದಿವರಿದು ।
ಹೆಬ್ಬಲವಿದು ತಾನೊಬ್ಬನೆಂದೆಣಿಸದೆ
ಯುಬ್ಬಿದನತುಳ ಶೌರ್ಯದಲಿ ॥ ೧೬೫

ಹಿಂದೆ ಮುಂದೈತಂದು ತಿವಿವ ಸುಭಟರನೇ
ನೆಂದು ಲೆಕ್ಕಿಸದೆ ಮೇಲ್ವಾಯ್ದು ।
ಮೆಂದಿಯ ಗಾಯಗೊಳಿಸಿ ತಾನೊರಗಿದ
ನೊಂದಾಗ ರಣಮಂಡಲದೆ ॥ ೧೬೬

ಛಲರೆ ಭಾಪುರೆ ಜಗ ಜಟ್ಟಿ ನಿನ್ನಂದದ
ಕಲಿಗಳುಂಟೇ ಲೋಕದೊಳಗೆ ।
ಚಲದಂಕನಹುದೆಂದು ಸಕಲ ಮೂರ್ಬಲವಾಗ
ನಲಿದು ಕೊಂಡಾಡಿದುದವನ ॥ ೧೬೭

ಅರೆ ಮುಚ್ಚಿ ಮರಳುವ ಕಂಗಳ ಮೆಯ್ಯೊಳು
ತುರುಗಿದ ಬಲು ಗಾಯಗಳಲಿ ।
ಸುರಿವ ರಕ್ತಾಂಬುಧಾರೆಗಳಿಂದ ಸುಕುಮಾರ
ನೊರಗಿದ ರಣ ಭೂಮಿಯೊಳಗೆ ॥ ೧೬೮

ಧೀರತ್ವಕೆ ಮೆಚ್ಚಿ ದೇವಾಂಗನೆಯರು
ಸೇರಿಸಿ ಪುಷ್ಪಕದೊಳಗೆ ।
ಶೂರನ ಕೊಂಡೊಯ್ದು ಲಾಲಿಸಿದರು ತಮ್ಮ
ಚಾರು ಮಂದಿರದೊಳರ್ತಿಯಲಿ ॥ ೧೬೯

ಯುಗ ಯುಗದೊಳಗಾವ ರಾಯನಾಗಲಿ ಮತ್ತೆ
ಹಗಲು ಲಗ್ಗೆಯಲಿ ಕೋಟೆಗಳ ।
ತೆಗೆದು ಕೊಂಡವರುಂಟೆ ಯೆನುತಾಗ [ದಳವಾಯ]
ಜಗದ ಜನರು ಪೊಗಳಿದರು ॥ ೧೭೦

ಹಿಡಿದು ಕೈ ಸೆರೆಯನಾ ನಂಜುಂಡ ರಾಜನ
ನೊಡ ಹುಟ್ಟಿದರ ನಂದನರ ।
ಕಡುಗಲಿ ದಳವಾಯಿ ನಂಜ ರಾಜೇಂದ್ರ ಮ
ತ್ತೊಡನೆ ಸಾಹಸವನು ಮೆರೆದ ॥ ೧೭೧

ದೊರೆ ರಾಯ ಕಂಠೀರವೇಂದ್ರನ-ಸಾಹಸ
ದಿರವಿಗೆ ಮನ ಸೋತು ನಗುತ ।
ಪುರ ಲಕ್ಷ್ಮಿ ಕೈ ವಶವಾಗಿ ಸಂತೋಷವ
ನಿರದಿತ್ತಳೀನ ಬಣ್ಣಿಸುವೆ ॥ ೧೭೨

ಪುರ ಜನರುಗಳಿಗಭಯವಿತ್ತು ಹರುಷದಿ
ನರಮನೆಗಿಕ್ಕಿ ಕಾವಲನು ।
ದುರಗಲಿ ದಳವಾಯಿ ಯೊಡೆಯನ ಬಳಿಗಾಗ
ಬರಿಸಿದ ಬಿನ್ನಪತ್ತಳೆಯ ॥ ೧೨೩

ಸ್ವಸ್ತಿ ಶ್ರೀ ವಿಜಯಾಂಗನೆಯ ವೀರ ರಿಪು ಗಜ
ಮಸ್ತಕಾಂಕುಶ ಸೋಮ ವಂಶ ।
ಪ್ರಸ್ತುತ ಕ್ಷೀರಾಬ್ಧಿ ಚಂದ್ರ ಲಾಲಿಪುದು ಸು
ವಿಸ್ತಾರ ಶುಭ ವಾರ್ತೆಗಳ ॥ ೧೨೪

ಭೂ ವಳಯದೊಳಸಾಧ್ಯದೊಳಾರಾರಿಗು
ಕೈ ವಶವಾಗದೊಪ್ಪಿರುವ ।
ಭಾವದ ಪಿರಿಯ ಪಟ್ಟಣವನು ಸೆಳೆದೆವು
ದೇವರ ಶೌರ್ಯದೇಳ್ಗೆಯಲಿ ॥ ೧೨೫

ಕೊಡಗು ಕೊಂಕಣ ಮಲೆಯಾಳದ ಸುತ್ತಣ
ಗಡಿಯ ಮನ್ನೆಯರು ನಾಯಕರು ।
ಬಿಡದೆ ನಿಮ್ಮಯ ಪಾದ ಪುಂಡರೀಕವ ಕಾಂಬ
ಕಡು ತವಕದೊಳೊಪ್ಪುತಿಹರೈ ॥ ೧೨೬

ತಾವರೆಗಳು ಸೂರ್ಯ ಕಿರಣವ ಜೊನ್ನವ
ಭಾವದೆ ವರ ಚಕೋರಿಗಳು ।
ಭೂ ವಳಯದೆ ಬಯಸುವೊಲು ನಿಮ್ಮಡಿಯ ಭ
ಟಾವಳಿ ಹಾರೈಸುತಿಹುದು ॥ ೧೨೭

ಎಂದೆಂಬ ಬಿನ್ನವತ್ತಳೆಯ ವಾಕ್ಯವ ಕೇಳು
ತೊಂದಾರು ಭುಜವಾಗೆ ಹಿಗ್ಗಿ ।
ಮಂದಿ ಕುದುರೆ ಸಹ ಕಂಠೀರವೇಂದ್ರನೈ
ತಂದನು ಸರ್ವ ಸಂಭ್ರಮದೆ ॥ ೧೨೮

ಒಡೆಯನಿಗಿದಿರಾಗಿ ತಳತಂತ್ರ ಸಹಿತಾಗ
ಪೊಡವಿಪ ನಂಜರಾಜೇಂದ್ರ ।
ಕಡು ಹರುಷದೊಳೈತಂದು ಕಾಣಿಕೆ ಗೈದು
ಪೊಡೆಮಟ್ಟನಡಿದಾವರೆಗೆ ॥ ೧೭೯

ಕಾಣಿಸಿಕೊಂಡು ಕೈ ಮುಗಿದ ಮನ್ನೆಯರನು
ಕ್ಷೋಣೀಪನೊಲಿದು ಮನ್ನಿಸುತ ।
ಏಣಾಂಕ ವಂಶ ಜನೈತಂದು ಹೊಕ್ಕನು
ಮಾಣದೆ ಪಿರಿಯ ಪಟ್ಟಣವ ॥ ೧೮೦

ಪುರವನೀಕ್ಷಿಸಿ ಪ್ರಜಾಪಾಲಕನೊಬ್ಬನ
ನಿರದಿಟ್ಟು ಠಾಣೆಯಕಾಗ ।
ಗಿರಿಯ ಮಲ್ಲೇಶನ ದರುಶನವನು ಮಾಡಿ
ಹರುಷದೆ ಭೂಪನೈತಂದ ॥ ೧೮೧

ಬೆಟ್ಟದ ಪುರ ಮೊದಲಾದ ಕೋಟೆಗಳನು
ನೆಟ್ಟನೀಕ್ಷಿಸಿ ನಸು ನಗುತ ।
ಸೃಷ್ಟೀಶ ಕಂಠೀರವ ರಾಜ ಶ್ರೀರಂಗ
ಪಟ್ಟಣವನು ಹೊಕ್ಕನಂದು ॥ ೧೮೨

ಗುರಿಕಾರ ನಾಯಕ ಮನ್ನೆಯ ಭಟರಿಗೆ
ಕರೆ ಕರೆದುಡುಗೊರೆಯಿತ್ತು ।
ಹರುಷದೆ ಮನ್ನಿಸಿ ರಾಜೇಂದ್ರ ಕಂಠಾ
ಭರಣವೈದಿದನರ ಮನೆಗೆ ॥ ೧೮೩

ತರುಣಿಯರುಗಳ ಪೊಂದಟ್ಟೆಯಾರತಿಗಳ
ಹರುಷದೆ ಕೈಗೊಳುತಾಗ ।
ಧರಣೀಶ್ವರ ಕಂಠೀರವ ನರಸೇಂದ್ರ
ಹರುಷದೊಳಗೆ ರಂಜಿಸಿದ ॥ ೧೮೪

ಜಿತ ಶತ್ರು ಸಮುದಯನಾಗಿ ಭೂತಳವನಂ
ದತಿಶಯದೊಳಗೆ ಪಾಲಿಸುತ ।
ಕ್ಷಿತಿ ಪತಿ ವೈಸೂರ ನರಸ ರಾಜೇಂದ್ರನು
ನ್ನತಕೀರ್ತಿಯೊಳಗೆ ರಾಜಿಸಿದ ॥ ೧೮೫

ಚಾಮುಂಡಿ ದೇವಿಯು ಕೃಪೆ ಪಶ್ಚಿಮ ರಂಗ
ಧಾಮನ ದಯೆ ಪೂರ್ಣವಾಗೆ ।
ಭೂಮಿಪ ಕಂಠೀರವ ನರಸೇಂದ್ರನಿ
ಸ್ಸೀಮ ರಾಜ್ಯವ ಪಾಲಿಸಿದನು ॥ ೧೮೬

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೊಳಗೆಯು ಸಂಧಿ
ಮುದದ ಸುಧವರ್ಣಾನುಬಂಧಿ ॥ ೧೮೭

೧೮ನೆಯ ಸಂಧಿ ಸಮಾಪ್ತಂ.



# ಹತ್ತೊಂಬತ್ತನೆಯ ಸಂಧಿ

## ನಂಜರಾಜಯ್ಯನ ಜಗಳ

ಸೂಚನೆ॥ ಕಡುಗಲಿ ನಂಜೇಂದ್ರ ಖಾನ ಖಾನರ ಹೊಯ್ದು
ನೃಪನ ಸಾಯುಜ್ಯವಡೆದನು ॥

ಗೋಪತಿ ಸುತನ ತಮ್ಮನ ತಂದೆಯುಣುಗನ
ಕೋಪದೊಳಗೆ ಮಡುಹಿದನ ।
ಚಾಪವ ಜರೆದನ ರಾಣಿಯು ಸಲಹಿದ
ಶ್ರೀಪತಿ ಸಲಹು ಸಜ್ಜನರ ॥

ಪಿರಿಯ ಪಟ್ಟಣವನು ಹಗಲು ಲಗ್ಗೆಗೆ ಬಿಟ್ಟು
ದುರಗಲಿ ನರಸ ರಾಜೇಂದ್ರ ।
ಭರದಲಿ ಸೆಳೆದ ವಾರ್ತೆಯ ವಿಜಯಾಪುರ
ದರಸ ಕೇಳಿದನೇ ವೇಳ್ಯ ॥ ೧

ಒಡನೆ ವಿಸ್ಮಿತನಾಗಿ ಪಾತ್ಸಾಹ್ಯವು ಮೈಸೂರ
ಪೊಡವಿಪ ಕಂಠೀರವನ ।
ಕಡುಗಲಿ ತನವ ವಜೀರ ಖಾನರ ಕೂಡೆ
ನುಡಿದನೇನೆಂಬೆನಚ್ಚರಿಯ ॥ ೨

ತುರುಕರ ಕುದುರೆಯ ಖುರ ಪುಟದಬ್ಬರ
ಕಿರದೆ ಚೌದೆಸೆಯ ಮನ್ನೆಯರು ।
ವರ ಮೃಗೇಂದ್ರನ ಗರ್ಜನೆಗಳ್ಕಿ ಜಾರುವ
ಕರಿ ವಿಂಡಿನಂತೋಡುತಿಹರು ॥ ೩

ಧರೆಯೊಳು ಕಂಠೀರವ ನರಸೇಂದ್ರನ
ಬಿರುದಿನ ಮನ್ನೆಯ ಭಟರು ।
ತುರುಕರ ಕದನವೆಂದೊಡೆ ಕೈಗುದಿರ್ಯೆ
ಳರೆಯಟ್ಟಿ ಕೊಲುತಿಹರೆಮ್ಮ ॥ ೪

ಕ್ಷಣದೆ ಪಟ್ಟಣವ ಮುತ್ತಿದ ನಮ್ಮ ದಳ ಪತಿ
ರಣ ಧೂಳಿ ಖಾನನ ಬಲವ ।
ಹಣಿದವಾಡಿಯೆ ದೆಸೆಗಟ್ಟಿದ ನರಸೇಂದ್ರ
ಗೆಣೆಯುಂಟೆ ತ್ರೈಜಗದೊಳಗೆ ॥ ೫

ಪ್ರೇಮದೆ ನಾವಾಳುವ ರಾಮ ಗಿರಿ ದುರ್ಗ
ಭೂಮಿಗಧಿಕ ತುರುಗೆರೆಯ ।
ಗ್ರಾಮ ಬಾಗೂರನು ಸೆಳೆದ ಕಂಠೀರವ
ಭೂಮಿಪ ನರಸಿಂಹನಲ್ತೆ ॥ ೬

ಹಗಲು ಲಗ್ಗೆಯಲಿ ದುರ್ಗವ ಕೊಂಡವರು ಪೂರ್ವ
ಯುಗದೊಳಗಾರಾದರುಂಟೆ ।
ಜಗ ಮೆಚ್ಚಲು ತುಂಗ ಚಂಗಲ್ವ ರಾಯನ
ನಗರವ ಕೊಂಡನೀ ಭೂಪ ॥ ೭

ಮಧುರೆಯನಾಳುವ ತಿರುಮಲ ನಾಯಕ
ಕದನಕೆಳಸಲಂದವನ ।
ಪದಪಿನ ಬಲವನು ಮುರಿದರೆಯಟ್ಟಿಯೆ
ಸದೆದನು ನರಸ ರಾಜೇಂದ್ರ ॥ ೮

ಒಡನೆ ನಮ್ಮವರೊಳಗಾರಾದೊಡಾಗಲಾ
ಪೊಡವಿಪ ಕಂಠೀರವನ ।
ಗಡಿಯ ಭೂಮಿಯ ಮೆಟ್ಟಿ ಜಯವ ಪಡೆದು ಬರೆ
ಕೊಡುವೆ ಸಪ್ತಾಂಗವನೆಂದ ॥ ೯

ಎಂದೆಂಬ ಪಾತ್ಸ್ಯಾವಿನುತ್ತರವನು ಕೇಳು
ತಂದಾಗ ಮುಸ್ತಪ ಖಾನ ।
ನಿಂದು ಸಲಾಮನು ಮಾಡಿ ತನ್ನಯ ಶೌರ್ಯ
ದಂದವ ಬಿನ್ನೈಸಿದನು ॥ ೧೦

ದೇವರವರ ಮನಸಿನ ಚಿಂತೆಯು ಬಲು
ಗಾವಳಿಯನು ಮಿಗೆ ಪರಿದು ।
ತೀವಿದ ಮುದವ ನಿಮಗೆ ಬೀರದಿದ್ದೊಡೆ
ನಾವಿದ್ದು ಫಲವೇನೆಂದ ॥ ೧೧

ತಳ ತಂತ್ರವಿದೆ ಲೆಕ್ಕವಿಲ್ಲದ ದ್ರವ್ಯದ
ಬಲುಹಿದೆ ಖಾನ ಮಲ್ಲುಕರ ।
ಚಲದೇಳಗೆ ಯಿದೆ ನಮಗಿದಿರಹ ರಿಪು
ಗಳು ಧರೆಯೊಳಗಿಲ್ಲೆಂದ ॥ ೧೨

ಹಲವು ಮಾತೇಕೆಲೆ ಜೀಯ ವೀಳ್ಯವ ಕೊಟ್ಟು
ಕಳುಹೆನ್ನ ಕರ್ಣಾಟಕವ ।
ಸೆಳದು ನಿಮ್ಮಯ ವಶ ಮಾಡದೊಡಾಸ್ಥಾನ
ದೊಳಗೆನ್ನ ನಿರಿಸ ಬೇಡೆಂದ ॥ ೧೩

ಇಂತೆಂಬ ಮುಸ್ತಪ ಖಾನನ ವಾಕ್ಯಕೆ
ಸಂತಸದಳದು ಪಾತ್ಸ್ಯಾವು ।
ಮುಂತುಡುಗೊರೆ ವೀಳ್ಯವಿತ್ತು ಕರ್ಣಾಟವ
ಪಂತದಿಂದಲಿ ಸೆಳ ಯೆಂದ ॥ ೧೪

ಎನಲು ಹಸಾದವೆನುತ ತನ್ನೊಡೆಯನ
ಘನ ಹರುಷದೆ ಬೀಳ್ಕೊಂಡು ।
ವಿನುತ ಪ್ರಸ್ಥಾನ ಭೇರಿಯ ವೊಳಗಿಸುತವೆ
ನನುವಾದನತುಳ ಸಂಗರಕೆ ॥ ೧೫

ಬಳಿಕ ತನ್ನಾಣತಿಗೊಳಗಾದ ಖಾನರ
ತಳತಂತ್ರವ ಕೂಡಿ ಕೊಂಡು ।
ಚಲದಿಂದ ಮುಸ್ತಫ ಖಾನ ಕರ್ಣಾಟದ
ನೆಲನ ಹೊಕ್ಕನು ತೀವ್ರದಿಂದ ॥ ೧೬

ಅಲ್ಲಲ್ಲಿ ಬೀಡ ಬಿಡುತ ಕಂಡ ಧರಣೀ
ವಲ್ಲಭರನು ಮನ್ನಿಸುತ ।
ನಿಲ್ಲದೆ ಸೆಣಸಿದವರ ಸದೆಯುತ ಸಮ
ರೋಲ್ಲಾಸದೊಳಗೈತಂದ ॥ ೧೭

ಸಲೆ ತಮ್ಮ ಗಡಿಯ ಠಾಣೆಯುಗಳ ಖಾನರ
ಬಲ ಸಹ ಕರಿಸಿಕೊಂಡಾಗ ।
ತಳುವದೆ ತುರುಗೆರೆಗರೆಗಾವುದದೆ ಕೆರೆ
ಯೊಳ ಗೆರೆಯಲಿ ಬೀಡ ಬಿಟ್ಟ ॥ ೧೮

ಆನೆ ಕುದುರೆ ಖಾನ ಮುಲುಕ ವಜೀರರ
ಸೇನೆಯ ಸಂಜೋಗಗಳ ।
ನ್ಯೂನವಿಲ್ಲದೆ ಬಣ್ಣಿಪರಾರಾಬಲ
ದಾನಂದವನೇ ವೇಳ್ವೆ ॥ ೧೯

ಗುಡಿ ಗೂಡಾರ ನೀಟಿನ ಸರವತಿಗೆಗ
ಳಡೆ ವಿಡದಾ ದಂಡಿನೊಳಗೆ ।
ಕಡುಗಲಿ ಖಾನ ಖಾನರಿಗೆ ರಾಜಿಸಿದುವಾ
ಪಡೆಯ ಸನ್ನಹವನೇ ವೇಳ್ವೆ ॥ ೨೦

ಕರಿಗಳ ಶಾಲೆ ತುರಗ ಲಾಯ ಬಹು ವಸ್ತು
ಪರಿ ಶೋಭಿಸಂಗಡಿ ಗೇರಿ ।
ಮೊರೆದುವು ಮುಸ್ತಫ ಖಾನನ ದಂಡಿನ
ಬ್ಬರವನದೇನ ಬಣ್ಣಿಸುವೆ ॥ ೨೧

ಭಂಗಿಯು ಹೇರಪಿನಿಯು ಮೊಟ್ಟೆ ಸಾರಾಯು
ದಂಗಡಿ ಸುರೆಯು ತಿತ್ತಿಗಳ ।
ಜಂಗುಳಿ ದಳ ಸಾಲ ಪಸರವಾ ದಂಡಲಿ
ಹಿಂಗದೊಪ್ಪಿದುವೆಡೆ ವಿಡದೆ ॥ ೧೧

ಡೋಳಿನ ಕುದುರೆ ಡಮಾನದ ಮದ ಕರಿ
ಸೂಳ್ಯಪ ಟುಮುಕುಗಳೊಂಟೆ ।
ಪಾಳೆಯದಂಗ ರಕ್ಷೆಯ ರಾವುತರ ಕೂಡೆ
ಮೇಳದೊಳಗೆ ತಿರುಗುವುವು ॥ ೧೩

ಹೊಸ ಮನುಷ್ಯರ ಗವಲಿಗೆ ಗಳ್ಳಿಕ್ಕಿತ
ಮುಸುಕಿ ಮುಂಬರಿವ ಕುನಿಗಳು ।
ಎಸೆದುವಾ ದಂಡಿನೆಚ್ಚರಿಕೆಯ ಕಾವಲೊಂ
ದೆಸಕವನೇನ ವಂಣಿಸುವೆ ॥ ೧೪

ಬಳಿಕೀ ಪರಿಯಲಿ ಮುಸ್ತಫ ಖಾನ ದಂ
ಡಿಳಿಯಲು ಗಡಿಯ ಮನ್ನೆಯರು ।
ದಳವಾಯಿ ನಂಜ ರಾಜೇಂದ್ರನ ಬಳಿಗಾಗ
ಗಳಲನೆ ಚರರನಟ್ಟಿದರು ॥ ೧೫

ಕಡು ಬೇಗದಲಿ ಚರರೈತಂದು ದಳ ಪತಿ
ಯಡಿಗೆ ಕೈಗಳ ಮುಗಿದಾಗ ।
ಕಡುಗಲಿ ಮುಸ್ತಫ ಖಾನ ದಂಡೆತ್ತಿ ಬಂ
ದಡವ ಬಿನ್ನೈಸಿದರಂದು ॥ ೧೬

ಎನಲೊಳ್ಳಿತು ನಿಮ್ಮ ಗಡಿ ದುರ್ಗದೊಳಗೆಚ್ಚ
ರನುವಿನೊಳಿರಿ ಯೆಂದು ಚರರ ।
ಘನ ತೀವ್ರದೊಳಗೆ ಬೀಳ್ಕೊಟ್ಟಾಗ ದಳ ಪತಿ
ಜನ ನಾಥನೆಡೆಗೈತಂದ ॥ ೧೮

ಚಂದದೆ ನರಸ ರಾಜೇಂದ್ರನ ಪಾದಾರ
ವಿಂದಗಳಿಗೆ ತಲೆವಾಗಿ |
ನಿಂದು ಬಿನ್ನೈಸಿದ ಮುಸ್ತುಪನ ದಂಡೈ
ತಂದು ಗಡಿಯೊಳಿಳಿದಿರವ || ೨೮

ಅಡಸಿ ಗಿರಿಯನುಂಗುವ ವೀರನ ಬಾಯಿ
ತಡೆವುದೆ ಪಣ್ಫಲಗಳನು |
ಪೊಡವಿಪ ನೇಮಿಸು ಮುಸ್ತುಪನ ದಂಡನು
ಕಡಿದಿಕ್ಕುವೆ ರಣ ಬಲಿಯು || ೨೯

ತಾರಕಾಸುರನ ಪೂರ್ಬಲವನು ಹರನ ಕು
ಮಾರ ಹೊಯ್ದುಟ್ಟುವಂದದಲಿ |
ಕಾರಗಲಿಸಿಕೊಂಡು ಖಾನರ ಕೀರ್ತಿಯು
ಸೇರಿಪೆ ದೇವರ ಪದಕೆ || ೩೦

ತುರಗ ದಳವ ಬೀಳಲಿರಿದು ಖಾನರುಗಳ
ತರಿದೊಟ್ಟಿ ಶಿರವ ಚಂಡಾಡಿ |
ಬಿರುದ ಮೆರೆವೆ ದೇವರ ಕೃಪೆಯಿಂದೆನ್ನ
ದುರಕೆ ಬೆಸಸು ಜೀಯ ಯೆನಲು || ೩೧

ಎಂದೆಂಬ ನಂಜ ರಾಜೇಂದ್ರನ ಪೌರುಷ
ದಂದಕೆ ನೃಪ ಪರಿಣಮಿಸಿ |
ಮುಂದಾಗುವ ರಾಜ ಕಾರ್ಯದಿರವನಿಂ
ತೆಂದನೇ ವೇಳ್ವನಚ್ಚರಿಯ || ೩೨

ಹಂದಿ ಗುಲಾಮರಿಗೇತಕೆ ನೀ ನಿನ್ನ
ಮಂದಿ ಕುದುರೆ ಮನ್ನೆಯರ |
ಸಂದೇಹವೇಕಟ್ಟ ಯುವರಿಂದ ತುರುಕರ
ಕುಂದದೆ ಕಡಿದೆಬ್ಬಿಸೆಂದ || ೩೩

ದೇವರ ಶೌರ್ಯದೇಳಿಗೆಯಿಂದ ನಮ್ಮಯ
ಭೂ ವಳಯದ ಮನ್ನೆಯರು ।
ತೀವಿದ ವೈರಿ ಭೂಮಿಪ ಸೈನ್ಯ ಕಾನನ
ದಾವಾನಳನಂತಿಹರು ॥ ೨೪

ವನವನಾಹುತಿಗೊಳ್ವ ಶಿಖಿಗನಿಲನ ಸಖ
ತನದೆ ಪೌರುಷ * ಹೆಚ್ಚುವಂತೆ ।
ಜನಪ ಬಿನ್ನಹ ನಾನ್ನೈದಿ ಮನ್ನೆಯರಿಂದ
ಚಿನಕಡಿ ಗೈವೆ ರಕ್ಕಸರ ॥ ೨೫

ಈ ವೇಳೆಯಲಿ ನಾನ್ನೈದಿ ಮುಸ್ತಾಪನ
ತೀವಿದ ಬಲ ಜಲಧಿಯನು ।
ದೇವ ರಾಮನ ಶರದಂತೆ ಬತ್ತಿಸಿ ನಿಮ್ಮ
ಸೇವೆಯ ಸಲಿಸುವೆನೆಂದ ॥ ೨೬

ಅಂದು ಗೋಗ್ರಹಣದೆ ವಿಜಯ ಕೌರವ ಬಲ
ವೃಂದವ † ಸದೆದಟ್ಟಿದಂತೆ ।
ಮುಂದುಗೆಡಿಸಿ ತುರುಕರ ಬಲವನು ಕೊಂದು
ಕುಂದದೋಡಿಸುವೆ ತಾನೆಂದ ॥ ೨೭

ಎನಲು ನೀನರಿಯದ ಕಾರ್ಯದೇಣಿಕೆಗಳ
ಘನವಾಗಿ ಬಲ್ಲವರುಂಟೆ ।
ಅನುವರದೊಳಗೆಚ್ಚರಲಿ ಖಾನ ಮುಲುಕರ
ಮೊನೆ ಪಾಡ ಮುರಿದೆಬ್ಬಿಸೆಂದ ॥ ೨೮

ಚಲವ ಬಲಿದು ಪಾತ್ಸ್ಯಾವು ಮುಸ್ತಾಪಗೆ
ಬಲು ಬಲವನು ಕೂಡಿ ಕೊಟ್ಟು ।
ಕಳುಹಿದನಂತೆ ಮೇಲಾರೈಕೆಯಲಿ ಕಾರ್ಯ
ದಳವಿಯನೆಸಗು ಹೋಗೆಂದ ॥ ೨೯

* ಹೆಚ್ಚಿದಂತೆ. † ಸದದಪ್ಪುವಂತೆ.

ಎಂದು ನುಡಿದ ತನ್ನೊಡೆಯನ ಪಾದಾರ
ವಿಂದಗಳಿಗೆ ಕೈಯು ಮುಗಿದು ।
ಕಂದರ್ಪ ಸನ್ನಿಭ ನಂಜೇಂದ್ರ ತಳತಂತ್ರ
ಸಂದಣಿಯೊಳಗೈದಿದನು ॥ ೪೦

ತುರಗ ಹೇಷಾ ರವ ಕರಿಗಳ ಬೃಂಹಿತ
ಮೊರೆವ ವಾದ್ಯದ ರವದಿಂದ ।
ದುರ ಗಲಿ ದಳವಾಯಿ ನಂಜೇಂದ್ರನೃತಪ
ಪಿರಿದು ಸನ್ನಹವನೇ ವೇಳ್ವ ॥ ೪೧

ಕಾಲಾಳ ಬೊಬ್ಬೆ ಡಾಳಿಸುತಿಹ ಚಾಮರ
ದೇಳಿಗೆ ಪದ ಹತಿಗೇಳ್ವ ।
ದೂಳು * ದೆಸೆಗಳಂಬರವಿನ ಕಿರಣವ
ಮೇಳೈಸಿ ಮುಸುಕಿದುವಾಗ ॥ ೪೨

ಕಡುಗಲಿ ಸು ಭಟರು ಜಡಿವ ಖಂಡೆಯುಗಳ
ಕಿಡಿಗಳಾಕಾಶ ಮಂಡಲವ ।
ತುಡುಕಲಾ ಝಳಕೆ ಚರಿಪ ಪಕ್ಷಿ ಗರಿ ಸೀದು
ಸಿಡಿದು ಬಿದ್ದುವು ಭೂ ತಳಕೆ ॥ ೪೩

ಆಲವಟ್ಟವು ಸತ್ತಿಗೆ ಮದ ಕರಿಗಳ
ಸಾಲ ಪಟಗಳಿನ ಪ್ರಭೆಯು ।
ತೂಳಗೊಡದೆ ಮುಸುಕಲು ರಾಹು ಪರ್ವದೊಲ್
ಮೇಳೈಸಿತು ತಮ ಜಗಕೆ ॥ ೪೪

ಕರಿಗಳ ಮೇಲೊದರುವ ಡಮಾನದ ರವ
ನೆರೆ ತೀವಲೆಂಟು ದೆಸೆಗಳ ।
ದುರಗಲಿ ದಳ ಪತಿ ಬಲ ಸಹ ನಡೆತಂದು
ತುರುಗೆರೆಯಲಿ ಬೀಡಿಳಿದ ॥ ೪೫

* ದೆಸೆಗಳಂಬರದಿನ.

ಬಿರುದಿನ ಮನ್ನೆಯ ಮಂಡಲಿಕರ ಮೊತ್ತ
ಧರಿಸಿದಾಭರಣದ ಕಾಂತಿ ।
ಪರಿದುದು ಮುಸುಕಿದ ಕತ್ತಲೆಯನು ದಂಡು
ತೆರಳಿದುದ್ಧತಿ ತೀವ್ರದಿಂದ ॥ ೪೬

ಕದನಕೆ ಕಂಠೀರವೇಂದ್ರನ ದಳ ಪತಿ
ಯಿದಿರು ದಂಡಿಳಿದ ಬಗೆಯನು ।
ವೆದ ಮುಖ ಮುಸ್ತಾಪ ಕೇಳಿ ತನ್ನವರೊಳು
ಹದಗೆಟ್ಟು ಚಿಂತಿಸಿ ನುಡಿದ ॥ ೪೭

ನೆರೆ ನಮ್ಮ ಬಲವು ಮುಂದಕೆ ದಾಳಿ ಮಾಡಲು
ತೆರಹುಗೊಡದೆ ಮೈಸೂರ ।
ನರಸ ರಾಜೇಂದ್ರನ ದಳ ಪತಿ ತಳತಂತ್ರ
ವೆರಸಿ ಬಂದಿಹ ನಮ್ಮ ಮೇಲೆ ॥ ೪೮

ಕಗ್ಗೊಲೆಗಳ ಕಾಳಗದೆ ಮೈಸೂರವ
ರಗ್ಗಳೆಯರು ಜಗದೊಳಗೆ ।
ಬಗ್ಗನಿಲ್ಲಿಂದೈದಿ ನಾವು ನಮ್ಮಯ ಗಡಿ
ದುರ್ಗದೊತ್ತಲಿ ನಿಲ್ವೆವೆಂದ ॥ ೪೯

ತುರುಕ ಮಾರ್ಬಲವನು ಸರಕು ಮಾಡದೆ ಕೊಲ್ವ
ನುರುತರ ನಂಜ ರಾಜೇಂದ್ರ ।
ಹರತರದೂದಿನಿಂ ನಮ್ಮಯ ದುರ್ಗದ
ಭರವಸದೊಳು ನಿಲ್ವೆವೆಂದ ॥ ೫೦

ಎಂದೆಂಬ ಮುಸ್ತಾಪ ಖಾನನ ಮಾತಿಗೆ
ನಿಂದು ಕೈ ಮುಗಿದು ಮಂತ್ರಿಗಳು ।
ಮುಂದಣ ಕಾರ್ಯದೆಣಿಕೆಯಾಳಾಪವ
ನಂಗೊರೆದರು ತೀವ್ರದಿಂದ ॥ ೫೧

ಇಳಿದಿರ್ದ ಬಳಿಯಿಂದ ಪಾಳೆಯದೆಗೆದೊಡೆ
ಕಲಿಯೇರಿದ ನಮ್ಮ ಭಟರು ।
ಸಲೆ ಭೀತಿಗೆ ಮನವಿಡುವರು ರಿಪುಗಳ್ಗೆ
ಬಲು ಶೌರ್ಯದೇಳಿಗೆಯುರಸ ॥ ೫೦

ಆದರಿಂದ ನೀವು ಹಿನ್ನೆಲೆಗೈದದೆ ಮುಂದ
ಕೊದಗಿ ಪೌಜುಗಳನು ಬಲಿದು ।
ಕದನವನೆಸಗುವುದಿದು ರಾಜ ಕಾರ್ಯದ
ಹದನೆಂದು ಬಿನ್ನೈಸಿದರು ॥ ೫೩

ಇಂತೆಂದು ಬಿನ್ನೈಸಿದ ಮಂತ್ರಿಗಳನತಿ
ಸಂತೋಷದಲಿ ಮನ್ನಿಸುತ ।
ಮುಂತಾಗ ಖಾನ ಖಾನರ ಪೌಜನಲ್ಲಲ್ಲಿ
ಪಂತದೆ ಬಲಿದ ಮುಸ್ತಾಪ ॥ ೫೪

ಶಿಲೆಯ ಸಂಜೋಗದ ಕುದುರೆಗಳೇರಿದ
ಬಲು ಬಿರುದಿನ ರಾವುತರ ।
ಸಲೆ ನಾಲ್ಕು ಸಾವಿರ ಪೌಜನೊಂದೆಸೆಯಲ್ಲಿ
ಬಲಿದನಾ ಖಾನನೇ ವೇಳ್ವ ॥ ೫೫

ನವ ರತ್ನದ ಹಲ್ಲಣದ ತೇಜಿಗಳೇರಿ
ದವಗಡದತುಳ ರಾವುತರ ।
ತವಕದೆ ಬಡಗ ದಿಕ್ಕಿನೊಳೊಂದು ಪೌಜನು
ಬವರಕೆ ಬಲಿದನುಬ್ಬಿನಲಿ ॥ ೫೬

ಮಿಸುನಿಯ ಬಿರುದಿನ ಹಕ್ಕರಿಕೆಯ ಹಯ
ವಿಸರವ ನೆರೆ ಗರ್ಜಿಸುತ ।
ಅಸಮ ವಿಗ್ರಹ ವೀರರ ತೆಂಕ ದೆಸೆಯೊಳ
ಗೆಸಗಿದನೆರಡು ಸಾಸಿರವ ॥ ೫೭

ಬಿರುದಿನ ಡಾಳ ನೇಜೆಯುದ ರಾವುತರ ನಾ
ಲ್ಕೆರಡು ಸಾವಿರ ತೇಜಿ ಸಹಿತ ।
ದುರ ಮಂಡಲದೆ ಪಶ್ಚಿಮದಿಕ್ಕಿನೊಳಾಗ
ಪರುಠವಿಸಿದನಾ ಖಾನ ॥ ೫೮

ಬಳಿಕಿಂತು ಚೌ ದೆಸೆಯಲಿ ಕುದುರೆಯ ಪೌಜ
ನಳವಡಿಸಿಯೆ ಪಟು ಭಟರ ।
ಸಲೆ ನಾಲ್ಕೈದು ಮೋಹರ ಗೈದು ಕದನಕೆ
ಕಲಿಯೇರಿ ನಿಂದನೇ ವೇಳ್ಯ ॥ ೫೯

ಇತ್ತಲೀ ದಳ ಪತಿ ನಂಜೇಂದ್ರ ಬಲಪನೊಂ
ಭತ್ತು ಪೌಜಿನೊಳಳವಡಿಸಿ ।
ಮತ್ತಾಗ ಜಯ ಭೇರೀ ರವದಿಂ ಬಂದು
ಮುತ್ತಿದನಾ ಖಳ ಬಲವ ॥ ೬೦

ಉಭಯ ಬಲದಲಿ ಚಕೂಣಿಯ ಪಟು ಭಟರಾಗ
ಕುಬಿಬಿರಿದಬ್ಬರ ಗೈದು ।
ತ್ರಿ ಭುವನ ನಡುಗಲು ರಣ ಮಂಡಲದೆ ಶೌರ್ಯ
ಪ್ರಬಲದೊಳಿರಿದಾಡಿದರು ॥ ೬೧

ಬಂದೊಂದೊಟ್ಟಲಿ ಸಾವಿರ ಕೋವಿಯ
ಮುಂದಣಿಗಿಡುತ ಬೊಬ್ಬಿರಿದು ।
ಸಂದಣಿಸುತ ಮನ್ನೆಯರ ಮೊರ್ಬಾಲ ನೆರೆ
ಕೊಂದು ಕೂಗಿಡಿಸಿತು ಖಳರ ॥ ೬೨

ಪ್ರಳಯದ ದಾವಾಗ್ನಿಯ ಕುಡಿ ನಾಲಗೆ
ಯುಳವೆನೆ ಬೋರ್ಗರೆಯಿಸುತ ।
ಮೊಳಿದು ಬಾಣದ ಸು ಭಟರು ಮುಂದು ವರಿದಾಗ
ಸಲೆ ತುರುಕರನಟ್ಟಿದರು ॥ ೬೩

ಬಿರುದಿನ ಸಬಳದ ಭಟರು ಹಿನ್ನೆಲೆಗಾಗ
ಹೆರದೆಗೆಯದೆ ಹೆಜ್ಜೆಗಳ ।
ಧುರ ಮಂಡಲದೊಳರಿದಾಡಿ ಪೌರುಷವನು
ಪರಪಿದರೇನ ಬಣ್ಣಿಸುವೆ ॥ ೬೪

ಹೂಡಿ ಮಂಡಿಯ ಕಿವಿವರೆಗೆ ಕರಾಂಗುಲಿ
ಗೂಡಿ ಬಾಣವ ತೂಗಿ ಬಿಡುತ ।
ಕೂಡೆ ವೈರಿಗಳ ಕೆಡಹಿ ಪತಿ ಋಣವ ನೀ
ಗಾಡಿದರಥಟ ಬಿಲ್ಲವರು ॥ ೬೫

ಕುದುರೆಯ ರಾಯ ರಾವುತರು ಖೋ ಯೆನುತಾಗ
ಮದವೇರಿ ಮುಂದುರವಣಿಸಿ ।
ಸದೆಯುತ ಖಾನ ಖಾನರ ಮಾರ್ಬಲಂಗಳ
ನದೆಗೆಡಿಸಿದರುಬ್ಬಿನಲಿ ॥ ೬೬

ದುರಗಲಿ ದಳವಾಯಿ ನಂಜರಾಜೇಂದ್ರನ
ಬಿರುದಿನ ಭಟರುಪಟಳಕೆ ।
ಹೆರೆದೆಗೆದೋಡುವ ಖಾನರ ಕಂಡಾಗ
ಜರೆದು ಮುಸ್ತಾಪನೈದಿದನು ॥ ೬೭

ಒಂದುಬ್ಬಿನಲಿ ಹತ್ತು ಸಾವಿರ ಕುದುರೆಯ
ಸಂದಿಸಿ ತುರುಕ ರಾವುತರು ।
ಮುಂದುವರಿದು ಮೂದಲಿಸಿ ಮುತ್ತಿದರರಿ
ವೃಂದವನೇನ ಬಣ್ಣಿಸುವೆ ॥ ೬೮

ಕಂಡನು ನಿಮಿಷದೆ ರಿಪುರಾಜ ನಿಕರವೀ
ತಂಡ ಕಂಠೀರವೇಶ್ವರನ ।
ಚಂಡವಿಕ್ರಮ ದಳಪತಿ ನಂಜೇಂದ್ರ ಮುಂ
ಕೊಂಡುರುಬಿದ ಖಳಬಲವ ॥ ೬೯

ಒಡನೆ ಕಬ್ಬಕ್ಕಿವಿಂಡನು ಕಂಡೆರಗುವ
ಕಡುಗಲಿ ಸಾಳ್ವನಂದದಲಿ ।
ಬಿಡದಾಗ ಶೌರ್ಯ ವರ್ಧನ ನಂಜ ರಾಜೇಂದ್ರ
ತಾಡುಕಿದ ತುರುಕರ ಬಲವ ॥ ೨೦

ತೆಗೆ ತೆಗೆ ನಮ್ಮಯ ಚತೂಣಿಯ ಬಲವನು
ಹೊಗಗೊಡ ಬೇಡವೆಂದೆನುತ ।
ಮಿಗೆ ದಳ ಪತಿ ತುರುಕರ ಬಲ ವಾರ್ಧಿಯ
ಮೊಗೆದನೇ ವೇಳ್ವನದ್ಭುತವ ॥ ೨೧

ಮೊಳಗುವ ರಣ ವಾದ್ಯ ರಭಸ ಕಾಲಾಳ್ಗಳ
ಕಳಕಳ ಹಯ ನಿಕರಗಳ ।
ಬಲು ಖುರ ಪುಟಗಳಬ್ಬರ ಖಳ ಬಲವನು
ಸಲೆ ಭೀತಿಗೊಳಿಸಿದುವೆಂದು ॥ ೨೨

ಸಿಡಿಲುರುಬೆಗೆ ಸೆಡೆಯದೆ ಸಿಂಹದ ಮರಿ
ತುಡುಕಿಮೇಲ್ವಾಯ್ವಂದದಲಿ ।
ಕಡುಗಲಿ ನಂಜೇಂದ್ರ ಮುಸುಕಿದ ತುರುಕರ
ಪಡೆಯನಿರಿದನುಬ್ಬಿನಿಂದ ॥ ೨೩

ವಾರುವಗಳ ಬೀಳಲಿರಿದು ರಾವುತರನು
ಸೇರಲು ಯಮನ ಪಟ್ಟಣಕೆ ।
ಕೂರಸಿಯಲಿ ಸಿರಗಳ ಖಂಡಿಸುತಾಗ
ತೋರಿದ ಬಲು ಪರಾಕ್ರಮವ ॥ ೨೪

ಎಡದಲೊದಗಿ ಮುಸುಕಿದ ರಾವುತರ ವಂ
ಗಡವನು ಕಡಿದರೆಯಟ್ಟಿ ।
ತುಡುಕಿ ಮುಂಗಡೆಯೊಳುರುಬಿದರಿಗಳ ಕುಟ್ಟಿ
ಕಡಹಿದ ನಂಜ ರಾಜೇಂದ್ರ ॥ ೨೫

ಮುಳಿದು ದಕ್ಷಿಣದೆ ಮುಂಬರಿವ ಖಾನರುಗಳ
ತಲೆಯನರಿದು ಚೆಂಡಾಡಿ ।
ಸಲೆ ನಾಲ್ಕು ದೆಸೆಯ ಮೋಹರವನೆಲ್ಲವ ಕಾರ
ಗಲಿಸಿ ಯೋಡಿಸಿದನೇ ಪೇಳ್ವ ॥ ೩೬

ಭಲರೆ ಭಾಪುರೆ ಕಲಿಗಳ ನುಣ್ಣೊಸಲಿನ
ತಿಲಕ ಸಾಹಸ ವಿಕ್ರಮಾರ್ಕ ।
ವಿಲಸಿತ ಶೌರ್ಯ ವರ್ಧನನೆಂದು ಸುಮನಸ
ರೊಲಿದು ಕೊಂಡಾಡಿದರಾಗ ॥ ೩೭

ಕದಳಿಯ ವನಕೆ ಕಾಡಾನೆ ಪೊಕ್ಕಂದದೆ
* ಕದಡಿದನುರೆ ರಿಪು ಬಲವ ।
† ಮದಧೀರ ನಂಜೇಂದ್ರಗೆಣೆಯಿರುವರ ‡ ತ್ರಿಜ
ಗದಲಿ ನಾ ಕಾಣೆನೇ ಪೇಳ್ವ ॥ ೩೮

ಕರುಳು ಪರಿದು ಕಾಳಜವೊಕ್ಕು ಬಿಸಿ ರಕ್ತ
ಸುರಿದು ಕೈ ಕಾಲುಗಳ್ಮುರಿದು ।
ಉರುಳಿತು ತುರುಕರ ಬಲ ರಣ ಮಂಡಲ
ದಿರವ ನಾನೇನ ಬಣ್ಣಿಸುವೆ ॥ ೩೯

ಅದಟಿಂದ ಕಾಲ ಭೈರವನ ಪರಾಕ್ರಮ
ದದುಭುತವೆನು ಮೆರೆವಾಗ ।
ಇದಿರು ಗಾಯದೆ ಪೂತ ಮುಳ್ಮುತ್ತುಗದಂತೆ
ಕದನದೆ ನಂಜೇಂದ್ರ ಮೆರೆದ ॥ ೪೦

ವರ ವಿಮಾನದೆ ಪುರ ಹರ ನಂಜ ರಾಜನ
ದುರಗಲಿತನವ ಕಂಡಾಗ ।
ಗಿರಿಜೆಗೆ ತೋರಿ ನಾನೀತಗೆ ಸಾಯುಜ್ಯ
ಪರಮ ಪದವನೀವೆನೆಂದ ॥ ೪೧

* ಕಲಕಿದ ಪರಬಲವು. † ಧುರಧೀರ. ‡ ತ್ರಿಜಗದೊಳಗೆ.

ಎನುತಾಗ ರಣ ಮಂಡಲಕ್ಕೈದಿ ಹರ ತನ್ನ
ಘನ ಮೂರ್ತಿಯು ತೋರುತವಗೆ ।
ನಿನಗೆ ಬೇಕಾದ ವರವನೀವೆನೆಂದೆನೆ
ಚಿನುಮಯ ರೂಪಗಿಂತೆಂದ ॥ ೭೨

ದೇವ ಪಾರ್ವತಿಯ ಪ್ರಾಣೇಶ ಪಾವನ ಮೂರ್ತಿ
ಭಾವಜ ಹರ ಭವ ದೂರ ।
ತ್ರೀವಿದ ಕರುಣಾರ್ಣವ ಭಕ್ತ ಜನ ಸಂ
ಜೀವ ಸರ್ವೇಶ್ವರ ಶರಣು ॥ ೭೩

* ನಿರಪಾಯ ನಿರ್ಲೇಪ ನಿಷ್ಕಳ ನಿಗಮಾಶ್ವ
ನೆರೆ ರೇವಂತ ನಿಶ್ಚಿಂತ ।
ಸರಸಿಜ ಸಖ ಕೋಟಿ ತೇಜ ಕೃಪಾ ಕರ
ಪರಿಪಾಲಿಸೆನ್ನ ಬಿನ್ನಪವ ॥ ೭೪

ವರವ ಪಾಲಿಪ್ಪುದುಂಟಾದೊಡೆನ್ನೊಡೆಯಗೆ
ಸ್ಥಿರ ಸಾಮ್ರಾಜ್ಯ ಸಂಪದವ ।
ಹಿರಿದು ಸಂತಾನಾಭಿವೃದ್ಧಿ ಚಿರಾಯುವ
ಕರುಣಿಸಿ ಸಲಹು ನೀನೆಂದ ॥ ೭೫

ಒಡನೆ ನಿನ್ನಯ ಪಾದಾರವಿಂದದೊಳೆನ್ನ
ನಡಗಿಸಿ ಜನ್ಮ ಪಾಶಗಳ ।
ತೊಡಕ ಪರಿದು ಸಲಹೆಂದಾ ಪರ ಶಿವ
ನಡಿಗೆರಗಿದನೇ ವೇಳ್ವ ॥ ೭೬

ಸ್ವಾಮಿ ಕಾರ್ಯ ಧುರಂಧರನ ವಾಕ್ಯಕೆ ಮೆಚ್ಚಿ
ರಾಮಣೀಯಕ ಮೂರ್ತಿ ನಲಿದು ।
ಪ್ರೇಮದಿಂದಿಷ್ಟಾರ್ಥವಿತ್ತು ವಿಮಾನದೊ
ಳಾ ಮಹಿಮನ ಕೊಂಡೊಯ್ದ ॥ ೭೭

* ನಿರವಯ.

ಹರುಷದಿ ಕೈಲಾಸ ಪುರದಿ ನಂಜೇಂದ್ರನ
ಮೆರಿಸಿ ಮನ್ಮಥ ಹರ ನಗುತ ।
ಸುರರು ಪೂ ಮಳೆಗರೆಯಲು ಸಾಮ್ರಾಜ್ಯದ
ಸ್ಥಿರ ಪದವಿಯ ಕರುಣಿಸಿದ ॥ ೮೮

ಇತ್ತಲಾ ದುರಗಲಿ ನಂಜೇಂದ್ರ ಶಿವ ಲೋಕ
ದತ್ತೈದಿದ ವಾರ್ತೆಯನು ।
ಮತ್ತಾಗ ಚರರು ಕಂಠೀರವ ನರಸ ಭೂ
ಪೋತ್ತಮಗರುಹಿದರಾಗ ॥ ೮೯

* ಪೇಳಲಾ ನಂಜೇಂದ್ರ ದುರದೊಳಗೆಸಗಿದ
ಕೋಲಾಹಲದೇಳ್ಗೆಯನು ।
ಕೇಳಿ ಕೊಂಡಾಡಿ ಮಂತ್ರಿಗಳೊಳು ನರಸ ಭೂ
ಪಾಲನಿಂತೆಂದನೇ ವೇಳ್ಯ ॥ ೯೦

ನೆರೆ ನಮ್ಮ ಕಾರ್ಯವ ಕುರಿತು † ತಾಂ ಹರಣವ
ನಿರದೆ ‡ ವೆಚ್ಚಿಸಿದನೀ ಶೂರ ।
ಧರೆಯೊಳು ನರರೊಳಗೀತಗೆ ಸರಿಯಹ
ದುರಗಲಿಗಳ ಕಾಣೆನೆಂದ ॥ ೯೧

ಪಿರಿಯ ಪಟ್ಟಣ ಸಾಂಬಳ್ಳಿ ಮುಂತಾಗಿಹ
ಗಿರಿ ದುರ್ಗ ಜಲ ದುರ್ಗಗಳು ।
ನೆರೆ ಯಿೂತನಿಂ ನಮ್ಮ ವಶವಾದುವಿವನಿಗೆ
ಸರಿಯಾರುಂಟು ಲೋಕದಲಿ ॥ ೯೨

ಇಳೆಗೆ ವೆಗ್ಗಳವಾದ ಮಧುರೆಯ ಭೂಪನ
ತಳತಂತ್ರವ ಮುರಿಯಿರಿದು ।
ಸಲೆ ಜಯ ವಧುವ ನಮಗೆ ಸೇರಿಸಿದನೀ
ದಳವಾಯಿ ನಂಜ ರಾಜೇಂದ್ರ ॥ ೯೩

---

* ಆಗಲಾನಂಜೇಂದ್ರ. † ತನ್ನ. ‡ ವಚ್ಚಿಸಿದಶೂರನನು.

ಅಸಹಾಯ ಶೂರ ಧೈರ್ಯದ ಪರಾಕ್ರಮ ಧೀರ
ನಸಮ ಕೀರ್ತಿಯ ವಿಸ್ತಾರ ।
* ಜಸದ ಕಾರ್ಯಕೆ ಧುರಂಧರ ನಂಜ ರಾಜೇಂದ್ರ
† ರಸೆಯ ತೊರೆದು ಪೋದನಿಂದು ॥ ೯೪

ಎಂದು ಬಣ್ಣಿಸಿ ಕಂಠೀರವ ನರಸೇಂದ್ರ
ನಂದು ಮಂತ್ರಿಗಳೊಳು ನುಡಿದು ।
ಮುಂದಣ ದಳ ಪತಿ ತನವ ಲಿಂಗೇಂದ್ರನಿ
ಗಂದು ಕೊಡುವೊಡುಜ್ಜುಗಿಸಿದ ॥ ೯೫

ವರ ಶುಭ ಲಗ್ನದೆ ದಳವಾಯಿ ಪಟ್ಟವ
ವಿರಚಿಸಿ ಲಿಂಗ ರಾಜನಿಗೆ ।
ಪರಿವಾರವನಿತ್ತು ಬೇಗ ಕಂಠೀರವ
ನರಸ ರಾಜೇಂದ್ರ ಮನ್ನಿಸಿದ ॥ ೯೬

ಒಡೆಯನೆಡೆಯೊಳತಿ ಭಯ ಭಕ್ತಿಯೊಳಂದು
ಕಡುಗಲಿ ಲಿಂಗ ರಾಜೇಂದ್ರ ।
ಪೊಡವಿಯ ಪ್ರಜೆ ಪರಿವಾರವ ಮನ್ನಿಸಿ
ನಡಿಸಿದನತುಳ ಧರ್ಮದಲಿ ॥ ೯೭

ಬಾಲೇಂದು ಕಲೆ ‡ ದಿನ ದಿನಕತಿಶಯವಾಗಿ
ಮೇಲೆ ವರ್ಧಿಪ ತೆರದಂತೆ ।
ಭೂ ಲೋಲ ಲಿಂಗೇಂದ್ರ ಶೌರ್ಯ ಸೌಭಾಗ್ಯ ಸಂ
ದೇಳಗೆಯೊಳಗೆ ರಂಜಿಸಿದ ॥ ೯೮

ಇಂತೊಪ್ಪುವ ದಳ ಪತಿ ಗೂಡಿ ನರಸ ಭೂ
ಕಾಂತನು ಸಂತಸದೊಳಗೆ ।
ಸಂತೋಷದಲಿ ಪಾಲಿಸುತಾಗ ವರ ಜಯ
ಕಾಂತಗೆ ಲೋಲನಾಗೆಸೆದ ॥ ೯೯

---

* ಪತಿಕಾರ್ಯಕೆ. † ಕ್ಷಿತಿಯ. ‡ ಪಾ. ಬರುಬರುತತಿಶಯ.

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೊಳಗೆಯು ಸಂಧಿ
ಮುದದ ಸುಧರ್ಮಾನುಬಂಧಿ ॥ ೧೦೦

*

೧೯ನೆಯ ಸಂಧಿ ಸಮಾಪ್ತಂ.

---

* ಪೊಡವಿಪ ದಳವಾಯಿ ನಂಜರಾಜೇಂದ್ರ ತ
ನ್ನೊಡೆಯನ ಶೌರ್ಯದೊಳಗೆಯು ।
ಗಡಣವ ಚರಿತೆಯಾಗೊಲಿದು ಪೇಳಿಸಿದನು
ಕಡುಗಲಿಗಳು ಲಾಲಿಪುದು ॥

# ಇಪ್ಪತ್ತನೆಯ ಸಂಧಿ

## ಮಹಾ ನವಮಿಯ ಪುರ ಶೃಂಗಾರ

ಸೂಚನೆ|| ದೊರೆ ರಾಯ ನರಸೇಂದ್ರನ ಮಹಾ ನವಮಿಯ
ಪುರದುತ್ಸವವ ಬಣ್ಣಿಸುವೆ ||

ಇಳೆಯಾಣ್ಮ ಕಂಠೀರವೇಂದ್ರ ಸು ಧರ್ಮವ
ತಳೆದಾಳುತಿರೆ ಕನ್ನಡವ |
ವಿಲಸಿತವೆಹ ಶರತ್ಸಮಯ ಸಂತೋಷವ
ಸಲೆ ಸೂಸುತ್ತೈತಂದುದಾಗ || ೧

ಇಳೆಯೊಳೊಪ್ಪುವ ಹೊಳ ಕೆರೆ ತೊರೆಗಳೊಳಾ
ಸಲಿಲ ನಿರ್ಮಲವಾದುವಾಗ |
ಬೆಳಗಿನಲಿನ ಶಶಿ ಕಿರಣಗಳ್ ಶುಭ್ರವ
ತಳೆದು ರಂಜಿಸಿದುವರ್ತಿಯಲಿ || ೨

ದಿಟ್ಟ ವಧುಗಳ ಮೇಲುದು ಜಾರಿ ಪೋಗಲು
ಬಟ್ಟ ಕುಚಗಳು ಕಾಣ್ಬಂತೆ |
ದಿಟ್ಟಿಗೆ ಕಡು ರಮ್ಯವೀ ಭೂ ಧರಗಳು
ಕಟ್ಟೆಸಕದೊಳೊಪ್ಪಿದುವು || ೩

ಧರಣಿ ಮಜ್ಜನಗೈದು ನರಸ ರಾಜೇಂದ್ರನ
ವರಿಸ ಬೇಕೆಂದು ಸಂತಸದೆ |
ಅರಸಿನವನ್ನು ತಿಗುರಿದೊಲು ರಮ್ಯದೆ
ಮೆರೆದುವು ಶಾಲಿ ಕ್ಷೇತ್ರಗಳು || ೪

ಶಶಿ ಕಿರಣಗಳ ಶುಭ್ರಿಕೆ ವನ ವಿಸರದೊ
ಳಸೆವ * ವೃಕ್ಷದ ನೆಳಲುಗಳ |
ಪೊಸಕಗ್ಗಲ್ಲುಗಳೊಸರವು ಕಣ್ಗೆ ರಾ
ಜಿಸಿದುದನೇನ ವರ್ಣಿಸುವೆ || ೫

ಇಂತೊಪ್ಪುತಿಹ ಶರದೃತು ಸಮಯದೆ ಭೂ
ಕಾಂತ ಕಂಠೀರವೇಶ್ವರಗೆ |
ಸಂತೋಷವರಿಪುತ ಮಾನವಮಿ ವಿಭವವ
ತ್ಯಂತ ಸೌಖ್ಯದೆ ಬಂದುದಾಗ || ೬

ಬಳಿಕ ಜೋಯಿಸರಂದು ಸುಮುಹೂರ್ತದೊಳು ಲಗ್ನ
ಗಳ ಪೇಳೆ ಹರುಷವ ತಳೆದು |
ಇಳೆಯಾಣ್ಮ ಕಂಠೀರವ ರಾಜ ತನ್ನಯ
ದಳಪತಿಗೊಡನೆ ನೇಮಿಸಿದ || ೭

ಬರಿಸು ನಾನಾ ದೇಶದ ಚಿತ್ರಗೆಲಸದ
ವರ ವಿಶ್ವಕರ್ಮ ಸಂತತಿಯ |
ಹರುಷದೆ ಪಟ್ಟಣವನು ಸಿಂಗರಿಸೆಂ
ದರಸ ನೇಮಿಸಿದನರ್ತಿಯಲಿ || ೮

ಕಾಣಿಕೆ ಯುಡುಗೊರೆ ಯುಲುಪೆ ಸಹಿತವೀ
ಕ್ಷೋಣಿಯೊಳಸೆವ ಭೂಮಿಪರು |
ಮಾಣದೆ ಬರಲೆಂದು ಸಂತೋಷದಿಂದಾಗ
ಳೇಣಾಂಕ ಕುಲಜ ನೇಮಿಸಿದ || ೯

ಬರಲಿ ನಾವಾಳುವ ರಾಜ್ಯದ ಮನ್ನೆಯ
ರರಸು ಮಕ್ಕಳು ನಾಯಕರು |
ತರಲಿ ಜಾಳಿಗೆ ಪೂಜೆಗೆ ಪೊನ್ನ ಬಹು ವಸ್ತು
ವೆರಸಿ ರಾಜಿಸುವುಲುಪೆಗಳ || ೧೦

* ವೃಕ್ಷಗಳ |

ಎನಲು ಹಸಾದವೆನುತ ದಳಪತಿಯಾಗ
ಘನ ಹರುಷದಲಿ ಪಟ್ಟಣದ ।
ವಿನುತನೆನಿಪ ಲಿಂಗೆಯಗೌಡಗೆ ಪೇಳಿ
ದನುವ ನಾನೇನ ಬಣ್ಣಿಸುವೆ ॥ ೧೧

ಪೊಡವಿಯೊಳಿರುವ ಚಿತ್ರಿಕ ವಿಶ್ವಕರ್ಮರ
ಕಡು ಬೇಗದಲಿ ನೀ ಕರಿಸಿ ।
ಬಿಡದೆ ಪಟ್ಟಣವ ಸಿಂಗರಿಸೆಂದು ದಳಪತಿ
ಸಡಗರದಲಿ ನೇಮಿಸಿದ ॥ ೧೨

ಓಲಗಶಾಲೆ ಯಾಯುಧದ ಪೂಜಾ ಗೃಹ
ಮೇಲಾದ ಹಯಗಳ ಲಾಯ ।
ಲೀಲೆಯ ಮದಕರಿಗಳ ಮಂದಿರ ಚೆಲ್ವ
ದೋಳ ಸಿಂಗರವಾಗಲೆಂದು ॥ ೧೩

ಜೀಯ ನಿರೂಪವೆನುತ ಲಿಂಗೆಯಗೌಡ
* ನ್ಯಾಯೋಕ್ತಿಯಲಿ ಪಟ್ಟಣವ ।
ಆಯತದಲಿ ಸಿಂಗರಿಸಿದ ಬಹುಳೋ
ಪಾಯವನೇನ ಬಣ್ಣಿಸುವೆ ॥ ೧೪

ಬೀದಿಬೀದಿಯೊಳು ಪನ್ನೀರ ಚಳೆಯ ದಿವ್ಯ
ಸಾದು ಕತ್ತುರಿಯ ಸಾರಣೆಯ ।
ಮೋದದಿಂಪಿನ ಸೌರಭ್ಯ ಪಾಂಥರಿಗಾ
ಹ್ಲಾದವನೊಲಿದು ಬೀರಿದುವು ॥ ೧೫

ಮನೆ ಮನೆಗಳ ಬಾಗಿಲ ಪೊನ್ನ ಕುರುಜುಗಳ್
ಘನ ಮಂಡಲವನಡರ್ದಾಗ ।
ದಿನಕರ ಕಿರಣದೊಡನೆ ತರ್ಕಿಸಿ ತಮ್ಮ
ವಿನುತ ಪ್ರಭೆಯ ಬೀರಿದುವು ॥ ೧೬

---

* ಪ್ರಿಯೋಕ್ತಿ

ಹಿಂಗದೆ ಸಾಲುಗೊಂಡಿಹ ಪ ರರ ಹೊಳ್
ಪಂಗಳಗಳ ಬಾಗಿಲೊಳಗೆ ।
ರಂಗುವಡೆದ ಪವಳದ ತೋರಣದ ಕಾಂತಿ
ಕಂಗೊಳಿಸಿದುವು ಬೀದಿಯಲಿ ॥ ೧೭

ಅಗಿಲು ಸಾಂಬ್ರಾಣಿಯ ಧೂಪ ವಾಸನೆ ನೆರೆ
ನಿಗುರಿತು ಗಗನ ಮಂಡಲಕೆ ।
* ನಗಗಳಂತಕ ಮುಖ್ಯ ಸುರರ ವಿಮಾನವ
ಮಿಗೆ ತಡೆದಡ್ಡಗಟ್ಟಿದುವು ॥ ೧೮

ಸಾಲುಗೊಂಡೆಸೆವ ಮಕರ ತೋರಣ ರತ್ನ
ಜಾಲದ ಕುರುಜುಗಳಿಂದ ।
ಓಲಗ ಶಾಲೆ ಸಂಭ್ರಮದೆ ಚರಿಸುತಿಹ
ರಾಲಿಗಚ್ಚರಿಯ ಬೀರಿದುದು ॥ ೧೯

ರಥ ಕುರುಜುಗಳೊಳಗೆಸೆವ ಪಟಗಳು ಮಾ
ರುತನಲೆಗೊಲೆದಾಡುತಿರಲು ।
ನುತಿಸಲೋಲಗ ಸಿರಿ ಕೈ ನೀಡಿ ನಿರ್ಜರ
ತತಿಯ ಕರೆವೊಲೊಪ್ಪಿದುವು ॥ ೨೦

ಕುರುಜು ಕುರುಜಿನಗ್ರದೊಳಗೆತ್ತಿ ರಾಜಿಪ
ಸುರಮಾಯಿ ಹಳದಿ ಕೆಂಪುಗಳ ।
ಬಿರುದಿನ ಪಲ್ಲವ ಸತ್ತಿಗೆ ಮೆರೆದುವು
ಪರಿಕಲಿಸುತ ದಿವ್ಯಪ್ರಭೆಯ ॥ ೨೧

ಅಲ್ಲಲ್ಲಿ ರಾಜಿಪ ಕುರುಜುಗಳಗ್ರದೆ
ಸಲ್ಲಲಿತದ ಹೊನ್ನ ಕಳಸ ।
ಉಲ್ಲಾಸದಲಿ ತಮ್ಮ ಪ್ರಭೆಗಳ ಚೌದೆಸೆ
ಯಲ್ಲಿ ಬೀರಿದುವೇ ಪೇಳ್ವ ॥ ೨೨

---

* ನಗಕುಲಾಂತಕ.

ತಳತಳಿಸುವ ಕುರುಜುಗಳಗ್ರದಿಂದಿಳಿ
ದಿಳೆಯ ಸೋಂಕುವ ದುಂಡು ದೋಳು ।
ಬೆಳಗುತ ಪಾತಾಳದ ಫಣಿಪನ ಫಣಾ
ವಳಿಯ ರತ್ನವ ಪಳಚಿದುವು ॥ ೧೩

ನಳನಾರಿ ಕೋಟಿ ರೂಪನು ತಾಳಿ ಭೂ ತಳ
ಕಿಳದು ಕಂಠೀರವೇಶ್ವರನ ।
ಹೊಳೆಯುವೋಲಗ ಶಾಲೆಯ ನಿಟ್ಟಿಪಂದದೆ
ತಳಗೆ ತೋರಣಗಳೊಪ್ಪಿದುವು ॥ ೧೪

ದೊರೆ ರಾಯ ನರಸ ರಾಜೇಂದ್ರನೋಲಗದ ಬ
ಲ್ಸಿರಿಯ ಸಂಭ್ರಮವ ನೋಡುವೊಡೆ ।
ತರಣಿ ಪಲವು ರೂಪ ತಾಳ್ದೈತಂದೊಲು
ಮೆರೆದುವು ಕನ್ನಡಿ ಕಳಸ ॥ ೧೫

ಶ್ರೀ ಪತಿಗೊಪ್ಪುವ ತಾಣವಿಡಿವ ಪುಷ್ಪ
ಚಾಪನೋಲಗ ಶಾಲೆಯಂತೆ ।
ರೂಪುವಿಡಿದ ಹೊನ್ನ ಪುತ್ತಳಿಗಳ ಕಾಂತಿ
ವ್ಯಾಪಿಸಿದುವು ಚೌದೆಸೆಯ ॥ ೧೬

ಖವಖವಿಸುವ ಸೂರ್ಯ ಪುಟದ ಮೇಲ್ಕಟ್ಟಿದ
ನವ ರತ್ನಗಳ ಪೆರ್ಚಿಸಿದ ।
ಪವಳ ವಣ್ಣದ ಲೋವೆಗಳಿಂದೊಪ್ಪಿತು
ಭುವನೇಶನೋಲಗ ಶಾಲೆ ॥ ೧೭

ಮುತ್ತಿನ ಸೂಸಕ ವೈಡೂರ್ಯದ ಬಲು
ಭಿತ್ತಿ ಪಚ್ಚೆಯ ಸಾಲು ಗಂಭ ।
ಇತ್ತರದೊಳಗಾಸ್ಥಾನ ಮಂಟಪದೊಳು
ಬಿತ್ತರದೊಳಗೊಪ್ಪಿದುವು ॥ ೧೮

ಕೋಗಿಲೆ ಗಿಳಿ ರಥಾಂಗಗಳಂಚೆ ಪಾರಿವ
ಸೋಗೆ ನವಿಲ ಸೊಬಗಿಂದ ।
ಆಗಲಾಸ್ಥಾನ ಮಂಟಪ ರಾಜಿಸಿತು ಚೆ
ಲ್ವಾಗಿ ಚೈತ್ರನ ಶಾಲೆಯಂತೆ ॥ ೭೯

ಅಂತರಾಂತರದ ಮಂಟಪದೆ ಸುರೇಶನ
ಸಂತತ ಕ್ರೀಡಾ ವನದ ।
ಸಂತಾನದ ಫಲ ವಸ್ತು ರಾಜಿಸಿ ದಿವ್ಯ
ಕಾಂತಿ ಸೌರಭವ ಬೀರಿದುವು ॥ ೩೦

ಹೊಳೆವ ಪೊಂಬಾಳೆಯು ಕಂಬ ಚೌ ದೆಸೆಯೊಳು
ಕಳಿ ವೆಣ್ಣು ಸಹಿತೊಪ್ಪುತಿರಲು ।
ಗಿಳಿ ಕದುರ್ಗಂಕಿದೊಟಿನಿ ರಸ ಧಾರೆ ಭೂಮಿಗೆ
ಚಳಯುವಾಗೊಪ್ಪಿದುವಾಗ ॥ ೩೧

ಮದನ ದಿಗ್ವಿಜಯಕ್ಕೈದುವೆನೆಂದು ಧನುಗಳ
ಮುದದೆ ಪೂಜಿಪೊಡಿಟ್ಟಂತೆ ।
ಒದಗಿದ ಧವಳೇಕ್ಷು ದಂಡವೋಲಗದ ಚೌ
* ಸದನದೆ ಪೂಗಳೊಪ್ಪಿದುವು ॥ ೩೨

ಮರುಗ ಮಲ್ಲಿಗೆ ಕೆಂಜಾಜಿ ಸಂಪಿಗೆಗಳ
ಪರಿಮಳ ಪುಷ್ಪದ ಮಾಲೆ ।
ಮೆರೆದುವು ನಾನಾ ಬಗೆಯ ಬಂಧದೊಳಾಗ
ಪಿರಿದೋಲಗ ಶಾಲೆಯೊಳಗೆ ॥ ೩೩

ಒಡನೆ ಚೌ ದೆಸೆಯಲಿ ಸೂಳೆಯರಾಡುವ
ಕಡು ಚೆಲ್ವ ರಾಟಾಳಗಳು ।
ಬಿಡದೆ ನೋಡುವರಕ್ಷಿಗಳಿಗೆ ಚೋದ್ಯವ ಬೀರಿ
ತುಡುಕಿದುವಾಗಸಗಳನು ॥ ೩೪

* ಸದನ ಪೂಗಳೊಳೊಪ್ಪಿದುವು.

ಸುರ ನಾರಿಯರೋಲಗಕ್ಕೈತರುವೊಡೆ
ಸುರ ವರ್ಧಕಿ ವಿರಚಿಸಿದ ।
ಸು ರುಚಿರ ದಿವ್ಯ ವಿಮಾನಗಳನಲಾಗ
ಮೆರೆದುವು ರಾಟಾಳಗಳು ॥ ೩೫

ಬಿಡುಗಣ್ಣ ಹೆಂಗಳ ಸೊಬಗ ನಿಟ್ಟಿಸುವೊಡೆ
ಯೊಡನೆ ರಾಜಿಸುವ ಭೂ ತಳದ ।
ಮಡದಿಯರಂಬರಕಡರ್ವ ಪುಷ್ಪಕಗಳ
ಬೆಡಗ ಬೀರಿದುವು ರಾಟಾಳ ॥ ೩೬

ಪಟ್ಟದ ರಾಣಿಯರೈದಿಯೋಲಗವನು
ನಿಟ್ಟಿಸುವೊಡೆ ಸಿಂಗರದ ।
ಕಟ್ಟಾಣಿ ಮುತ್ತಿನ ನೆಲೆ ಮಾಡ ಗಗನವ
ಮುಟ್ಟಿದುವೇನ ಬಣ್ಣಿಸುವೆ ॥ ೩೭

ಹೇಮಾದ್ರಿ ತಟವ ಬಳಸಿದ ಕೀಲಕ ಗಿರಿ
ಸ್ತೋಮ ರಂಜಿಸಿ ಮೆರೆವಂತೆ ।
ಪ್ರೇಮದೊಳೆಸೆದುವು ನಾಟಕ ಶಾಲೆಯ
ಕಾಮಿನಿಯರ ಸಜ್ಜೆಗಳು ॥ ೩೮

ಅವರಂತರದೆ ಭೋಗ ಯುವತಿಯರೈತಂ
ದವನೀಶ್ವರನೋಲಗವ ।
ತವಕದೊಳ್ನಿಟ್ಟಿಪ ಚಂದ್ರಶಾಲೆಯ ದಿವ್ಯ
ಭವನವೊಪ್ಪಿದುವರ್ತಿಯಲಿ ॥ ೩೯

ಗಜ ಶಾಲೆ ಹಯಗಳ ಲಾಯ ದಿವ್ಯಾಯುಧ
ವ್ರಜವ ಪೂಜಿಪ ಭದ್ರ ಭವನ ।
ರಜತ ಸುವರ್ಣ ರತ್ನದ ಕಾಂತಿಯಿಂ ನೆರೆ
ತ್ರಿ ಜಗಕಚ್ಚರಿಯ ಬೀರಿದುವು ॥ ೪೦

ದೆಸೆ ದೆಸೆಯಿಂದ ಕಾಣಿಕೆ ವಸ್ತು ಸಹ ಬಹ
ವಸುಮತೀಶರಿಗೆ ಬೀಡಾರ |
ಮಿಸುನಿಯ ಮೇಲ್ಕಟ್ಟು ಚಪ್ಪರದಿಂದಲಾ
ಜಸವಡೆದುವು ಪುರದೊಳಗೆ || ೪೧

ಉಲುಪೆಯ ಮನೆಯುಗ್ರಾಣದ ಸರಕುಗಳ್
* ಸಲೆ ದಧಿ ಘೃತ ತೈಲ ವಾಪಿ |
ವಿಲಸಿತದುಡುಗೊರೆಗಳ ಬೊಕ್ಕಸದ ಗೃಹ
ನಲವುದೋರಿದುವಾ ಪುರದೆ || ೪೨

ಬಳಿಕ ಚಪ್ಪನ್ನ ರಾಷ್ಟ್ರದ ಚೋದ್ಯ ವಿದ್ಯದ
ವಿಳಸಿತರಹ ಸೂರಿಗಳಿಗೆ |
† ಇಳಿವ ಬೀಡಾರಗಳರ್ತಿಯೊಳ್ಪುರದೊಳ್
ಗಳವಟ್ಟು ಮೆರೆದುವೇ ವೇಳ್ವ || ೪೩

ದಿನಚರಿಯ ಗಣಿತ ಭೂ ಸುರ ನಿಕರಕೆ
ಮನ ದಣಿವನ್ನ ಮೃಷ್ಟಾನ್ನ |
ಕನುವಾದ ಭೋಜನ ಶಾಲೆ ಪಾಕದ ಗೃಹ
ಘನವಾದ ಸೊಬಗ ಬೀರಿದುವು || ೪೪

ವೀರ ವೈಷ್ಣವರಿಗೆ ಬುಧರಿಗೆ ಬಯಸಿದ
ಚಾರು ರಾಮಾಂಜಿ ಕೂಟಗಳ |
ಮೇರೆಯಿಲ್ಲದೆ ಭೋಜನ ಶಾಲೆ ಮೆರೆವ ವಿ
ಸ್ತಾರವನೇನ ಬಣ್ಣಿಸುವೆ || ೪೫

ವರ ಮಹತ್ತಿನ ಹಿರಿಯರು ಮಠ ಪತಿಗಳ್ಗ
ಪರಮ ವಿರತರ ನೆರವಿಗೆ |
ಪರಿಪೂರ್ಣ ದಾಸೋಹದ ಗೃಹ ಮೆರೆದಿಹ
ಸಿರಿಯ ಸಂಭ್ರಮವನೇನೆಂಬೆ || ೪೬

* ದಧಿಘೃತತೈಲದ ಕಣಜ.   † ಎಸೆವ ಬಿಡಾರಗಳ್ಪುರದೊಳಗಳವಟ್ಟು ಮೆರೆದುವರ್ತಿಯೊಳೇನವೇಳ್ವೆ.

ಜೋಗಿ ಜಂಗಮ ದರವೇಸಿಗಳಿಗೆ ನೆರೆ
ಮೂಗ ಬಧಿರರಂಧಕರಿಗೆ ।
ಬೇಗದೆ ಹೆಡಗೆ ಹೆಡಗೆಯೊಳನ್ನವನೀವ
ರಾಗದ ಭವನವೊಪ್ಪಿದುವು ॥ ೪೭

ಪೊಡವಿಯೊಳತಿ ಶೂರ ಸಾಧನೆಗಳ ಮಲ್ಲ
ರೆಡೆವಿಡದಿಹ ಪಾಠಕರ ।
ಗಡಣಕೆ ಬಹು ಬಗೆ ವಿದ್ವಾಂಸರಿಗೀವ
ಪಡಿಯ ಹಜಾರವೊಪ್ಪಿದುವು ॥ ೪೮

ಸೂಳೆಯರುಗಳು ಡೊಂಬರು ಬಹು ಬಗೆಯಿಂದ್ರ
ಜಾಲಿಗಳ್ಬ್ಯರೂಪದವರು ।
ತಾಳವಾದ್ಯಳಿಗರಿಗಳೆವ ಪಡಿಯ ರತ್ನ
ಕೀಲಿತ ಗೃಹಗಳೊಪ್ಪಿದುವು ॥ ೪೯

ಒಡನಿಂತು ಮಹ ನವಮಿಯುತ್ಸವಕೋಸುಗ
ಕಡು ಸೊಬಗಿನಲಿ ಪಟ್ಟಣವ ।
ಬಿಡದೆ ಸಿಂಗರಿಸಿ ಲಿಂಗೆಯ ಗೌಡ ದಳ ಪತಿ
ಯಡಿಗೆ ಬಿನ್ನೈಸಿದನಾಗ ॥ ೫೦

ಬಳಿಕ ಸಂಭ್ರಮದೆ ಪಟ್ಟಣವ ಸಿಂಗರಗೈದ
ಚಲುವಿಕೆಗಳ ಸಂತಸದೆ ।
ಇಳೆಯಾಣ್ಮ ಕಂಠೀರವಗೆ ಬಿನ್ನೈಸಿದ
ದಳ ಪತಿ ಲಿಂಗರಾಜೇಂದ್ರ ॥ ೫೧

ನರ ರೂಪ ನರಸಿಂಹ ದಳವಾಯ ಮನ್ನಿಸಿ
ವರ ಮಹಾ ನವಮಿಯುತ್ಸವದ ।
ಸಿರಿಯ ನೋಡುವೊಡೆ ಸುತ್ತಣ ಭೂಪಾಲರ್ಗೆ
ಬರಿಸುವುತ್ತರಗಳನೆಂದ ॥ ೫೨

ದೊರೆಯು ನಿರೂಪದೆ ಶುಭ ಮುಹೂರ್ತದೊಳಾಗ
ಕರಿಸಿ ರಾಯಸದ ಮಂತ್ರಿಗಳ ।
ಹರುಷದೆ ದಿಕ್ಕಿನ ದೊರೆಗಳಿಗೋಲೆಯ
ಬರಿಸಿದ ಲಿಂಗರಾಜೇಂದ್ರ ॥ ೫೩

ಶ್ರೀಮತ್ಪರಮ ಜಯಾಂಗನಾ ವಲ್ಲಭ
ಸೋಮ ವಂಶಾಬ್ಧಿ ಶಶಾಂಕ ।
ಸ್ವಾಮಿ ಕಂಠೀರವೇಂದ್ರನ ದಳ ಪತಿ ಹಿತ
ಭೂಮಿಪರಿಗೆ ವಿನಯಾರ್ಥ ॥ ೫೪

ಬಳಿಕ ನಮ್ಮಯ ಕರ್ತರು ಮಾಳ್ಪ ಮಹ ನವಮಿ
ಸುಲಲಿತೋತ್ಸವದ ಸಂಭ್ರಮಕೆ ।
ತಳುವದೆ ನೀವೈದಿ ನಿಟ್ಟಿಸಿ ಮನ್ನಣೆ
ದಳದೊಪ್ಪುವುದು ಪ್ರೀತಿಯಲಿ ॥ ೫೫

ಎಂದೀ ಪರಿಯುತ್ತರಗಳ ದೆಸೆ ದೆಸೆ
ಗಂದಟ್ಟಿ ಲಿಂಗರಾಜೇಂದ್ರ ।
ಬಂದು ತನ್ನೊಡೆಯನ ವಿಲಸಿತ ಪಾದಾರ
ವಿಂದಕ್ಕೆ ಬಿನ್ನೈಸಿದನು ॥ ೫೬

ಭುವನೇಶ ಕಂಠೀರವ ನರಸೇಂದ್ರನ
ತವೆ ಮಹ ನವಮಿಯುತ್ಸವಕೆ ।
ಅವನೀಶ್ವರರು ಕಾಣಿಕೆ ವಸ್ತು ಸಹ ಬಹ
ವಿವರವನೇನ ಬಣ್ಣಿಸುವೆ ॥ ೫೭

ಹರಿಗೆ ಹಲಗೆ ಖಂಡೆಯ ಸಾಲ ಸಬಳದ
ಸುರಗಿ ಕೈಯಿಟ್ಟ ಕೋವಿಗಳ ।
ಬಿರುದಿನ ಭಟರ ಮೋಳಡೆ ನರಸಿಂಹಪುರ
ದರಸು ಸಂಭ್ರಮದೊಳೈತಂದ ॥ ೫೮

ಕಾಲ ಪೆಂಡೆಯ ಸರಪಣಿ ಪಟ್ಟೆಯ ದಟ್ಟಿ
ತೋಳ ಭಾಪುರಿ ಹೊನ್ನ ಕಡಗ ।
ಮೇಲೊಪ್ಪುವ ನಾಯಕರ ಸಂದಣಿಯೊಳು
ಬೇಲೂರ ನೃಪನೈತಂದ ॥ ೫೯

ಕಿವಿಯೊಳೊಪ್ಪುವ ಕಾಮಾಕ್ಷಿ ಕಡಕು ಗಂಟ
ತವೆ ಚಿನ್ನ ಸರ ವೈರಣೆಯ ।
* ಚವಿಯಿಂದ ತನ್ನಯ ಬಲಸಹ † ಕುಣಿಗಿಲ್ಪು
ರವನಾಳ್ವ ನೃಪನೈತಂದ ॥ ೬೦

ನಾಗರ ಫಣಿ ಪಟ್ಟೆಯ ದಟ್ಟಿ ಕೊರಳೊಳು
ರಾಗದೆ ಮೆರೆವ ಉಳಗಳ ।
ತೂಗುವಾಯುಧಗಳ ಭಟರ ಸಂಮೇಳದೆ
ಮಾಗಡಿಯಧಿಪತಿ ಬಂದ ॥ ೬೧

ಪರಿ ಪರಿಯಾಯುಧವಿಡಿದು ಶೃಂಗಾರದ
ಪರಿಪೂರ್ಣ ಭೂಷಣವಾಂತ ।
ದೊರೆ ಮಕ್ಕಳು ಸಹ ನಂಜರಾಯ ಪಟ್ಟಣ
ದರಸನೈತಂದನರ್ತಿಯಲಿ ॥ ೬೨

ಕೊಡೆ ಪಿಡಿದ ಬಿಲ್ಲಂಬು ಕೈಯೊಳಗಿಹ
ಜಾಡಿಯ ಹರಿಗೆಗಳಿಂದ ।
ಪಾಡು ಪಂತದ ನಾಯಕರ ಸಂದಣಿಗೂಡಿ
ಬೇಡ ಮನ್ನೆಯನೈತಂದ ॥ ೬೩

ಕರಿಯ ಕಂಬಳಿಯ ಕುಪ್ಪಸ ಕುಲ್ಲಾಯಿಕ್ಕಿ
ಮೆರೆಯುತ ತುಂಬಿಗಳಂತೆ ।
ಧರೆಗೆ ಚೋದ್ಯವ ಬೀರುತಲಾಗ ಕೊಡಗರ
ಪರಿವಾರ ಬಂದುದರ್ತಿಯಲಿ ॥ ೬೪

---

* ಅತಿಶೀವಿಯಿಂದ. † ಕುಣಿಗಿಲನಾಳ್ವ.

ಪೊಳವ ಬಚ್ಚಣೆಯು ಹರಿಗೆ ಬಿಚ್ಚುಗತ್ತಿಯು
ಹೊಳವ ಕಟಿಯು ಮುಂಡುಗಳ ।
ಬಲಗಳ ಮಧ್ಯದೆ ಸರ್ವ ಸಂಭ್ರಮದೊಳು
ಮಳಯಾಳದವನೀಶ ಬಂದ ॥ ೬೫

ಒಡನೆ ಕಾಣಿಕೆಯಾವ ವಸ್ತು ವಾಹನಗಳ
ಗಡಣ ಸಹಿತ ಸಂಭ್ರಮದೆ ।
ಬಿಡದೊಪ್ಪುವ ರಾಯರ ಸಮ್ಮುಖದ ಮಂತ್ರಿ
ಕಡು ತವಕದೆ ಬಂದನಾಗ ॥ ೬೬

ಕಟ್ಟಿದ ಪೊನ್ನ ಜಾಳಗೆಯು ಕಾಣಿಕೆಗಳ
ಪೆಟ್ಟಿಗೆ ಸಹಿತ ಸಂಭ್ರಮದೆ ।
ದಿಟ್ಟನು ತಂಜಾವೂರು ಭೂಮಿಪಾಲನ
ಪಟ್ಟದ ಮಂತ್ರೀಶ ಬಂದ ॥ ೬೭

ಆಣಿ ಮುತ್ತಿನ ಕಂಠ ಮಾಲೆ ಚೌಕುಳ ಪೊನ್ನ
ಕಾಣಿಕೆ ಪೊರೆಯಾಳು ಸಹಿತ ।
ಕ್ಷೋಣಿಪ ಮಧುರೆಯ ತಿರುಮಲೇಂದ್ರನ ಸುಪ್ರ
ವೀಣ ಮಂತ್ರೀಶನೈತಂದ ॥ ೬೮

ಬಳಿಕಾಗ ತೆಂಕ ಯಿಕ್ಕೇರಿ ನಾನಾದೇಶ
ದಿಳೆಯಾಣ್ಮರುಡುಗೊರೆ ಸಹಿತ ।
ಚಲದಂಕ ನರಸೇಂದ್ರನ ಮಹ ನವಮಿಯ
ಸುಲಲಿತೋತ್ಸವಕೈದಿದರು ॥ ೬೯

ಬಳಸಿದ ಗಡಿಯ ಮನ್ನೆಯ ಪ್ರಭುಗಳು ಬಲು
ವುಲುಪೆ ಕಾಣಿಕೆ ಕಪ್ಪ ಸಹಿತ ।
ತಳುವದೆ ಶ್ರೀರಂಗ ಪಟ್ಟಣಕೈತಂದು
ಸಲೆ ಸಂಭ್ರಮದೊಳೊಪ್ಪಿದರು ॥ ೭೦

ವಿದ್ವಾಂಸರು ವಿನಿಯೋಗಿಗಳಧಿಕ ಪ್ರ
ಸಿದ್ಧ ಪುರುಷರುತ್ತಮರು ।
ಸಿದ್ಧಾಂತಿಗಳು ಗಾಯಕರು ಪಾಠಕರಾಗ
ಹೊದ್ದಿದರತುಳ ಸಂಭ್ರಮದೆ ॥ ೭೧

ವಿಟ ವಿದೂಷಕ ನಾಗರಿಕ ಪೀಠಮರ್ದನ
ಪಟುಮಹ ನಾಲ್ಕು ಜಾತಕದ ।
ಸುಟಿಯುಳ್ಳ ಶೃಂಗಾರ ಪುರುಷರು ಹರುಷೋ
ತ್ಕಟದೊಳಗೈತಂದರಾಗ ॥ ೭೨

ಬೇಳಲಳವೆ ನಾನಾ ದೇಶದ ಜನ
ಜಾಲವೈತಂದು ಪಟ್ಟಣಕೆ ।
ಆಲಿಗಳಚ್ಚರಿಯಾಗಿ ಕಿಕ್ಕಿರಿದಿಹ ಮುದ
ದಾಳಾಪಪನೇ ಮೇಳ್ಯ ॥ ೭೩

ಇಂತು ನಾನಾ ದೇಶದ ಭೂ ಪಾಲರ
ತಿಂತಿಣಿ ಸರ್ವ ಸಂಭ್ರಮದೆ ।
ಮುಂತೆ ಶ್ರೀರಂಗ ಪಟ್ಟಣಕ್ಕೈತಂದ
ತ್ಯಂತ ಸಂತಸದೊಳೊಪ್ಪಿದುದು ॥ ೭೪

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಗೆಯು ಸಂಧಿ
ಮುದದ ಸುಧವರ್ಣಾನುಬಂಧಿ ॥ ೭೫

೨೦ನೆಯ ಸಂಧಿ ಸಮಾಪ್ತಂ.

# ಇಪ್ಪತ್ತೊಂದನೆಯ ಸಂಧಿ

ಮಹಾ ನವಮಿ ಯೊಡ್ಡೋಲಗದುತ್ಸವ.

**ಸೂಚನೆ**|| ನರಸೇಂದ್ರನ ಮಹಾ ನವಮಿಯೋಲಗದ ಖ
ಲ್ಸಿರಿಯ ಸಂಭ್ರಮವ ಬಣ್ಣಿಸುವೆ ||

ತೊಳಗುವಾಶ್ವೀಜ ಮಾಸದ ಶುಕ್ಲ ಪಕ್ಷದೊ
ಳಳವಟ್ಟ ಪ್ರಥಮ ದಿವಸದೆ |
ಗಳಿಲನೋಲಗ ಶಾಲೆ ಪುಣ್ಯಾರ್ಚನೆ ಹೋಮ
ವೆಳಸಿತು ವಿಪ್ರರಿಂದಾಗ || ೧

ಗಜ ಶಾಲೆ ಹಯಗಳ ಲಾಯ ದಿವ್ಯಾಯುಧ
ವ್ರಜಗಳ ಮಂಟಪಗಳಿಗೆ |
ದ್ವಿಜರೈದಿ ಹೋಮ ಪುಣ್ಯಾರ್ಚನೆ ಪೂಜೆಯ
ತ್ರಿ ಜಗ ನಲಿಯೆ ರಚಿಸಿದರು || ೨

ಮನೆಯ ದೇವತೆ ಬೆಟ್ಟದ ಚಾಮುಂಡಿಯ
* ಮನಗೊಂಡು ಬಹು ಪೂಜೆಯಿಂದ |
† ಘನ ಕುಂಕುಮಾರ್ಚನೆ ಪಣ್ಫಲ ನೈವೇದ್ಯ
‡ ವನು ನೆರೆ ಹರುಷದಿಂ ಮಾಡೆ || ೩

ವರ ಪುಷ್ಪ ಗಂಧಾಕ್ಷತೆ ಧೂಪ ದೀಪ ಬಂ
ಧುರ ದಿವ್ಯ ನೈವೇದ್ಯದಿಂದ |
¶ ಹರಚಂಡಿಕಾಂಬಿಕೆ [ಯರ] ನವ ರಾತ್ರಿಯ
ಪರಿಪೂರ್ಣ ಪೂಜೆಯೊಪ್ಪಿದುದು || ೪

* ಬಲಗೊಂಡು. † ನೆರೆ. ‡ ಗಳಿಂದಹರುಷದಿಂ. ¶ ಘನಚಂಡಿ.

ಪುರದೊಳೊಪ್ಪುವ ಸರ್ವ ದೇವತಾ ಜಾಲಕೆ
ಪಿರಿದರ್ತಿಯೊಳು ಭೂವಿಭಾಕ ।
ವರ [ಪೂಜೆ] ನೈವೇದ್ಯ [ಗಳನು] ಸಂಭ್ರಮದಲಿ
ದೊರೆ ರಾಯನೊಲಿದು ಮಾಡಿಸಿದ ॥ ೫

ದಿನ ಚರಿಯದೊಳಗಣಿತ ಭೂ ಸುರರಿಗಾಗ
ಮನ ದಣಿವನ್ನ ಮೃಷ್ಟಾನ್ನ ।
ಅನು ಲೇಪನಾದಿ ಸು ಗಂಧ ಸತ್ಕಾರಗಳ್
ಘನ ವಾಗ್ಗಿ ಮೆರೆದುವರ್ತಿಯಲಿ ॥ ೬

ವಿಲಸಿತವಡೆದು ರಾಜಿಸುವ ಮಹತ್ತಿಗೆ
ಪಲ ತೆರ ವಿದ್ವಾಂಸರಿಗೆ ।
ಸು ಲಲಿತ ದಾಸೋಹ ಮೃಷ್ಟಾನ್ನ ಭೋಜನ
ಬಲು ಸೌಖ್ಯದೊಳಗೊಪ್ಪಿದುವು ॥ ೭

ಮರೆ ಹೊಕ್ಕ ದೊರೆಗಳ್ಗೆ ಸ್ನೇಹ ನಿಮಿತ್ತದೆ
ಪರಮೋತ್ಸವಕ್ಕೈತಂದ ।
ಅರಸುಗಳಗೆ ಮಸ್ನೆಯರಿಗೆ ದಿನ ಚರಿ
ಪಿರಿದು ಮನ್ನಣೆಗಳೊಪ್ಪಿದುವು ॥ ೮

ದೇಶ ದೇಶದ ನೋಟಕ ಜನ ಬಹುಳ ವಿ
ಲಾಸದ ಯಾಚಕ ನಿಕರ ।
ಭೂಷಣದನ್ನ ಪಾನದೆ ಮನ ದಣಿದು ಸಂ
ತೋಷದೊಳೆಸೆದರೇ ವೇಳ್ವ ॥ ೯

ಒಡನುತ್ಸವವ ನಿಟ್ಟಪೊಡ್ಕೈದಿದ ಜೋಗಿ
ಕಡು ದರವೇಸಿ ಜಂಗಮರು ।
ಹೆಡಗೆಯೊಳಗೆ ಹೂತು ಕೊಡುವನ್ನ ದಾನದೆ
ಬಿಡದೆ ಸಂತುಷ್ಟಿವಡೆದರು ॥ ೧೦

ಇಂತಾಗ ಸರ್ವ ಜನರು ಹರುಷವ ತಾಳ
ಲುಂತೆ ಸಿಂಗರ ಗೈದೊಡನೆ ।
ಕಂತು ಸನ್ನಿಭ ನರಸೇಂದ್ರನೋಲಗವ ನೋ
ರಂತೆ ನಿಟ್ಟಿಸಲೈದಿದರು ॥ ೧೧

ಪುರ ಜನ ಪರಿ ಜನ ನಾನಾ ದೇಶದ
ನೆರವಿಯು ಜನ ಸಿಂಗರಿಸಿ ।
ನರಸೇಂದ್ರನ ಮಹಾ ನವಮಿಯೋಲಗದ ಸೌಂ
ದರಿಯುವ ನೋಡಲೈದಿದರು ॥ ೧೨

[ಮಿಗುವ] ಹರ್ಷದೊಳಾಗ ಪೌರ ನಾರಿಯರೋ
ಲಗದ ಸಂಭ್ರಮವ ನಿಟ್ಟಿಪೊಡೆ ।
ಬಗೆ ಬಗೆಯಲಿ ಸಿಂಗರ ಗೈದು ಬರುತಿಹ
ಸೊಗಸ ನಾನೇನ ಬಣ್ಣಿಸುವೆ ॥ ೧೩

ಎಸೆವ ರತ್ನದ ಬೊಟ್ಟಿನ ಹರಳೋಲೆಯು
ತ್ರಿ ಸರ ಚಿಂತಾಕು ಮೂಗುತಿಯು ।
ಪೊಸ ಮುತ್ತಿನ ಕಂಠ ಮಾಲೆಯು ಸೊಬಗಿನ
ಬಿಸಜ ಗಂಧಿಯರೈದಿದರು ॥ ೧೪

ಕಡಗ ಕಂಕಣ ಮುದ್ರೆಯುಂಗುರ ಮೋಹಿಪ
ಬಿಡು ಮುತ್ತುಗಳ ಚೌ ಸರದ ।
ಒಡನೊಪ್ಪುವ ದಿವ್ಯ ನೂಪುರಗಳನಾಂತ
ಮಡದಿ ರನ್ನೆಯರೈದಿದರು ॥ ೧೫

ಕಾಲುಂಗುರ ಪಿಲ್ಲಿ ಮಂಟಗೆ ನವ ರತ್ನ
ಕೀಲಿತ ಕೊಪ್ಪು ವೆಂಟೆಯುದ ।
ತೋಳೊಳೊಪ್ಪುವ ಸರ ತಾತಿ ಹೊಂಬಳಗಳ
ಬಾಲವೆಣ್ಣುಗಳೈದಿದರು ॥ ೧೬

ಜಡೆ ಬಂಗಾರವನಿಟ್ಟು ಫಾಲದೊಳಾಗ
ಲೊಡನೆ ಕಸ್ತೂರಿಯ ಬೊಟ್ಟು ।
ನಡೆವ ವೈಯ್ಯಾರದೆ ಬೆಡಗು ದೋರುತ ಬೇಗ
ಮಡದಿಯರೈತಂದರಾಗ ॥ ೧೭

ಮಿಸುಪ ಸಂಪಗೆಗಾವಿ ಸಂಧ್ಯಾವಳಿ ಚೆಲ್ವ
ಪೊಸ ಶುಭ್ರ ವಸನವನುಟ್ಟು ।
ಎಸೆಯುವುದಯ ಸಂಜೆ ಯಿರುಳರಸನ ಬಲು
ಜಸವ ಬೀರುತಲೈದಿದರು ॥ ೧೮

ಮಲ್ಲಿಗೆ ಜಾಜಿ ಸಂಪಗೆಯರಳ್ಗಳ ಮಾಲೆ
ಸಲ್ಲಲಿತಾಂಗಿಯರುಗಳ ।
ಪಲ್ಲೈಸಿದ ಜಡೆ ಮುಡಿಗಳೊಳಗೆ ಬಹು
ಳೋಲ್ಲಾಸದೊಳೊಪ್ಪಿದುವು ॥ ೧೯

ಚರಣ ಪಲ್ಲವವ ತಡೆವ ನಿರಿಗಳ ವಾಮ
ಕರಕಮಲದೆ ಪಿಡಿದೊಡನೆ ।
ನರೆ ತೀವ್ರ ಗಮನಕೆ ಕಿರು ಬೆಮರಿಡುತ ಪಂ
ಕರುಹ ಮುಖಿಯರೈದಿದರು ॥ ೨೦

ಕೌಂಕುಳ ಮಕ್ಕಳು ಕೈ ಪಿಡಿದೈತಹ
ಬಿಂಕದ ಮುದ್ದು ಬಾಲಕರು ।
ಶಂಕೆಯಿಲ್ಲದೆ ತೊಟ್ಟಿಲು ಮಕ್ಕಳು ಸಹ
ಮುಂಕೊಂಡು ಸತಿಯರೈದಿದರು ॥ ೨೧

ಬೆಂಗಡೆ ಬಹ ಕೆಳದಿಯರು ಕೈ ತಳ್ಕನ
ಸಂಗಾತಿಗಳು ಸಾಧ್ವಿಯರು ।
ಹಿಂಗದೆ ಯಕ್ಕ ತಂಗಿಯರ ಮೇಳದಲಿ ಪ್ರ
ರಾಂಗನಾ ಜನವೈದಿದುದು ॥ ೨೨

ನಿಡು ಮುಡಿಯಲರ ವಾಸನೆ ಕರಕಮಲದೆ
ಪಿಡಿದ ಕಪ್ಪುರದ ವೀಳ್ಯಗಳ ।
ಕಡು ಪರಿಮಳ ದಿವ್ಯಾಂಗದ ಸೌರಭ್ಯ
ಬಿಡದೆ ದೆಸೆಯ ತುಂಬಿದುದು ॥ ೨೩

ಓಲಗ ಶಾಲೆಯ ರನ್ನ ಕುರುಜುಗಳ
ಸಾಲುಗಂಬಗಳ ಮರೆಯಲಿ ।
ಮೇಲಾದ ಮಣಿಯ ಬಿತ್ತಿಗಳೆಡೆಯಲಿ ಮುದ್ದು
ಬಾಲಕಿಯರು ರಾಜಿಸಿದರು ॥ ೨೪

ಆ ಸಮಯದಿ ದೇವತಾ ಸಾರ್ವಭೌಮ ಸಂ
ತೋಷದೆ ಸುರ ಮುನಿ ಪ್ರೇಮ ।
ಭಾಸುರ ಶುಭ ಮುಹೂರ್ತದ ವೇಳೆಯಲಿ ರಂ
ಗೇಶನೈತಂದನೋಲಗಕೆ ॥ ೨೫

ಶರಣಾಗತ ರಕ್ಷಾ ಮಣಿ ಸರ್ವೇಶ
ಪರ ಮಂಗಳ ಪುಣ್ಯ ಕಾಯ ।
ವರ ಲಕ್ಷ್ಮೀ ನರ ಸಿಂಹನೋಲಗ ಶಾಲೆ
ಗುರು ಮುದದಿಂದಲೈತಂದ ॥ ೨೬

ನೆಗಹಿದ ಸಾಲ ಸತ್ತಿಗೆ ಚಿತ್ರ ಪಟಗಳ
ಬಗೆ ಬಗೆ ವಾದ್ಯ ಘೋಷದಲಿ ।
ಅಘ ಹರ ನರ ಸಿಂಹ ರಂಗೇಶರಿರ್ವರು
ಸೊಗಸಿಂದಲೈತಂದರಾಗ ॥ ೨೭

ಕೊಂಡಾಡುವ ವೈಷ್ಣವ ಸಮುದಾಯದ
ತಂಡದ ತಾಳ ಘೋಷದಲಿ ।
ಪುಂಡರೀಕಾಕ್ಷರಿರ್ವರು ರತ್ನ ಪೀಠದೆ
ಮಂಡಿಸಿದರು ಹರುಷದಲಿ ॥ ೨೮

ಇತ್ತಲಾ ದೊರೆ ರಾಯನೋಲಗಕ್ಕೈತರು
ವರ್ತಿಯ ಶುಭ ಮುಹೂರ್ತಗಳ ।
ಹೊತ್ತನರಿದು ದಳ ಪತಿಗವಸರದರು
ಮತ್ತೆ ಬಿನ್ನೈಸಿದರಾಗ ॥ ೨೯

ಜೀಯ ಬಿನ್ನಹ ನರ ರೂಪ ಶ್ರೀ ನರಸಿಂಹ
ರಾಯ ಸಿಂಗರಿಸಿಯೋಲಗಕೆ ।
ಪ್ರಿಯದೆ ಚಿತ್ತೈಸುವ ವೇಳೆಯೆಂದವ
ರಾಯುತದೊಳಗುಸಿರಿದರು ॥ ೩೦

ಒಡನೆ ಬಿನ್ನೈಪವಸರದರ ಮನ್ನಿಸು
ತುಡುಗೊರೆ ವೀಳೆಯಗಳಲಿ ।
ಕಡು ಹರುಷದಲಿ ಸಿಂಗರ ಗೈದು ದಳ ಪತಿ
ಯೊಡೆಯನೋಲಗಕ್ಕೈತಂದ ॥ ೩೧

ಡಾಳಪ ಸೀಗುರಿ ಶುಭ್ರ ಚಾಮರಗಳ
ಮೇಳದೆ ಮಂತ್ರಿ ಮನ್ನೆಯರ ।
ಸಾಲ ಸಂದಣಿಯಲಿ ದಳ ಪತಿ ನರಸ ಭೂ
ಪಾಲನೋಲಗಕ್ಕೈತಂದ ॥ ೩೨

ರವಿ ರಶ್ಮಿಯ ಜರೆವಾಲವಟ್ಟಲುಗಳ
ಸು ವಿಲಾಸದ ನೆಳಲೊಳಗೆ ।
ತವೆ ಮೊಳಗುವ ವಾದ್ಯದೆ ಲಿಂಗ ರಾಜೇಂದ್ರ
ಭುವನೇಶನೆಡೆಗೈತಂದ ॥ ೩೩

ಬಿರುದಿನ ರಾಯ ರಾವುತ ಮಂಡಲಿಕರು
ಕರಣಿಕರಾಪ್ತ ಮಂತ್ರಿಗಳು ।
ಪರಿ ಪರಿಯಾಭರಣದ ಬಲು ಸುಭಟರ
ನೆರವಿಯೈತಂದುದೇ ವೇಳ್ವ ॥ ೩೪

ಸಿಂಗರಗೈದ ವಾರಾಂಗನೆಯರು ದಿವ್ಯ
ಮಂಗಳಾಷ್ಟಕದ ಗಾಯಕರು ।
ತುಂಗ ವಿಕ್ರಮನರಮನೆಯ ಬಾಗಿಲ ಹ
ರ್ಮ್ಯಾಂಗಣದೊಳಗೊಪ್ಪಿದರು ॥ ೩೫

ತರಣಿಯ ರಥದ ದಿವ್ಯಾಶ್ವಗಳನು ಜರೆ
ದುರು ವೇಗ ಗತಿಯ ತೋರಿಸುತ ।
ಬಿರುದಿನ ರಾಜ ವಾಜಿಗಳು ಸಿಂಗರಗೈದು
ನೆರೆ ಹರುಷದೆ ಬಂದುವಾಗ ॥ ೩೬

ಅನಿಮಿಷ ಪತಿಯೈರಾವತ ದಿಗ್ಗಜ
ದನುವ ಸೋಲಿಸಿ ನೆರೆ ಮೆರೆವ ।
ಘನ ಗಜ ನಿಕರ ಸಿಂಗರಗೈದು ಬಂದಾಗ
ಮನ ಹರುಷದೊಳೊಪ್ಪಿದುವು ॥ ೩೭

ಓಲಗದವರು ಪೊಂಟಿಗಾರರು ಬಲು
ಕಾಲಾಳ ಮೇಲಾಳ ಮೊತ್ತ ।
ಮೇಳದೆ ಬಂದರಮನೆಯ ಬಾಗಿಲ ದಿವ್ಯ
ಸಾಲ ಮಂಟಪದೊಳೊಪ್ಪಿದುವು ॥ ೩೮

ಅನಿತರೊಳಗೆ ವರ ಭೂಷಣಾನ್ವಿತನಾಗಿ
ಘನತರ ಮಂಗಳೋತ್ಸವದೆ ।
ಜನ ನಾಥ ಚೂಡಾ ಮಣಿ ಯರಮನೆಯಿಂದ
ಮನ ಹರುಷದೊಳೈತಂದ ॥ ೩೯

ನಲಿದು ವೇಂಕಟಪತಿ ಜಟ್ಟಿ ಕೈಲಾಗೀಯೆ
ಹೊಳೆವ ಪಲ್ಲಕ್ಕಿಯನೇರಿ ।
ಮೊಳಗುವ ಬಹು ವಾದ್ಯ ಘೋಷದೆ ಭೂಪಾಲ
ಕುಲ ಕಮಲಾರ್ಕನೈತಂದ ॥ ೪೦

ಡಾಳ ಡಮಾಮಿ ಡಾಳೈಸುವ ಪೀಗುರಿ
ಯಾಲವಟ್ಟಲ ಸಂದಣಿಯು ।
ಸಾಲ ಮುತ್ತಿನ ಸತ್ತಿಗೆಯು ನೆಳಲಿನಲಿ ಭೂ
ಪಾಲನೈತಂದನೋಲಗಕೆ ॥ ೪೧

ಮೆರೆವ ಮಕರ ಟೆಕ್ಕೆಯ ಶಂಖ ಚಕ್ರದ
ಬಿರುದಿನ ಸಾಲ ಧ್ವಜಗಳ ।
ಸಿರಿಯ ಸಂಭ್ರಮದಲಿ ನರಸ ರಾಜೇಂದ್ರ ಭೂ
ವರನೈತಂದನೋಲಗಕೆ ॥ ೪೨

ಸಲೆ ಬಿರುದುಗಳ ಕೈವಾರಿಕ ಪಾಠಕ
ರುಲುಹಿಂದ ಮಂಗಳಾಷ್ಟಕದ ।
ವಿಲಸಿತ ಜಯ ರವದೊಳಗೆ ಭೂಮಿಪ ಕುಲ
ತಿಲಕನೈತಂದನರ್ತಿಯಲಿ ॥ ೪೩

ಸಂದಣಿಸುತಲೈತಹ ನೋಟಕ ಜನ
ವೃಂದವನೆಡ ಬಲದೊಳಗೆ ।
ಚೆಂದದೆ ನಡಿಸುತ ಬರುವವಸರದರ
ಬಂದುರದುಲುಹೊಪ್ಪಿದುದು ॥ ೪೪

ಈ ಪರಿಯೊಳು ಬಹು ಸಂಭ್ರಮದೊಳಗಾ
ಶ್ರೀ ಪತಿ ಯೈದುವಂದದಲಿ ।
ಭೂಪಾಲ ಕುಲ ಕಲಶಾಬ್ಧಿ ಚಂದ್ರಮ ದಿವ್ಯ
ರೂಪನೈತಂದನೋಲಗಕೆ ॥ ೪೫

ದಳ ಪತಿ ಕೈಲಾಗುಗೊಡಲು ಪಲ್ಲಕ್ಕಿಯ
ನಿಳಿದೋಲಗ ಶಾಲೆಗೈದಿ ।
ಜಲಜಾಕ್ಷ ರಂಗೇಶ ನರ ಸಿಂಹರ ಪಾದ
ನಳಿನಗಳಿಗೆ ನಮಿಸಿದನು ॥ ೪೬

ತವೆ ಜಯ ಘೋಷಗಳಿಂದ ಕಂಠೀರವ
ಭುವನೇಶ್ವರನರ್ತಿಯಲಿ ।
ನವ ರತ್ನದ ಗದ್ದುಗೆಯಲಿ ಮಂಡಿಸಿ
ಸು ವಿಲಾಸದೊಳಗೆ ರಂಜಿಸಿದ ॥ ೪೭

ಅರಸಿನ ಸಮ್ಮುಖದೊಳಗೆ ಸಂತೋಷದೊ
ಳರತಕ್ಕ ಮಂತ್ರಿ ಮನ್ನೆಯರ ।
ನೆರೆ ವಿದ್ವಾಂಸರನವಸರದರು ಕರೆ
ದಿರಿಸಿದರಂತರವರಿತು ॥ ೪೮

ಊಳಿಗದವರ ಮನ್ನೆಯ ಮಂಡಲಿಕರ
ಮೇಲಾದ ರಾಯರಾವುತರ ।
ಸೂಳೆಯರುಗಳ ಪಾಠಕರ ತಂಡವ ಸಾಲು
ಸಾಲರಿತಿರಿಸಿದರಾಗ ॥ ೪೯

ಚಪ್ಪನ್ನ ದೇಶದ ಚೋದ್ಯ ವಿದ್ಯಾಧಿಕ
ರೊಪ್ಪುವ ನೋಟಕ ಜನದ ।
ತಪ್ಪದೆ ಸಾಲರಿದಂತರಾಂತರದೊಳ
ಗೊಪ್ಪವಿಟ್ಟರು ಮುದದಿಂದ ॥ ೫೦

ಬಡನುತ್ಸವದೋಲಗಕೆ ಸಂತೋಷದೆ
ನಡೆತಂದ ದೊರೆ ಮನ್ನೆಯರು ।
ಪೊಡವಿಪಾಲನಿಗೆ ಕಾಣಿಕೆಯಿಕ್ಕಿ ಕೈ ಮುಗಿ
ದೊಡನೊಪ್ಪಿದರು ಲೀಲೆಯಲಿ ॥ ೫೧

ಬಳಸಿದ ಗಡಿಯ ಮನ್ನೆಯರು ನಾಯಕರುಗ
ಳುಲುಪೆ ಪೊನ್ನಿನ ಜಾಳಗೆಯ ।
ಇಳೆಯಾಣ್ಮನಿಗೊಪ್ಪಿಸಿ ಕೈ ಮುಗಿದಾಗ
ಬಲು ಹರುಷದೊಳೊಪ್ಪಿದರು ॥ ೫೨

ಮಧುರೆ ತಂಜಾಪುರಿ ತೆಂಜಿ ರಾಯರ ಸಮ್ಮು
ಖದ ಮಂತ್ರಿ ನಿಕರವೈತಂದು ।
ಮದ ದಂತಿ ತೇಜಿ ಪೊನ್ನಾಭರಣವನಿತ್ತು
ಮುದದೊಳೊಪ್ಪಿದುದೇ ವೇಳ್ವ ॥ ೫೩

ಉಳಿದ ಕೊಡಗು ಕೊಂಕಣ ಮಲೆಯಾಳರು
ತುಳುವ ದೇಶದ ಮನ್ನೆಯರು ।
ಉಲುಪೆ ವಾಹನ ವಸ್ತುಗಳ ಕಾಣಿಕೆಯಿತ್ತು
ನಲಿದೊಪ್ಪಿದರೆಡ ಬಲದೆ ॥ ೫೪

ಕರಿಯ ಕುಂಭಸ್ಥಳಕಂಕುಶಗಳನೊತ್ತಿ
ಭರದಲಿ ನಡಿಸಿ ತಂದಾಗ ।
ನರಸೇಂದ್ರನಂಘ್ರಿಗೆ ನಮಿಸಿ ಜೋದರುಗಳು
ಹರುಷದೆ ಭಾರಿ ಮಾಡಿದರು ॥ ೫೫

ತುರಗಾರೋಹಕರೈತಂದು ಕುದುರೆಯ
ಬಿರುದಿನೇರಾಟವ ತೋರಿ ।
ದೊರೆ ರಾಯ ಕಂಠೀರವಗೆ ಕೈ ಮುಗಿದಾಗ
ಹರುಷದೆ ಭಾರಿ ಮಾಡಿದರು ॥ ೫೬

ಸೆಣಸಲಮ್ಮದೆ ಧನಗಳ ಕಾಣಿಕೆಯಿತ್ತ
ಬಣಗು ಭೂಪರ ಬಿಟ್ಟು ಬಂದು ।
ರಣಗಲಿಗಳು ಕಂಠೀರವೇಂದ್ರನ ಸೇರಿ
ಮಣಿದೋಲಗದೊಳೊಪ್ಪಿದರು ॥ ೫೭

ಆನೆಗಳನು ಕಾಣಿಕೆಗೊಟ್ಟು ಜಗಳವ
ನಾನಲಮ್ಮದೆ ಕಂಡ ನೃಪರ ।
ಏನೆಂಬೆ ವರ್ಜಿಸಿ ಸುಭಟರು ನರಸೇಂದ್ರ
ಭೂನಾಥನ ಸೇರಿದರು ॥ ೫೮

ಕುದುರೆಗಳನು ಕಾಣಿಕೆಗೊಟ್ಟು ಶರಣು ಹೊ
ಕ್ಕಧಮ ಭೂಪರ ಬಿಟ್ಟು ಬಂದು ।
ಕದನ ವಿಕ್ರಮ ಕಂಠೀರವೇಂದ್ರನ ಸಿರಿ
ಪದವನೋಲೈಸಿದರ್ ಭಟರು ॥ ೫೯

ಪಂಠಿಸಲವಳ್ಕದೆ ಧರೆಯನೊಪ್ಪಿಸಿ ಕೊಟ್ಟು
ಶುಂಠ ಭೂಪರ ಬಿಟ್ಟು ಬಂದು ।
ಬಂಟರಿಗಾರರು ರಿಪು ಭೂಮಿಪ ಗಜ
ಕಂಠೀರವನ ಸೇರಿದರು ॥ ೬೦

ದರುಶನ ಮಾತ್ರದೊಳಗೆ ಸಿರಿ ಪೌರುಷ
ವೆರಸುವುದೆಮಗೆಂದೆನುತ ।
ದುರ ಗಲಿ ನಾಯಕ ನಿಕರವೋಲೈಸಿತು
ನರಸ ರಾಜೇಂದ್ರ ಚಂದ್ರಮನ ॥ ೬೧

ಕೋಳ ತಂದೊಪ್ಪಿಸಿದವರಿಗೆ ಮನ ಮೆಚ್ಚಿ
ಮೇಲಾದ ದಗಲೆ ಭೂಷಣವ ।
ಲೀಲೆಯಿಂದೊಲಿದೀವ ನರಸ ರಾಜೇಂದ್ರನೆಂ
ದೋಲೈಸಿತು ಭಟ ನಿಕರ ॥ ೬೨

ಮತ್ತೆ ಮೂವತ್ತೆರಡಾಯುಧದ ಭಟರು
ಮೊತ್ತ ಮೊತ್ತದಲೈತಂದು ।
ಎತ್ತಿ ಕರಂಗಳ ಮುಗಿದು ಸಂಭ್ರಮದೊಳ
ಗಿತ್ತರದಲಿ ನಿಂದರಾಗ ॥ ೬೩

ದೊರೆ ರಾಯನ ಸಾರಿಯ ಮೋಳವೆಣ್ಣುಗ
ಳರೆ ನಾಲ್ಕು ದೆಸೆಯ ದೇಸಗಳ ।
ಬಿರುದಿನ ಗಣಿಕೆಯುಪ್ಪುರ ವರ ನಾರಿಯ
ರಿರದೆ ಸಿಂಗರಿಸಿಯೈದಿದರು ॥ ೬೪

ಬಟ್ಟ ವೊಲೆಯು ಬಡ ನಡುವಿನ ಸೊಸಲೊಳ
ಗಿಟ್ಟ ಕತ್ತುರಿಯು ತಿಲಕದ ।
ಸೃಷ್ಟಿಗೆ ನೂತನ ಪದ್ಮಿಸಿಯೈದಿದ
ಳ್ಪಟ್ಟಣದಬಳೆ ಹೊನ್ನಾಜೆ ॥ ೨೫

ಹೊಮ್ಮಿದ ವೊಳೆ ಹೊಗರೇರಿದ ಜೌವನ
ವೊಪ್ಮಾರು ಜಡೆಯು ಸೊಬಗಿನ ।
ಉಪ್ಮತ್ತೂರು ಗೌರಾಜಿ ಚಿತ್ತಿಸಿ ಬಲು
ಸುಪ್ಮಾನದೊಳೈದಿದಳು ॥ ೨೬

ಕನಕ ಲತೆಯುಕಾಂತಿಯು ಬೀರಿ ರಾಜಿಪ
ತನು ಸೊಬಗಿನ ಮುದ್ದು ವೊಗದ ।
ಮನಸಿಜನಾನೆ ಹಸ್ತಿನಿ ನಡೆತಂದಳು
ಚಿನಪಟ್ಟಣದ ಕೆಂಪಾಜಿ ॥ ೨೭

ಸೆಳ ನಡುವಿನ ಸೊಂಪುವಿಡಿದ ದಿವ್ಯಾಂಗದ
ಕಳಸ ಕುಚದ ಪೊರವಾರ ।
ನಳಿನ ದಳಾಕ್ಷಿ ಶಂಖಿನಿ ನಡೆ ತಂದಳು
ತಳಕಾಡ ಮರಿ ಕೆಂಪಿಯಾಗ ॥ ೨೮

ಸೋಗೆದುರುಬಿನ ಶೃಂಗಾರದಾಭರಣದ
ರಾಗವಿಡಿದ ತನುಲತೆಯು ।
ಪೂಗಣೆಯನ ಮಸೆದಲಗಿನಂತೆಸೆದಳು
ನಾಗಮಂಗಲದ ಚೆಲ್ವಾಜಿ ॥ ೨೯

ಬಿಡನುಟ್ಟ ಸಾಲಿಯು ನಿರಿಯೊಳಗಳವಟ್ಟ
ಕಡುಚೆಲ್ವ ಕಾಂಚಿಯು ದಾಮ ।
ಜಡೆ ತುಂಬಿದ ಪೂ ಸರದ ಪೂರ್ತಿಯು ಸಿದ್ದಿ
ಮಡದಿಯೈತಂದಳರ್ತಿಯಲಿ ॥ ೩೦

ವರ ಮೈಸೂರು ಬೆಟ್ಟದ ಪುರ ತ್ರಿಮಕೂಟ
ತೆರಕಣಾಂಬಿಯು ಕಣ್ವ ಪುರದ ।
ಪಿರಿಯ ಪಟ್ಟಣ ಯಾದವಾದ್ರಿ ನಂಜನ ಗೂಡ
ತರುಣಿ ರನ್ನೆಯರೈದಿದರು ॥ ೭೧

ಸೋಗೆ ಮುಡಿಯ ನೇವರಿಸಿ ಮೊಲೆಯ ಮೇಲೆ
ಸಾಗಿಸುತೆಸೆವ ಮುಂಜೆರಗ ।
ರಾಗದ ಸನ್ನೆ ನೋಟದ ಸವಿ ನುಡಿಗಳಿಂ
ದಾಗರುವೆಯರೈದಿದರು ॥ ೭೦

ಕೆಳದಿಯರುಗಳು ನೀಡುವ ಕರ್ಪೂರ ವೀಳ್ಯ
ಗಳಿಗೆಗೆ ತಮ್ಮ ನುಣ್ತುಬ್ರಳ ।
ಚಲುವಿಕೆ ಸಹ ರತ್ನದೂರ್ಮಿಕೆಗಳ ತೋರು
ತೆಳ ವೆಣ್ಗಳೈತಂದುವಾಗ ॥ ೭೩

ಸಣ್ಣ ನಿರಿಯನುಂಗುರ್ಗಳನೆ ನೇವರಿಸು
ತ್ತೆಣ್ಣೆ ಗಂಟುಗಳ ತಡಹುತ ।
ಬಣ್ಣ ದುಟಿಯ ಭಾವವ ಬೀರುತ ಮುದ್ದು
ವೆಣ್ಣುಗಳೈತಂದರಾಗ ॥ ೭೪

ಕಡೆಗಣ್ಣ ಸವಿನುಡಿ ನಿಡು ಹುಬ್ಬಿನ ಬೇಟ
ಬಡ ನಡು ಕಡು ನಿತಂಬಗಳ ।
ಬಿಡದೆ ಬಳುಕೆ ಕುಣಿಸುವ ಚೆಲ್ವಿನ ಮುದ್ದು
ಮಡದಿ ರನ್ನೆಯರೈದಿದರು ॥ ೭೫

ಕೆಂದಾವರೆಗಳ ಮುಗಿಸುತ ಚಾಳಕ
ವೃಂದವ ನಲವೇರಿಸುತ ।
ಚಂದ್ರಕಾಂತವ ಕರಗಿಸುತಾಗ ಪರಿಪೂ
ರ್ಣೇಂದು ವದನೆಯರೈದಿದರು ॥ ೭೬

ಮುಂಗುರುಳುಗಳ ಜಾಲದೆ ವಿಟರಕ್ಷಿಮೃ
ಗಂಗಳ ಸೋವಿ ತಂದಾಗ ।
ತುಂಗ ಕುಚಗಳಿರುಬಿನಲಿ ಸಿಲುಕಿಪರ
ನಂಗನ ಬೇಟೆ ಕಾತಿಯರು ॥ ೭೭

ಅಸಿಯ ನಡುವಿನ ನಿಮಿರ್ದ ಕುಚದ ಚೆಲ್ವ
ವಿಸಜದರಳ ಪರಿಮಳದ ।
ಎಸೆವ ದಿವ್ಯಾಂಗದ ಪದ್ಮಿನಿಯರು ರಂ
ಜಿಸುತ್ತೈತಂದರೇ ವೇಳ್ವ ॥ ೭೮

ಬಿಗಿದಡರಿದ ತೋರ ಕುಚ ಸಣ್ಣ ನಡುವಿನ
ಸೊಗಸಲಿ ಮೆರೆವ ತೆಳ್ವಸಿರ ।
ಮುಗುಳು ನಗೆಯ ಬೀರುತ ಶಂಕಿನಿಯರು
ಮಿಗೆ ರಾಜಿಸಿದರೋಲಗದೆ ॥ ೭೯

ಎಳ ಲತೆಯೊಲ್ ಮಿಗೆ ಬಳುಕುವ ದಿವ್ಯಾಂಗ
ಪುಳಿನ ಜಘನ ಸುಳಿಗುರುಳ ।
ಜಲಜ ಕುಟ್ಮಲದಂತೆ ರಾಜಿಪ ಮೊಲೆಗಳ
ಚೆಲುವ ಹಸ್ತಿನಿಯರೊಪ್ಪಿದರು ॥ ೮೦

ತೋರ ಕುಚದ ತೋರ ದುಟಿ ತೋರ ದುರುಬಿನ
ತೋರಿದ ಮೊಲ್ಲವಿರುಗಳ ।
ನೂರ ಕೇಳಿಗೆ ಮನ ದಣಿಯದ ಚಿತ್ತಿನಿ
ನಾರಿಯರೆಸೆದರತಿಯಲಿ ॥ ೮೧

ಅಲಘು ನಿತಂಬದ ಚರಣ ಪಲ್ಲವಗಳ
ಕೆಳಗೊಂಡ ವೇಣಿ ವಲ್ಲರಿಯ ।
ನೆಳೆ ಮೊಲೆಗಳ ಬಿಣ್ಪಿನ ಬೆಡಗಿನ ಚೆಲ್ವ
ತಿಲುಗು ನಾರಿಯರೊಪ್ಪಿದರು ॥ ೮೨

ಉರ ತುಂಬಿ ಮೆರೆವ ಕಂಚುಕ ಕಾಲ ಕುಪ್ಪಸ
ಮಿರುಗ * ದುಪ್ಪಟದ ನಿರಿಗಳ ।
ಸು ರುಚಿರ ಶೃಂಗಾರವಾಭರಣದ ಚೆಲ್ವ
ತುರುಕ ನಾರಿಯರೊಪ್ಪಿದರು ॥ ೮೩

ಜಘನವನಳೆವ ನಿರಿಗಳ ಹಿಂಗೆಜ್ಜೆಯು
ಬಗಸೆಗಂಗಳ ತೋರ ಮೊಲೆಯು ।
ಸೊಗಸುವ ವಾರೆದುರುಬಿನ ಸೌಂದರ್ಯದ
ತಿಗುಳ ನಾರಿಯರೊಪ್ಪಿದರು ॥ ೮೪

ಮಿಸುನಿಯು ಜೀವ ಪುತ್ತಳಿಗಳಂದದೆ ರಂ
ಜಿಸುವ ದಿವ್ಯಾಂಗ ಸುಂದರದ ।
ಹೊಸ ದುಪ್ಪಟ ಗಾಸೆಯು ಮಲೆಯಾಳದ
ಶಶಿ ಮುಖಿಯರು ರಾಜಿಸಿದರು ॥ ೮೫

ಬಡನೆ ಕಿವಿಯೊಳೊಪ್ಪುವ ತೊಂಬೆಗಡುಕಿನ
ಕಡು ಚೆಲ್ವ ಪೂರವಾರ ಗಿರಿಯು ।
ಬಡ ನಡುವಿನ ಬಟ್ಟ ಕುಚದ ಸೌಂದರಿಯುದ
ಕೊಡಗಿತಿಯರು ರಾಜಿಸಿದರು ॥ ೮೬

ತುಳುವ ಕೊಂಕಣ ನಾನಾ ಬಗೆ ದೇಶದ
ನಳಿನಾಕ್ಷಿಯರು ಸಿಂಗರಿಸಿ ।
ಇಳೆಯಾಣ್ಮ ನರಸ ರಾಜೇಂದ್ರನೋಲಗದಲಿ
ಬಲು ಸಂಭ್ರಮದೊಳೊಪ್ಪಿದರು ॥ ೮೭

ಇಂತೊಪ್ಪುತಿಹ ವಾರಾಂಗನೆಯರ ಬಲು
ತಿಂತಿಣಿ ಸಾಲ್ವಿಡಿದಾಗ ।
ಕಂತು ಸನ್ನಿಭ ನರಸೇಂದ್ರನೋಲಗದೊಳು
ಸಂತೋಷದೊಳೊಪ್ಪಿದರು ॥ ೮೮

* ದುಪ್ಪಟದ.

ಆ ಸಮಯದೆ ಜಟ್ಟಿಗಳು ಜೋಡು ಜೋಡಲಿ
ರೋಷಾವೇಶದೊಳಾಗ ।
ಘೋಷಿಸಿ ನೆಗೆದು ಭುಜ ಸ್ಫೋಟನೆಗೈದು
ವಾಸಿ ಪಂಥದೆ ನಿಂದರೊಡನೆ ॥ ೮೯

ಕರ ಕಮಲದೆ ವಜ್ರ ಮುಷ್ಟಿ ಮಸ್ತಕದೊಳು
ಮೆರೆವ ಕುಂಕುಮ ರಜದಿಂದ ।
ಕೊರಳ ಪೂ ಮಾಲೆ ಕಸ್ತೂರಿ ಲೇಪನದ ಮಲ್ಲ
ರುರುವೆಣಿಸಿದರಾಹವಕೆ ॥ ೯೦

ಚರಣ ಹತಿಗೆ ಬಿರಿಯಲು ಭೂಮಿ ಭೋ ಯೆಂ
ದುರಗ ಬಂಧದಲಿ ತಕ್ಕೈಸಿ ।
ಪರಿ ಪರಿ ಕೌಶಲಗಳ ಮುಷ್ಟಿ ಗಾಯದ
ನೆರೆಗಲಿ ಮಲ್ಲರೊಪ್ಪಿದರು ॥ ೯೧

ಗಳ ಹತ್ತು ಡೊಕ್ಕರ ತಳ ಮೇಲು ಪೈಸರ
ಸುಳಿವು ವಂಚನೆ ಪತನದಲಿ ।
ಅಳವಟ್ಟ ಗಾಯ ಗಾಯಕೆ ಕನ್ನೀರ್ಗಳು
ತುಳುಕೆ ಹೋರಿದರೇನೆಂಬೆ ॥ ೯೨

ಬಿಗಿವ ಬಿಡಿಸಿಕೊಳ್ವ * ತಗೆವ ತವಕಿಸುವ
ನೆಗೆವ ನಿಗುರಿ ಯೊಳಸರಿವ ।
ಲಗಡಿನಂತೆರಗಿ ಲಾಗಿಸುವ ಹೋರಾಟದ
ವಿಗಡ ಮಲ್ಲರುಗಳೊಪ್ಪಿದರು ॥ ೯೩

ಶಿರವುರ ಕಂಠ ಕಪೋಲ ವಕ್ಷಸ್ಥಳ
ದುರವಣಿಸುವ ಗಾಯಗಳ ।
ಸುರಿವ ಕಣ್ಣಿಡಿಗಳ ಮೇಲು ನಿಶ್ಶ್ವಾಸದ
ಬಿರುದಿನ ಮಲ್ಲರೊಪ್ಪಿದರು ॥ ೯೪

* ತವಗ ತವಕಿಸುವ.

ಇಂತಪ್ಪ ಮಲ್ಲರು ನೂರಾರು ಜೋಡಲಿ
ಪಂತದೊಳಗೆ ಕಾದುತಿರಲು ।
ಕಂತು ಸನ್ನಿಭ ಕಂಠೀರವೇಶ್ವರ ಬಲು
ಸಂತೋಷವ ತಾಳಿದನು ॥ ೯೫

ಸೋಲು ಗೆಲವುಗಳನರಿತು ಮಲ್ಲರುಗಳ
ಕಾಳಗವನು ಬೇಗ ಬಿಡಿಸಿ ।
ವೀಳಯವುಡುಗೊರೆಗೊಡುತಿರೆ ಡೊಂಬರ
ಮೇಳದಾಟಗಳೊಪ್ಪಿದುವು ॥ ೯೬

ಲಘು ಲಾಗು ಲಂಘನೆಯೊಳು ಗಳ ಮಿಳಿಯುಲಿ
ಯಗಣಿತರಹ ಡೊಂಬರುಗಳು ।
ಬಗೆ ಬಗೆಯಾಟವ ತೋರಿ ಯಾಸ್ಥಾನವ
ಮಿಗೆ ಮೆಚ್ಚಿಸಿದರೇ ವೇಳ್ಯ ॥ ೯೭

ತಗರ ಕಾಳಗ ಮದ ಕರಿಗಳ ಹೋರಾಟ
ವಿಗಡದ ಪುಲಿ ಕರಡಿಗಳ ।
ಬಿಗಿ ನೇಣ ಪರಿದು ಕಾದುವ ವೀರರ ಮೊತ್ತ
ಸೊಗಸ ಬೀರಿದುದೋಲಗದೆ ॥ ೯೮

ಇಂತಪ್ಪ ವೇಳೆ ಪಶ್ಚಿಮ ಕಾಂತೆ ರವಿಯೊಳು
ಕಂತು ಕೇಳಿಯುನೆಸಗುವೊಡೆ ।
ಸಂತತ ಸಂಜೆಯಾಳಿಯುನಟ್ಟಿ ಕರಿಸಲು
ಮುಂತಾಗ ದಿನಪನೈದಿದನು ॥ ೯೯

ಕಿರಣಾಳಿ ರವಿಯೈದಿದೊಸಗೆಯ ಪಶ್ಚಿಮ
ತರುಣಿಗೆ ಬಿನ್ನೈಸಲಾಗ ।
ಹರುಷದೆ ಮುತ್ತಿನ ಸೇಸೆದಳೆದವೊಲು
ಮೆರೆದುವು ಸಂಜೆದಾರೆಗಳು ॥ ೧೦೦

ನಲಿದು ನೀಲಾಬ್ಜನಿ ತನ್ನಯ * ಸಖಿಯರ
ಸಲೆ ಬಹ ಶಶಿಗಿದಿರಾಗಿ ।
ಕಳಹಲ್ಕೈದುವವೊಲು ಕತ್ತಲೆ ಭೂಮಿಯ
ಬಲು ತವಕದೆ ಪಸರಿಸಿತು ॥ ೧೦೧

ಶಶಿ ತನ್ನ ವಂಶದರಸು ಮಹ ನವಮಿಯೊ
ಳಸೆವುತ್ಸವವ ನೋಳ್ಪೆನೆಂದು ।
ಪೊಸ ಕೌಮುದಿಯಾಳ್ಗೂಡಿ ಬಂದೊಲು ಕಾಂತಿ
ವಿಸರದೊಳುದಿಸಿದನಾಗ ॥ ೧೦೨

ತನ್ನೊಳೊಗೆದ ಸಿರಿ ನರಸೇಂದ್ರಗೆ ಮೆಚ್ಚಿ
ಮನ್ನಣೆಯೊಳಗಿಹಳೆಂದು ।
ಮುನ್ನ ಪಾಲ್ಗಡಲು ನೋಡುವೊಡೈತಂದೊಲು
ಜೊನ್ನವೊಪ್ಪಿತು ಪೂರ್ಣ ಶಶಿಯು ॥ ೧೦೩

ಸರಸಿಜ ಸಖನ ದೀಧಿತಿ ಕೋಟಿ ರೂಪಲಿ
ನರಸ ರಾಜೇಂದ್ರನೋಲಗದ ।
ಸಿರಿಯ ಸಂಭ್ರಮವ ನೋಡುವೊಡೈತಂದೊಲು
ಮೆರೆದುವು ದೀಪ ಕಾಂತಿಗಳು ॥ ೧೦೪

ದೊರೆ ರಾಯನೋಲಗದೊಳಗೆ ರಾಜಿಸುತಿಹ
ಪರಿಪೂರ್ಣೇಂದು ಮುಖಿಯರ ।
ನೆರೆ ಬೆಳ್ಳಗೆ ಜೊನ್ನದುರುಳಿಗಳೆಂದೆನೆ
ಮೆರೆದುವು ಚಂದ್ರ ಜ್ಯೋತಿಗಳು ॥ ೧೦೫

† ಅಳಿಗುರುಳಬಲೆಯರ್ಸುಳಿಯೆ ಭೇರೀ ತ್ರಯ
ಗಳ ನಿರ್ಘೋಷ ನಾದಗಳ ।
[ಬಳೆದ ಕೋಲಾಹಲ ದಶ ದಿಕ್ತಟಗಳ
ಬಳಸಿ ಕೊಂಡುದು ತೀವ್ರದಿಂದ] ॥ ೧೦೬

* ದೂತಿಯರ.

† ಅಳಿಗುರುಳಬಲೆಯರ್ಸುಳಿಯೆ ಭೇರೀ ತ್ರಯ । ಗಳ ನಿರ್ಘೋಷ ನಾದಗಳ ॥ ಭಾಸುರ ರವವಾಕಾಶವ ಬಲು ಪರಿ । ತೋಷದೆ ಮುಸುಕಿದುವಾಗ ॥

[ಬೀಸುತೆ ಕೈಯನುದ್ಘೋಷಿಸಿ ಮಂದಿಗ
ಳಾ ಸಮಯವನು ಸೂಚಿಸುವ] ।
ಭಾಸುರ ರವವಾಕಾಶವ ಬಲು ಪರಿ
ತೋಷದೆ ಮುಸುಕಿದುದಾಗ ॥ ೧೦೭

ಬಿಗಿದುಟ್ಟ ಸಾಲಿಯ ನಿರಿ ಮೊಲೆ ಕಟ್ಟಿನ
ಝಗಝಗಿಸುವ ಭೂಷಣದ ।
ಬಗುಮಿಗೆ ಹರುಷದೆ ಸೊಗಸುಗಾತಿಯರಾಗ
ನಗುತ ಕೋಲಾಟಕ್ಕೈದಿದರು ॥ ೧೦೮

ತಾಳ ಮದ್ದಳ ವಾರ ನಾರಿಯರ ಸಂಗೀತ
ಮೇಳದೊಳಗೆ ಜತೆಗೂಡಿ ।
ಸೋಲಿಸುತಚ್ಚರಿಯರ ಮೋಹಿ ಪೆಣ್ಗಳು
ಕೋಲಾಟಕ್ಕೈತಂದರಾಗ ॥ ೧೦೯

* ಮೆರೆಯಲೊಡ್ಯಾಣದ ಪೊಂಗೆಜ್ಜೆಗಳ ದನಿ
ವರ ರತ್ನವೆರೆದ ಕೋಲುಗಳ ।
ಕರದೊಳು ಪಿಡಿದು ಮುಂಭಾಗದೆ ಪಾಡುತ
ಪಿರಿದು ಸಂಭ್ರಮವ ಬೀರಿದರು ॥ ೧೧೦

† ಬಗಸೆಗಣ್ಣಳ ಡಾಳ ಬೀರುತ ಮುದದೆ ಕೋ
ಲುಗಳನು ಪೊಯ್ಯುವಬ್ಬರಕೆ ।
ಮಿಗೆ ಮೇಲುದು ಜಾರೆ ಪೊಂಗೊಡ ಮೊಲೆಗಳು
ಸೊಗಸ ಬೀರಿದುವು ನೋಳ್ಪರಿಗೆ ॥ ೧೧೧

---

* ಮೆರೆವ ವಡ್ಯಾಣದ ಪೊಂಗೆಜ್ಜೆಗಳ ದನಿ । ನವ ರತ್ನವೆರೆದ ಕೋಲುಗಳ ॥
ಅನುವಿನಿಂ ಪಿಡಿದು ದೊರೆಯ ಮುಂಬಾಗದೆ । ಪಾಡುತ ರಾಗವ ಪಿರಿದು
ಸಂಭ್ರಮವ ಬೀರಿದರು ॥

† ಬಗಸೆಗಣ್ಣಳ ಡಾಳ ಬೀರುತ ಮುದದೆ । ರನ್ನದ ಕೋಲ್ಗಳ್ಪೊಯ್ಯ
ಅಬ್ಬರಕೆ ॥
ಮೇಲ ಮೇಲುದು ಜಾರೆ ಪೊಂಗೊಡ ಮೊಲೆಗಳು । ಸೊಗಸ ಬೀರಿದುವು
ನೋಳ್ಪರಿಗೆ ॥

ಪೊಳೆವ ಮುತ್ತಿನ ಮೊಲೆಕಟ್ಟು ಸುವರ್ಣದೋಲ್
ತಳತಳಿಪ ಪೀತಾಂಬರದ ।
ಉಲಿವ ಮೃದಂಗ ಪಾಠಕರ ಗಾಯನದಿಂದ
ಲಲನೆಯರನುವಾದರಾಗ ॥ ೧೧೨

ಬಿರುದಿನ ತಾಳ ಮದ್ದಳೆ ಸಂಗೀತದ
ಪರಿಪೂರ್ಣರವ ಮೋಹಿಸಲು ।
ಚಲುವೆ ನರ್ತನದ ಪೆಣ್ಗಳು ಸಭಾಸ್ಥಳವ ಮ
ರುಳುಗೊಳಿಸಿದರೇನೆಂಬೆ ॥ ೧೧೩

ಕಟಿಗೊಂದಿದ ಕರ ಕಮಲವೆಂಗುಷ್ಠದ
ನಟನೆಯ ಮುಯ್ಯೊಲೆಪ್ಪುಗಳ ।
ಸುಟಿಯೊಳಾವರ್ತ ತಿರುಪುಗೊಂಡು ನಾಟ್ಯವ
ಪಟುಗೊಳಿಸಿದರೇ ವೇಳ್ವ ॥ ೧೧೪

ತದ್ಧಿತ್ತೈ ತದಿಗಿಣ ತದ್ಧಳಾಂಗುಗಳೆಂಬ
* ಶುದ್ಧ ಗಾಯಕವರ ಗತಿಗೆ ।
ಶುದ್ಧಾಂಗದ ಗೆಜ್ಜೆ ಮೆಟ್ಟಿನ ಗತಿಗಳಿಂ
ಮುದ್ದು ವೆಣ್ಣುಗಳಾಡಿದರು ॥ ೧೧೫

ಗಿಳಿಯು ಕಟ್ಟಳೆ ಸೋಗೆ ನವಿಲಾಟ ಹಂಸೆಯೆ
ಬಳಗಳ ಗತಿ ಗಂಡು ವೇಷ ।
ಗಳ ಬಗೆ ಬಗೆಯಭಿನಯ ವಿಲಾಸಗಳಿಂದ
ತಲೆದೂಗಿಸಿದರು ಸಭೆಯ ॥ ೧೧೬

ಬಂದು ದೆಸೆಯೊಳೆಂದ್ರಜಾಲವ ತೋರುವ
ಮೆಂದಿ ಬೈರೂಪದಾಟಗಳ ।
ಸಂದಣಿ ಹಾಸ್ಯ ರಸಗಳಿಂದ ಮೆರೆದುದ
ದಂದಿನಸಭೆಯುತ್ತಿಯಲಿ ॥ ೧೧೭

* ಗಾಯಕ ನಟುವರ ಗತಿಗೆ.

ಹರಿಯು ದಶಾವತಾರದ ನಾಟಕವ ತೋರಿ
ಮೆರೆವ ಭಾಗವತರ ಚೆಂದ ।
ನರಸ ರಾಜೇಂದ್ರ ಚಂದ್ರಮನೋಲಗದಲಿ
ಪರಿ ಶೋಭಿಸಿದುದೇ ವೇಳ್ವ ॥ ೧೧೮

ತುಂಬುರಾದಿಗಳಂತೆ ಗಾನವ ಪಾಡುವ
* ತುಂಬಿದ ವಿದ್ವಾಂಸರುಗಳು ।
ಇಂಬಾಗಿ ಘನ ಕೃತಿಗಳ ಪಾಡಿ ಸಭೆಗಾ
† ಡಂಬರಗೊಳಿಸಿದರಾಗ ॥ ೧೧೯

ವೀಣೆಯ ವಾದಿಪ ವಿದ್ವಾಂಸರುಗಳು
ಜಾಣತನದೆ ವೀಣೆವಿಡಿದು ।
ವಾಣಿಯು ಪ್ರತ್ಯೇಕದೆ ಪಾಡುವಂತಾಗ
ಕ್ಷೋಣಿಪನನು ಮೆಚ್ಚಿಸಿದರು ॥ ೧೨೦

ಸು ಲಲಿತ ಲಕ್ಷ್ಯ ಲಕ್ಷಣ ಕಾವ್ಯ ನಾಟಕ
ಸಲೆಯಲಂಕಾರಶೋಭಿತದೆ ।
ಬಲು ಪದ್ಯ ಪದ ಕೃತಿ ಬಂಧವ ನಡಿಸುತ
ಸಲೆ ಜಾಣ ಕವಿಗಳೊಪ್ಪಿದರು ॥ ೧೨೧

ಭಾರತ ರಾಮಾಯಣಗಳ ಸಂಗೀತ
ಸಾರದೊಳಗೆ ನಲಿದೋದಿ ।
ಭೂರಿ ವೈಭವದಿಂದ ಸಭೆಗತಿ ಮುದವೀವ
ಭಾರತಿಗಳು ರಂಜಿಸಿದರು ॥ ೧೨೨

ಧರಣೀಶ್ವರನೋಲಗವ ನೋಡಲು ಮಿಗೆ
ಸುರ ವೆಂಗಳಂಬರದಿಂದ ।
ಕರೆಸ ಸಂಪಿಗೆಯರಳ್ಮಳೆಯೆಂಬಂದದೆ
ಸುರಿವ ಪೂಗಳು ರಾಜಿಸಿದುವು ॥ ೧೨೩

* ಸಂಗೀತವಿದ್ವಾಂಸ. † ನಂದವಗೊಳಿಸಿದರಾಗ.

ನರ ರೂಪ ನರಸಿಂಹನೋಲಗವನು ನೋಳ್ಪ
ಡುರಗೇಂದ್ರ ಧರೆಯನುಚ್ಚಳಿಸಿ ।
ಬರುವ ಸಂಭ್ರಮದಂತೆ ಬಿರಿಸು ಬಾಣಗಳಾಗ
ಮೊರೆದ ಸಂಭ್ರಮವನೇ ವೇಳ್ವ ॥ ೧೦೪

ನರೆ ಕರ್ಣಾಟಕ ಚಕ್ರೇಶನೆಂಬುದ
ಧರೆಗೆ ಪ್ರತ್ಯಕ್ಷ ತೋರ್ಪಂತೆ ।
ಮೊರೆದು ದೀಧಿತಿಗೂಡಿ ಚಕ್ರ ಬಾಣಗಳಂ
ದರಸನೋಲಗದೊಳೂಪ್ಪಿದವು ॥ ೧೦೫

ಧರಣೀಶ್ವರನ ಪ್ರತಾಪ ಚೌ ದೆಸೆಯಲಿ
ಮೊರೆವೊಡೆ ಕೋಟಿ ರೂಪಾಗಿ ।
ಪರಿ ಶೋಭಿಪ್ಪೊಲು ಸೂತ್ರಗಂಭ ಬಾಣಗಳುರೆ
ಪರಿವ ಸಂಭ್ರಮವನೇನೆಂಬೆ ॥ ೧೦೬

ಶಶಿ ಮುಖಿಯರು ಸಮ್ಮುಖದಲಿ ಪಿಡಿದಿಹ
ಮಿಸುನಿಯ ದೀವಟಿಗೆಗಳ ।
ಪೊಸ ಕರ್ಪುರದ ತೈಲದ ದಿವ್ಯ ವಾಸನೆ
ಮುಸುಕಿತಾಕಾಶ ಮಂಡಲವ ॥ ೧೦೭

ಪೊಡವಿಪ ಕಂಠೀರವೇಂದ್ರನೋಲಗದ ಬ
ಲ್ಪಡಗರಗಳನೆಂಟು ದೆಸೆಗೆ ।
ಬಿಡದೆ ಸಾರುವವೊಲು ಗಳಿಯಾರ ಜಾಗಟೆ
ನಡೆದ ಗಳಿಗೆಯ ಪೇಳದುವು ॥ ೧೦೮

ಆ ಸಮಯದೆ ಜ್ಯೌತಿಷಿಕರೈತಂದು ವಿ
ಲಾಸದೆ ನೃಪನ ಸಮ್ಮುಖದೆ ।
ಬಾಸುರ ಗಳಿಗೆಯೆಂಟಾದುದೆಂದುರೆ ಬಿ
ನ್ನೈಸಿದರೇನ ಬಣ್ಣಿಸುವೆ ॥ ೧೦೯

ಪಿರಿದು ಕರ್ಪೂರ ವೀಳೆಯವುಡುಗೊರೆಗಳ
ದೊರೆಯು ಸಮ್ಮುಖದ ಮಂತ್ರಿಗಳು ।
ಕರೆದಂತರಪರಿದಿತ್ತೋಲಗವನು
ಹರುಷದೆ ಬೀಳ್ಕೊಟ್ಟರಾಗ ॥ ೧೩೦

ಹರಿಗೆ ವಂದಿಸಿ ತೀರ್ಥ ಪ್ರಸಾದವ ಕೊಂಡು
ಪರಮೋತ್ಸವ ಮಿಗಲಂದು ।
ದೊರೆ ರಾಯ ಸರ್ವ ಸಂಭ್ರಮದೊಳಗಂತಃ
ಪುರಕ್ಕೈದಿದನೇ ವೇಳ್ಯ ॥ ೧೩೧

ಇಂತಪ್ಪೋಲಗವೆಂಟು ದಿವಸ ಪರಿ
ಯಂತರ ಸಕಲ ಸಂಭ್ರಮದೆ ।
ಸಂತೋಷವ ಸರ್ವ ಜನಕೆ ಬೀರುತಲ
ತ್ಯಂತ ಸೌಖ್ಯದೊಳೊಪ್ಪಿಮುದು ॥ ೧೩೨

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಗೆಯು ಸಂಧಿ
ಮುದದ ಸುಧರ್ಮಾನುಬಂಧಿ ॥ ೧೩೩

೨೧ನೆಯ ಸಂಧಿ ಸಮಾಪ್ತಂ.

# ಇಪ್ಪತ್ತೆರಡನೆಯ ಸಂಧಿ

## ವಿಜಯ ದಶಮಿಯ ಜಂಬು ಸವಾರಿ.

ಸೂಚನೆ|| ನೆರೆ ಮಹಾ ನವಮಿಯುತ್ಸವ ಪೂಜೆ ಭೂಪನ
ಪಿರಿದು ಸವಾರಿ ವರ್ಣಿಸುವೆ ||

ಬಳಿಕೊಂಭತ್ತನೆಯಾದಿನದೆ ಚಂಡಿಕಾ
ಲಲನೆಯ ನವ ಲಕ್ಷ್ಮಿಯರ ।
ವಿಲಸಿತೋತ್ಸವ ಪೂಜೆಗೆ ಶುಭ ಲಗ್ನವ
ಸಲೆ ಜೋಯಿಸಿಗರುಸಿರಿದರು ॥ ೧

ರಾಮಣೀಯಕವಾಗೆ ರಾಜಿಸುತಿಹ ಚೆಲ್ವ
ಭೂಮೀಶ್ವರನರಮನೆಯ ।
ಆ ಮಹಾ ಚಿತ್ರ ಸುಂದರ ಶಾಲೆಯ ಸು
ಪ್ರೇಮದೆ ಸಿಂಗರಿಸಿದರು ॥ ೨

ಪನ್ನೀರ ಚಳೆಯ ಕಸ್ತೂರಿಯ ಸಾರಣೆ ಮುತ್ತಿ
ನುನ್ನತ ರಂಗವಲ್ಲಿಗಳ ।
ಸನ್ನಾಹಗೊಳಿಸಿ ಕುಂಕುಮದ ಕಾರಣೆಗಳ
ಚೆನ್ನಾಗಿ ಮಿಗೆ ರಚಿಸಿದರು ॥ ೩

ಪವಳದ ಕುಚ್ಚು ಮುತ್ತಿನ ಸಾಲು ಗೊಂಚಲು
ನವರತ್ನ ಖಚಿತವ ಲೋವೆ ।
ಶವ ಶಿವಿಸುವ ಮಿಸುನಿಯ ಪೇಲು ಕಟ್ಟಿಗ
ಳ್ಭವನದೊಳಗೆ ರಂಜಿಸಿದುವು ॥ ೪

ಮೆರೆವ ನಾನಾ ಬಗೆ ಫಲವಸ್ತ್ರ ಮಂದಾರ
ದರಳ ದಿವ್ಯ ಮಾಲೆಗಳ ।
ಪರಿಶೋಭಿಸಿದುವಾಯುಧ ಪೂಜೆಯು ಚೆಲ್ವ
ಸುರುಚಿರಾಸ್ಥಾನ ಮಂಟಪದಿ ॥ ೫

ಕಜ್ಜಳವಿಡುವ ಕನ್ನಡಿಯು ನೋಡುವ ಮಿಗೆ
ಸಜ್ಜಕ ಸರಗಳ ಮೆರೆದಿವೆ ।
ಪಜ್ಜಳಿಸುವ ಪುತ್ತಳಿಗಳಾ ಭವನದ
ವಜ್ರ ಭಿತ್ತಿಯೊಳೊಪ್ಪಿದುವು ॥ ೬

ಅನಿತರೊಳಗೆ ಮಂತ್ರಿ ಮನ್ನೆಯರೊಡಗೂಡಿ
ಜನ ಪತಿ ಕಂಠೀರವೇಂದ್ರ ।
ಘನವಾದ ದಿವ್ಯಾಯುಧಗಳ ಜಲ ಕೇಳಿ
ಗನುಗೊಳಿಸುವೊಡೈತಂದ ॥ ೭

ಕಂಗೊಳಿಸುವ ರನ್ನದ ಪಲ್ಲಕ್ಕಿಯೊ
ಳ್ಮಂಗಳ ವಾದ್ಯ ಘೋಷದಲಿ ।
ತುಂಗ ವಿಕ್ರಮನ ದಿವ್ಯಾಯುಧಗಳ ತಂದು
ಸಂಗಡಿಸಿದರರ್ತಿಯಲಿ ॥ ೮

ದುರದೊಳಗಿದಿರಾದ ವೈರಿ ರಾಯರ ಗರ್ವ
ಗಿರಿ ಶಿಖರವ ಕಂಡಿಸುವ ।
ವರ ವಜ್ರ ದಂಡದಂದದಲಿ ಭೂ ಪಾಲನ
ಸು ರುಚಿರ ಖಡ್ಗವೊಪ್ಪಿದುದು ॥ ೯

ಆಜಿಗೊದಗಿದರಿ ಭಟರೆದೆ ಗರುಳ ಸ
ಮೂಜವ ತೆಗೆದು ಬೇಗದಲಿ ।
* ರಾಜಿಪ ಭೂತಕೆ ರಣ ಮಾಲೆಯಿಕ್ಕುವೊ
ಲ್ಕೇಜೆಯುವೊಪ್ಪಿತು ನೃಪನ ॥ ೧೦

* ರಾಜಿಪ ರಣ ಭೂತಕ್ರಾನ ಮಾಲೆ.

ಉಕ್ಕಂದದೊಳಗೈದುವ ಧರಣೀಶರ
ಸೊಕ್ಕ ಮುರಿದು ಜಯ ಸಿರಿಗೆ ।
ಇಕ್ಕುವೆ ರನ್ನಗುಂಡಲದಂತೆ ಸಿಂಗಾಡಿ
ಯಕ್ಕರೊಳಸೆದುದೇನೆಂಬೆ ॥ ೧೧

ಬವರವ ಬಯಸಿ ಬಂದರಿ ರಾಯರುಗಳೆಂಬ
ನವ ಧವಳೇಕ್ಷು ದಂಡವನು ।
ತವಕದೆ ಹೀರಿ ಹಿಪ್ಪೆಯ ಮಾಡಿಯುಗುಳುವ್ರೊ
ಜ್ಞವದಾಡೆಯೊಪ್ಪಿತು ನೃಪನ ॥ ೧೨

ಪೊಡವಿಪ * ನೀನೆನ್ನನವರತವು ಕೈಯ
ಹಿಡಿದು ಸಲಹ ಬೇಕೆಂದು ।
ಕಡು ತವಕದೆ ಸೇರಿದಾಯುಧ ಸಿರಿಯೊಲು
ಬಿಡದೊಪ್ಪಿದುದು ದಿವ್ಯ ಸುರಗಿ ॥ ೧೩

ಸೊಕ್ಕಿದ ರಿಪು ಭೂಮಿಪರುದರವ ಬಗಿ
ದುಕ್ಕುವ ಬಿಸಿ ರಕ್ತ ಜಲವ ।
ಗಕ್ಕನೆ ಹೀರಿ ಮೆರೆದು ತಳ ತಳಿಸುವ
ಚಿಕ್ಕ ಕಠಾರಿಯೊಪ್ಪಿದುದು ॥ ೧೪

ಧಾರಿಣಿಯೊಳು ರಿಪು ಗಜ ಮಸ್ತಕಾಗ್ರಕೆ
ಪಾರಿ ಮಿದುಳ್ಗಳನುಗಿವ ।
ವೀರ ಪಂಚಾನನದುಗುರಂದದೆ ಕರಾ
ಚೂರಿಯೊಪ್ಪಿದುದವನಿಪನ ॥ ೧೫

ಸುರಗಿ ಸಬಳ ಕೈಯಿಟ್ಟ ಶೃಂಗಾರದ
ತರಕಸದುಂಬಿದಂಬುಗಳ ।
ಮೆರೆದುದು ಸಂಭ್ರಮ ಜಲ ಕೇಳಿಗೈದುವ
ಸಿರಿಯ ನಾನೇನ ಬಣ್ಣಿಸುವೆ ॥ ೧೬

* ನಿನ್ನನ್ನವರತವು.

ಬಳಿಕ ಚೌದೆಸೆಯರಿ ನೃಪರ ಗರ್ವವ ನೆಗ್ಗಿ
ಸೆಳೆದು ತಂದಖಿಳಾಯುಧಗಳ ।
ತಳ ತಳಿಸುವ ದಂಡಿಗೆಗಳ ಮೇಲಿಟ್ಟು
ಜಲ ಕೇಳಿಗನುಗೊಳಿಸಿದರು ॥ ೧೭

ವಾಮ ಗರುಡನಂಬರ ಮಾರ್ಗದೆ ಬಂದು
ಭೂಮಿ ಪಗತಿ ಶುಭೋದಯವ ।
ರಾಮಣೀಯಕವಾಗಿ ಸೂಚಿಸಿ ಚರಿಸುವ
ಪ್ರೇಮವನೇನ ಬಣ್ಣಿಪೆನು ॥ ೧೮

ಪಟ್ಟು ಬರಹ ಚೀನಾಂಬರಗಳ ಬೆನ್ನೊ
ಳಟ್ಟಿಗ ಗಜ ತುರಗಗಳು ।
ಕಟ್ಟೈಸಕದೊಳಗಣಿತ ಜಲ ಕೇಳಿಗೆ
ತೊಟ್ಟೈತಂದುವರ್ತಿಯಲಿ ॥ ೧೯

ಗಣನಾಥ ಪೂಜೆ ಗಂಗಾ ಪೂಜೆ ಶಸ್ತ್ರವಾ
ರಣ ವಾಜಿಗಳ ಪೂಜೆಯನು ।
ಕ್ಷಣದಲಿ ರಚಿಸಿಯಾಯುಧಕಭಿಷೇಕವ
ನಣಿಯಾರದಲಿ ಮಾಡಿದರು ॥ ೨೦

ಪರಿಮಳ ಗಂಧಾಕ್ಷತೆ ನೂತನ ಪುಷ್ಪ
ವೆರಸಿ ಪಲ್ಲಕ್ಕಿಯ ಮೇಲೆ ।
ನರಸೇಂದ್ರನ ದಿವ್ಯಾಯುಧ ಮೆರೆದು ಬಂ
ದುರದೆ ಮಂಟಪಕ್ಕೈದಿದುವು ॥ ೨೧

ನೊಸಲ ಗಂಧಾಕ್ಷತೆ ಕಂದರದೊಳಗಿಹ
ಮಿಸುನಿ ಜಡೆಗಳು ಪೂ ಮಾಲೆ ।
ಪೊಸ ಬಗೆ ಶೃಂಗಾರದ ದಿವ್ಯ ವಾಜಿ
ಪ್ರಸರಗಳೈತಂದುವಾಗ ॥ ೨೨

ಕುಂಭ ಸ್ಥಳಕೆ ಪೂಸಿದ ಕುಂಕುಮ ಗಂಧ
ತುಂಬಿದ ಕೊರಳ ಪೂ ದಂಡೆ ।
ಇಂಬಿನ ಗಂಧಾಕ್ಷತೆಯು ನೊಸಲ ಮದ
ಕುಂಭಿಗಳ್ಕೈತಂದುವಾಗ ॥ ೨೩

ಹರಿಯು ನೇಮದಲಿ ದಿವ್ಯಾಯುಧ ಪೂಜೆಯ
ನರನರ್ತಿಯಲಿ ಮಾಳ್ಪಂತೆ ।
ಸಿರಿಯರಸನ ಕೃಪೆಯಲಿ ಶಸ್ತ್ರ ಪೂಜೆಯ
ವಿರಚಿಸಿದನು ಭೂಪಾಲ ॥ ೨೪

ನವ ರತ್ನ ಖಚಿತ ಮಂಟಪದೊಳು ರಾಜಿಸು
ವವಿರಳ ದುಗುಲ ವಾಸಿನಲಿ ।
ತವಕದೆ ಕೈದುಗಳಿಂಬಿಟ್ಟು ದುರ್ಗಾಸ್ತ್ರ
ವವ ಜಪಿಸಿದನೇ ವೇಳ್ಯ ॥ ೨೫

ಮೊಳಗುವ ಮಂಗಳ ವಾದ್ಯ ಘೋಷದೊಳಂದು
ಬಲಿ ಪುಷ್ಪ ಧೂಪ ದೀಪದಲಿ ।
ನಲಿದು ಭೂ ಸುರರಾಗ ಚಂಡಿಕಾ ದೇವಿಯ
ಸಲೆ ಪ್ರಸನ್ನತೆಯ ಮಾಡಿದರು ॥ ೨೬

ಕದಳಿಯ ಫಲ ನಾಳಿಕೇರ ಖರ್ಜೂರಗ
ಳ್ಮೃದವಿಡಿದಿಕ್ಷು ದಂಡಗಳ ।
ಮೆದೆ ಮೆದೆ ಯಾಗಿ ಸಾಲ್ಗೊಳಿಸಿ ನೈವೇದ್ಯವ
ಪದುಳದೊಳೊಲಿದು ಮಾಡಿದರು ॥ ೨೭

ಖಂಡ ಸಕ್ಕರೆ ಚಿಲುಪಾಲು ಗಾರಿಗೆ ವಡೆ
ಮಂಡಿಗೆ ಕಜ್ಜಾಯಗಳ ।
ತಂಡ ತಂಡದೆ ರಾಸಿ ಗೈದು ನೈವೇದ್ಯವ
ಚಂಡಿಕಾಂಬಿಕೆಗರ್ಪಿಸಿದರು ॥ ೨೮

ಹೆಸರ ಕಿಚಡಿ ಶಾಲ್ಯಾನ್ನ ಸದ್ಯೋಘೃತ
ಹಸನಾದ ದೋಸೆ ಯುಂಡಲಿಗೆ ।
ಪೊಸ ತಾಳದ ಪಾನ ಸೀಕರಣೆ ಪನ್ನೀರ
ನೊಸೆದರ್ಪಿಸಿದರಂಬಿಕೆಗೆ ॥ ೨೯

ಗಜ ಲಕ್ಷ್ಮಿ ಹಯ ಲಕ್ಷ್ಮಿ ಯಾಯುಧ ಲಕ್ಷ್ಮಿಯರ್
ನಿಜವಾದ ದಾನ ಲಕ್ಷ್ಮಿಯರ ।
ಭುಜ ಲಕ್ಷ್ಮಿ ಸೌಭಾಗ್ಯ ಸಿರಿ ಕೀರ್ತಿ ಲಕ್ಷ್ಮಿಯು
ಭಜಿಸಿ ಪ್ರತ್ಯಕ್ಷ ಗೈಸಿದರು ॥ ೩೦

ಶಾರದ ಲಕ್ಷ್ಮಿ ಸಾಮ್ರಾಜ್ಯ ಲಕ್ಷ್ಮಿಯು ಭಕ್ತಿ
ಸಾರದೊಳಗ ಪೂಜೆ ಮಾಡೆ ।
ಧಾರಿಣೀಶ್ವರ ಕಂಠೀರವೇಂದ್ರನ ಮೆಚ್ಚಿ
ಸೇರಿದರ್ನವ ಲಕ್ಷ್ಮಿಯರು ॥ ೩೧

ಮಂಗಳಾರತಿಗಳು ಮುದ್ದು ಕೋಲಾಟಗಳ್
ಸಂಗೀತ ಸಕಲ ಭೋಗಗಳು ।
ಹಿಂಗದೊಪ್ಪಿದುವಾಯುಧ ಮಂಟಪದ ದಿ
ವ್ಯಾಂಗಣದೊಳಗೇನೆಂಬೆ ॥ ೩೨

ಒಡನೋಲಗದಲಿ ನೆರೆದಿಹ ಪರಿವಾರ
ಕಡುಗಲಿ ಸುಭಟ ಮನ್ನೆಯರು ।
ಬಿಡದೆ ಪಣ್ಫಲ ಕಜ್ಜಾಯ ರಾಶಿಯ ಪೊತ್ತು
ಸಡಗರದೊಳ್ಗೈದಿದರು ॥ ೩೩

ತುರಗ ಗಜಾವಳಿ ಚಂಡಿಕಾ ದೇವಿಗೆ
ಹರುಷದೆ ಕಾಣಿಕೆ ಗೈದು ।
ವರವ ಪಡೆದು ಕಂಠೀರವೇಶ್ವರನಂ
ದರ ಮನೆಗೈತಂದನಾಗ ॥ ೩೪

ಬಳಿಕ ಭೋಜನ ಶಾಲೆಯಲಿ ಬಂಧುಗಳು ಕೂಡಿ
ನಲಿದಾರೋಗಣೆ ಮಾಡಿ ।
ಜಲಜಾಕ್ಷನಂದದೆ ನರಸ ರಾಜೇಂದ್ರ ಭೂ
ಲಲನೇಶನೊಪ್ಪಿದನಾಗ ॥ ೩೫

ಬಳಿಕ ಕಂಠೀರವ ರಾಜ ಸಂತೋಷವ
ತಳೆದಂದಿನ ರಾತ್ರಿಯಲಿ ।
ನಳಿನ ನಾಭನ ದಿವ್ಯ ಮೂರ್ತಿಯ ಧ್ಯಾನದೆ
ನಲಿದೊಪ್ಪಿದನೇ ವೇಳ್ಯ ॥ ೩೬

ತರಣಿ ಭೂಪಾಲ ತಮದ ಮೇಲೆ ದಾಳಿಯ
ಭರದೊಳಗೈದಬೇಕೆಂದು ।
ಕಿರಣ ಸೈನ್ಯದೆ ಸಾರ್ವ ಡಂಗುರ ರವವೆನೆ
ಚರಣಾಯುಧಗಳುಲಿದುವು ॥ ೩೭

ಹರುಷದೆ ಪೂರ್ವ ವನಿತೆ ರವಿಯೊಳು ಭೋಗ
ವೆರೆವೊಡೆ ಮಜ್ಜನ ಗೈದು ।
ಧರಿಸಿದ ಮಾಂಗಲ್ಯ ಕುಂಕುಮವೆನಲಾಗ
ಳರುಣೋದಯ ರಂಜಿಸಿತು ॥ ೩೮

ನೆರೆದರು ಬಳಿಕುಪ್ಪವಡಕೆ ಪಾಡುವ
ತರುಣಿಯರ್ತಾಳ ದಂಡಿಗೆಯ ।
ಕರದೊಳು ತಳೆದು ಕಂಠೀರವೇಂದ್ರನ ಚೆಲ್ವ
ನೆರೆ ರನ್ನ ಸೆಜ್ಜೆ ವಾಗಿಲೊಳು ॥ ೩೯

ಮಧುರ ಧನ್ಯಾಸಿ ಭೂಪಾಳಿ ಗುಂಡಕ್ರಿಯೆ
ಯೊದವಿದ ದೇಸಾಕ್ಷಿ ಯೆನಿಪ ।
ಉದಯ ರಾಗದಲಿ ಭೂ ವರನಂಕ ಮಾಲೆಯ
ಸುದತಿ ರನ್ನೆಯರು ಪಾಡಿದರು ॥ ೪೦

ಏಳರಿ ರಾಯ ಪರ್ವತ ಕುಲಿಶಾಯುಧ
ಶ್ರೀ ಲೋಲ ಚರಣಾಬ್ಜ ಭೃಂಗ |
ಬಾಲೆಯರಕ್ಷಿ ಚಕೋರ ಚಂದ್ರಮ ಪೂರ್ವ
ಶೈಲಕ್ಕೆ ರವಿ ಬಂದನೇಳು || ೪೧

ತುರಗಾರೋಹಣ ರೇವಂತ ಜಯ ಸಿರಿ
ಗರಸ ಸನ್ಮೋಹನ ಸರಸ |
ಗುರು ಕುಚೆಯರಿಗೆ ನೂತನ ಮನಸಿಜ ರೂಪ
ದೊರೆ ರಾಯ ನಲಿದುಪ್ಪವಡಿಸ || ೪೨

ಲೀಲೆಯಿಂ ಪಿಡಿದ ಮಂತ್ರಾಕ್ಷತೆ ಫಲ ವಸ್ತು
ಜಾಲ ಸಹಿತ ಭೂ ಸುರರು |
ಓಲಗಕ್ಕೈದಿದರರ್ಘರಕೆಯ ಕೈಗೊಳ್ಳೊ
ಡೇಳು ಚನ್ನಿಗ ನರಸೇಂದ್ರ || ೪೩

ಮೂಡಣ ದೆಸೆಯರಸುಗಳು ನಿನ್ನಯ ಶೌರ್ಯ
ರೂಢಿಗೆ ಕಂಗೆಟ್ಟಾಗ |
ಕೂಡೆ ಕಳುಹಿದ ಕಪ್ಪದ ಧನ ಬಂಡಿಯೊಳ್
ಹೂಡಿ ಬಂದಿದೆ ನೋಡೇಳು || ೪೪

ತೆಂಕಣ ದೊರೆಗಳು ನಿನ್ನ ಪರಾಕ್ರಮ
ದಂಕೆಗೆ ಭಯ ಪಡುತಾಗ |
ಮುಂಕೊಂಡು ಕಾಣಿಕೆಯಿತ್ತಾನೆಗಳು ಬಂದು
ಬಿಂಕದೊಳಿವೆ ನೋಡೇಳು || ೪೫

ಪಶ್ಚಿಮದವನಿಪರಂಜಿ ಶರಣು ಹೊಕ್ಕು
ಮಚ್ಚರವನು ಬಿಟ್ಟಾಗ |
ಉಚ್ಚವದೊಳಗಿತ್ತ ನವ ರತ್ನ ಭೂಷಣ
ಪೆಚ್ಚಿ ಬಂದಿವೆ ನೋಡೇಳು || ೪೬

ಉತ್ತರದವನಿ ಪಾಲಕರು ರಣದೆ ಸೋತು
ಮತ್ತಾಗ ಕಾಣಿಕೆಯಿತ್ತ ।
ಮೊತ್ತದ ತೇಜಿಗಳೈದಿವೆ ನೋಡೇಳು
ವೃತ್ತಮಾಶ್ರಿತ ಕಲ್ಪ ಭೂಜ ॥ ೪೭

ತಳ ತಳಿಸುವ ಭೂಷಣದ ಮನ್ನೆಯರುಗ
ಳಳವಟ್ಟ ಸಂದಣಿಯೊಳಗೆ ।
ದಳ ಪತಿ ಹರುಷದಿಂದೋಲೈಸುವರೀಗ
ತಳುವದೈತಂದು ನೋಡೇಳು ॥ ೪೮

ಊಳಿಗದವರು ವ್ರೊಂಟರಿಗಾರರು ಬಲು
ಮೇಳದ ರಾಯ ರಾವುತರು ।
ಓಲಗ ಶಾಲೆಗೈತಂದರು ಮನ್ನಿಪ್ರೊ
ಡೇಳು ಭೂಭುಜ ಕುಲ ಚಂದ್ರ ॥ ೪೯

ದಿಕ್ಕು ದಿಕ್ಕಿನ ರಾಯ ಭೂರಿಗಳೊಡನಾಗ
ಳಕ್ಕರು ಮಿಗೆ ಹರುಷದಲಿ ।
ಲೆಕ್ಕವಿಲ್ಲದ ಮಂತ್ರಿಗಳಿದೆ ನೋಡೇಳು
ಸಕ್ಕರೆ ಬಿಲ್ಲನ ರೂಪ ॥ ೫೦

ಆ ಗಾನದೊಡನುಲಿದುವು ನೆರೆ ದೀಹದ
ಕೋಗಿಲೆ ರಾಜ ಕೀರಗಳು ।
ರಾಗದೆ ಕಂಠೀರವೇಂದ್ರನ ಕಿವಿಗಿಂ
ಪಾಗಲದೇನ ಬಣ್ಣಿಸುವೆ ॥ ೫೧

ಉರಗ ತಲ್ಪದೆ ಶ್ರೀ ಹರಿ ಮೈ ಮುರಿದೇಳ್ವ
ತೆರದಿಂದ ನರಸ ರಾಜೇಂದ್ರ ।
ಭರದೊಳುಪ್ಪವಡಿಸಿದನು ಕರ ಪದ್ಮದ
ಸಿರಿ ರೇಖೆಯನೀಕ್ಷಿಸುತ ॥ ೫೨

ನವ ರತ್ನ ಖಚಿತದಾಯುಧವನು ಪಟ್ಟದ
ಯುವತಿಯ ಮುಖ ಸರಸಿಜವ ।
ತವೆ ಹರ್ಷದೊಳ್ನಿಟ್ಟಿಸುತಪ್ಪವಡಿಸಿದ
ಭುವನೇಶ ಕಂಠೀರವೇಂದ್ರ ॥ ೫೩

ಆ ಸಮಯದೆ ದರ್ಪಣ ಮಂಗಳಾರತಿ
ಭೂ ಸುರ ದ್ವಯ ಕಪಿಲೆಗಳು ।
ಲೇಸಿನೊಳದಿರೊಳೊಪ್ಪಿರೆ ನೋಡಿ ಮಣಿ ಮಂಚ
ವಾಸಿಂದವಿಳಿದನೇ ವೇಳ್ವ ॥ ೫೪

ನೆರೆ ರನ್ನದಂಬಿಗೆಯೊಳು ದಿವ್ಯ ಜಲವನು
ತರುಣಿಯೊರ್ವಳು ಸೂಸಲಾಗ ।
ಸಿರಿ ಪದ ಯುಗ ಕರ ಮುಖವ ಪ್ರಕ್ಷಾಳಿಸಿ
ಧರಣೀಶ ಮೆರೆದನರ್ತಿಯಲಿ ॥ ೫೫

ಪಜ್ಜಳಿಸುವ ನವ ರತ್ನದ ಬಿತ್ತಿಯು
ಬಜ್ಜರದಧಿಕ ಲೋವೆಗಳ ।
ಸಜ್ಜುಕ ಸರದ ಪೋಲ್ಕಟ್ಟಲಿ ರಾಜಿಪ
ಮಜ್ಜನ ಶಾಲೆಗೈತಂದ ॥ ೫೬

ಸರಸಿಜ ನೇತ್ರಗೆ ಸಿರಿ ಸತ್ಯ ಭಾಮೆಯರ್
ಪಿರಿದು ಮಜ್ಜನಕೆರೆದಂತೆ ।
ಧರಣೀಶನ ಸಿರಿ ಮುಡಿಗಾಗ ನಾರಿಯರ್
ನೆರೆ ಪನಿ ನೀರ ಸೂಸಿದರು ॥ ೫೭

ಪೀತಾಂಬರ ವೈದಿಲ ಸೆರಗಿನೊಳೊರ್ವ
ಜಾತಿ ನಾಯಕಿ ಹರುಷದಲಿ ।
ಪ್ರೀತಿಯಿಂ ಸಿರಿ ಮುಡಿ ಭದ್ರ ಕಾಯವ ಬಲು
ರೀತಿಯೊಳೊಲಿದೊರಸಿದಳು ॥ ೫೮

ಕಂಗೊಳಿಸುವ ಪಟ್ಟೆಯ ದೋತ್ರ ನೆರೆ ದಿ
ವ್ಯಾಂಗದೊಳಗೆ ಬಹಿರ್ವಾಸ ।
ರಂಗು ಮಾಣಿಕದ ಕುಲಾಯಿ ಭೂ ಪಾಲಗೆ
ಮಂಗಳೋತ್ಸವದೊಳೊಪ್ಪಿದುವು ॥ ೫೯

ನವ ರತ್ನದ ಹಾವುಗೆಯೊರ್ವ ಭಾವಕಿ
ತವಕದೆ ಪದಕಳವಡಿಸೆ ।
ಭುವನೇಶ ಚಿಂತಾ ಮಣಿ ನಾಮ ತೀರ್ಥದ
ಭವನಕ್ಕೈತಂದನರ್ತಿಯಲಿ ॥ ೬೦

ಘನವಾದ ಮಣಿ ಮಯ ಪದ್ಮ ಪೀಠದೊಳಾಗ
ಜನ ನಾಥ ಚೂಡಾ ರತ್ನ ।
ಮನ ಹರುಷದಲಿ ಮಂಡಿಸಿ ಕಸ್ತೂರಿ ನಾಮ
ವನು ಪಣೆಗಳವಡಿಸಿದನು ॥ ೬೧

ಬಳಿಕ ಸಂಧ್ಯಾ ವಂದನೆ ಮೊದಲಾಗಿಹ
ಸುಲಲಿತ ನಿತ್ಯ ಕೃತ್ಯಗಳ ।
ಇಳೆಯಾಣ್ಮ ವಿರಚಿಸಿ ಘನ ಹರುಷದೊಳಾಗ
ನಳಿನ ನಾಭನ ಪೂಜಿಸಿದ ॥ ೬೨

ಶ್ರೀ ಪತಿ ಧರ ಗೋ ಪತಿ ಕಮಲಜ ನುತ
ತಾಪ ತ್ರಯ ಸಂಹಾರ ।
ಪಾಪ ವಿದೂರ ಪಾವನ ಮೂರ್ತಿ ಮಂಗಳ
ರೂಪನ ಸರ್ವೇಶ ಶರಣು ॥ ೬೩

ಕಮಲಾಕ್ಷ ಕಾರುಣ್ಯ ನಿಧಿ ಯಾನತ ರಕ್ಷ
ದ್ಯು ಮಣಿ ಸಹಸ್ರ ಸಂಕಾಶ ।
ಸುಮನೋ ನಮಿತ ಪದಾಬ್ಜ ಪಂಕಜ ನಾಭ
ರಮೆಯರಸನೆ ಪಾಲಿಸೊಲಿದು ॥ ೬೪

ನರ ಸಿಂಹನೆಂಬ ನಾಲ್ಕಕ್ಷರವಾದನ
ಸು ರುಚಿರ ಜಿಹ್ವಾಗ್ರದೊಳಗೆ ।
ಹರುಷದೆ ನೆಲಸಿರಲವನೈಶ್ವರಿಯಕ್ಕೆ
ಸರಿಯುಂಟೆ ಮೂ ಲೋಕದಲಿ ॥ ೬೫

ದೇವ ಬ್ರಾಹ್ಮಣರಿಗೀವೆಡೆಯಲಿ ಚಂಚಲ
ಧೀವೃತ್ತಿಯಾಗದಂದದಲಿ ।
ತೀವಿದ ಸ್ಥಿರ ಬುದ್ಧಿಯನೀಯಬೇಕೆಂದು
ಭಾವಜ ಪಿತನ ಧ್ಯಾನಿಸಿದ ॥ ೬೬

ಸಲೆ ನರ ಸಿಂಹನ ತೀರ್ಥ ಪ್ರಸಾದವ
ವಿಲಸಿತ ಭಕ್ತಿಯೊಳ್ವರಿಸಿ ।
ನಲಿದು ಭೂ ಸುರರಿಗೆ ನಿತ್ಯ ದಾನವ ಮಾಡಿ
ನಲವುದಾಳಿದ ಭೂಮಿ ಪಾಲ ॥ ೬೭

ಪಿರಿದು ಮಂತ್ರಾಕ್ಷತೆ ಫಲ ವಸ್ತುಗಳ ಭೂ
ಸುರರಿತ್ತು ಪರಸೆ ಕೈಕೊಳುತ ।
ವರ ಶುಭ ಲಗ್ನದೆ ಚಂಡಿಕಾಂಬೆಯ ಪೂಜೆ
ಗರಸನೈತಂದನರ್ತಿಯಲಿ ॥ ೬೮

ಬಳಿಕಾಗ ಮರು ಪೂಜೆಯ ಚಂಡಿಕಾಂಬೆಗೆ
ನಲಿದು ಮಾಡಿಸಿ ನರಸೇಂದ್ರ ।
ಬಲವಿಂದ ಕೈದೆತ್ತಿ ಕೂಶ್ಮಾಂಡ ಫಲವನು
ಸಲೆ ಖಂಡಿಸಿದನರ್ತಿಯಲಿ ॥ ೬೯

ವರ ದಳ ಪತಿ ಮನ್ನೆಯ ಮಂಡಲಿಕರ
ಕರಣಿಕರಾಪ್ತಮಂತ್ರಿಗಳ ।
ಹರುಷದೆ ಮನ್ನಿಸಿ ಸಾರಿಗೆ ಬರವೇಳ್ದು
ತೆರಳಿದನರ ಮನೆಗಾಗ ॥ ೭೦

ಪುರದ ಬಹಿರ್ಭಾಗದ ಪೂರ್ವ ದೆಸೆಯುಲಿ
ಪಿರಿದಪ್ಪ ಶಮಿಯ ಮಂಟಪವ ।
ಪರಿ ಪರಿಯುಲಿ ಬಹು ಸಿಂಗರ ಗೈಸಿದ
ಧುರ ಧೀರ ಲಿಂಗೆಯ ಗೌಡ ॥ ೨೧

ಮೇಲು ವರಿವ ಜಲ್ಲಿ ಪಟ್ಟೆಯ ಮೇಲ್ಕಟ್ಟು
ಸಾಲುಗೊಂಡೆಸೆವ ಪೂ ಮಾಲೆ ।
ಲೀಲೆಯೊಳಳವಟ್ಟ ಶಮಿಯ ಮಂಟಪದೊಳು
ಡಾಳಿಸಿದುವು ಚೆಲ್ವಿನಿಂದ ॥ ೨೨

ನವ ರತ್ನದ ಗೋಡೆ ರದದ ಕುರಾಡಗ
ಳವಿರಳ ಫಲ ವಸ್ತುಗಳ ।
ಧವಳೇಕ್ಷು ದಂಡ ರಂಭಾ ಸ್ತಂಭವಾ ದಿವ್ಯ
ಭವನಗಂಭಗಳೊಳೊಪ್ಪಿದುವು ॥ ೨೩

ಧಾರಿಣೀಶ್ವರನರಮನೆ ಬಾಗಿಲಿಂ ಜಂಬಿ
ಸಾರಿ ಮಂಟಪ ಪರಿಯಂತ ।
ಮೇರೆ ಯಿಲ್ಲದ ರತ್ನ ತೋರಣ ಕುರುಜುಗಳ್
ಸೇರಿ ಕಟ್ಟಿದುವರ್ತಿಯುಲಿ ॥ ೨೪

ಮೆರೆವ ಮುತ್ತಿನ ರಂಗ ವಲಿ ದಿವ್ಯ ಪರಿಮಳ
ವೆರದಿಹ ಪನ್ನೀರ ಚಳಯ ।
ಪುರ ವೀಧಿಯಿಂದೊಂದು ಯೋಜನ ಪರಿಯಂತ
ಪರಿ ಶೋಭಿಸಿದುವೇ ವೇಳ್ವ ॥ ೨೫

ಬಳಕ ಚೌ ದೆಸೆಯ ದೇಶವ ನೋಟಕ ಜನ
ಸುಲಲಿತ ಶೃಂಗಾರದಿಂದ ।
ಇಳೆಯಾಣ್ಮನ ಸಾರಿಯುತುಲ ಸಂಭ್ರಮವ ನೋ
ಡಳವಟ್ಟು ಸಂದಣಿಸಿದರು ॥ ೨೬

ಅರ ಮನೆ ಬಾಗಿಲ ಬಳಿಯಿಂದ ಪುರ ವೀಧಿ
ಹೊರ ವಳಯದ ಜಂಬಿ ಸಾರಿ ।
ಸು ರುಚಿರ ಮಂಟಪ ಪರಿಯಂತ ಜನರು ಕಿ
ಕ್ಕಿರಿದೊಪ್ಪಿದರು ಸಂಭ್ರಮದೆ ॥ ೭೭

ವರ ಮಂಟಪದ ಸುತ್ತ ಯೋಜನದೊಳಗಾಗ
ಳರುಹೆ ನುಸುಳಲಿಂಬುಗೊಡದೆ ।
ಮೆರೆದುದು ನೋಟಕ ಜನವಾ ಸಾರಿಯ
ಪರವೋತ್ಸವವನೇನೆಂಬೆ ॥ ೭೮

ಒಡನಾಗ ಶುಭ ಲಗ್ನದೆ ಸರ್ವ ಸಂಭ್ರಮ
ವಿಡಿದಾ ಶಮಿಯ ಮಂಟಪಕೆ ।
ಕಡು ತವಕದೆ ರಂಗ ನಾಥ ಶ್ರೀ ನರಸಿಂಹ
ರೊಡನೈದಿದರರ್ತಿಯಲಿ ॥ ೭೯

ಬಳಿಕಿತ್ತಲಿಳೆಯಧಿಪನ ನೇಮದೊಳಾಗ
ದಳ ವಾಯಿ ಲಿಂಗ ರಾಜೇಂದ್ರ ।
ಪಲ ಬಗೆಯಲಿ ಸಿಂಗರಿಸಿ ಸಾರಿಗೆ ಬಹ
ಚೆಲುವನದೇನ ಬಣ್ಣಿಸುವೆ ॥ ೮೦

ಮುಂತೆ ಸಿಂಗರದ ಮನ್ನೆಯ ಮಂಡಲಿಕರ
ತಿಂತಿಣಿ ಸಹಿತ ಸಂಭ್ರಮದೆ ।
ಕಂತು ಸನ್ನಿಭನಡೆಗಂದಾಗ ದಳ ಪತಿ
ಸಂತೋಷದೊಳ್ಳೈತಂದ ॥ ೮೧

ನೊಸಲ ಕತ್ತುರಿಯ ತಿಲಕ ದಿವ್ಯ ಭೂಷಣ
ವೆಸೆಯೆ ದುವ್ವಟಗಳನಾಂತು ।
ವಸುಧೇಶ್ವರನೋಲಗಕಾಗ ಮನ್ನೆಯ
ವಿಸರವೈತಂದುದರ್ತಿಯಲಿ ॥ ೮೨

ಸಾರಿಯು ಸನ್ನೆಯು ರಾಯ ಭೇರಿಯು ರವ
ಪೂರೈಸಿ ತುಡುಕೆ ದಿಕ್ತಟವ ।
ಮೇರೆ ಯಿಲ್ಲದ ಚತುರಂಗ ಸಂನಾಹ ಶೃಂ
ಗಾರದೊಳೈತಂದುದಾಗ ॥ ೮೩

ಶರಧಿಯ ತೆರೆ ಮಾಲೆಯುರವಣೆಗೊರೆಯಾಗಿ
ತುರಗದ ನೆರವಿಯೈತರಲು ।
ಬಿರುದಿನ ಕರಿಗಳು ಸುರುಚಿರಾಭರಣದೆ
ಮೆರೆದೊಡನೈತಂದುವಾಗ ॥ ೮೪

ದೊರೆ ರಾಯ ನರಸರಾಜೇಂದ್ರ ಸಿಂಗರಗೈದು
ಪರವೋತ್ಸವದೊಳಗಾಗ ।
ಹರುಷದೊಳಗೆ ಜಂಬಿ ಸಾರಿಗೈತರುತಿಹ
ಸಿರಿಯ ಸಂಭ್ರಮವನೇ ವೇಳ್ವ ॥ ೮೫

ಕೊಂಡಾಡುವ ಪಾಠಕಾಳಿಯ ರವ ಭೂ
ಮಂಡಲವನು ಪೂರೈಸೆ ।
ಚಂಡ ವಿಕ್ರಮನುತ್ತಮಾಶ್ವವ ನಗುತ ಮುಂ
ಕೊಂಡೇರಿದನರ್ತಿಯಲಿ ॥ ೮೬

ಮುತ್ತಿನ ಸತ್ತಿಗೆ ಮಕರ ತೆಕ್ಕೆಯ ಮದ
ವೆತ್ತ ಮಿಸುನಿಯಾಲವಟ್ಟ ।
ಬಿತ್ತರವಹ ಸಾಲ ನೆಳಲೊಳು ನಗುತ ಭೂ
ಪೋತ್ತಮ ನಡೆದನರ್ತಿಯಲಿ ॥ ೮೭

ಮಿಸುನಿಯ ಹಡಪ ಚಾಮರ ಕುಂಚ ಕಾಳಾಂಜಿ
ಪೊಸ ವಟ್ಟೆಯ ಪಾವಡೆಯ ।
ಜಸವಟ್ಟೊಳಗದವರ ಮೇಳದೊಳಾಗ
ವಸುಧೇಶ ಸಾರಿಗೈದಿದನು ॥ ೮೮

ಮೊರೆವ ನಾನಾ ಬಗೆ ವಾದ್ಯ ಡಮಳ ಶಂಖ
ಬಿರುದಿನ ವೆಟು ಪಾವಡೆಯು ।
ಸುರುಚಿರವಹ ಡಾಲುಗಳ ಸಂಭ್ರಮದಲಿ
ನರಸ ರಾಜೇಂದ್ರನೈತಂದ ॥ ೮೯

ಆನೆಯ ಮೇಲೆ ರಾಜಿಸುವ ಡಮಾಮಿಗ
ಳಾನಂದದ ರವಮೆಸೆಯೆ ।
ಭೂ ನಾಥ ಕಂಠೀರವ ನರಸೇಂದ್ರ ಸು
ಮ್ಮಾನದೆ ಸಾರಿಗೈದಿದನು ॥ ೯೦

ದಳವಾಯಿ ಚಂದ್ರಮ ಮನ್ನೆಯರುಗಳ ಸಂ
ಕುಳಗೂಡಿ ತೇಜಿಯನೇರಿ ।
ಇಳೆಯಾಣ್ಮ ನರಸ ರಾಜೇಂದ್ರನ ಪಿಂತಾಗ
ಲಳವಟ್ಟು ನಡೆದನರ್ತಿಯಲಿ ॥ ೯೧

ತೊಳಗುವ ಶುಂಡಾಲ ಕುಣಿವ ಕುದುರೆಗಳ
ಮೇಳದೊಳಗೆ ಪಾಠಕರ ।
ಆಲಾಪಗಳಿಂದ ದೊರೆ ರಾಯ ನರಸ ಭೂ
ಪಾಲ ಸಾರಿಗೆ ನಡೆತಂದ ॥ ೯೨

ಥಳಥಳಿಸುವ ಶುಭ್ರ ಚಾಮರಗಳನಾಗ
ನಳಿನಾಕ್ಷಿಯರು ಡಾಳಿಸಲು ।
ಚಲದಂಕ ಕಂಠೀರವ ನರಸೇಂದ್ರನಂ
ದಳವಟ್ಟು ಸಾರಿಗೈತಂದ ॥ ೯೩

ನಲವಿಂದ ಮಾರ್ಬಲಗಳನಿಬ್ಬಗೆಯೊಳು
ನಿಲಿಸಲುತ್ತಮ ವಾಜಿಯನು ।
ತೊಲಗು ವೇಢೆಯ ರವೆಗಾಲು ಬಂಬೀರಿಯೊ
ಳ್ನಲಿದೇರಿ ಮೆರೆಯುತರ್ತಿಯಲಿ ॥ ೯೪

ಹರಿಯ ಲಂಘನೆ ಗರುತ್ಮನ ವೇಗ ದೃಢ ಗತಿ
ಬಿರುದಿನ ಚರಣ ತ್ರಯದ ।
ಮೆರೆವ ಚಪ್ಪುಟಗೆಯ ಚಪಲ ಗತಿಯನಾಗ
ತುರಗದೊಳಗೆ ತೋರಿಸಿದ ॥ ೯೫

ಭಳರೆ ಭಾಪುರೆ ಧಣಿ ದಿವ್ಯಾಶ್ವ ರೇವಂತ
ಕಲಿಗಳ ನೊಸಲ ಸುತಿಲಕ ।
ಸಲೆ ಶೌರ್ಯವರ್ಧನ ಜಯತೆಂದು ನಗುತಾಗ
ಳುಲಿದುದು ವಂದಿ ಸಂದೋಹ ॥ ೯೬

ತುರಗವನಿಳಿದು ಪಟ್ಟದ ಮದದಾನೆಯ
ಸಿರಕೆ ಲಂಘಿಸಿ ತೊಳಸುತ ।
ಹರುಷದೆ ಬೀದಿವರಿಸಿ ಸಂತೋಷವ
ಪಿರಿದು ಪುಟ್ಟಿಸಿದ ನೋಳ್ಪರಿಗೆ ॥ ೯೭

ನಗುತಾಗ ಕಂಠೀರವೇಂದ್ರ ಸಿಂಗಾಡಿಯ
ತೆಗೆದಂಬುಗಳನಳವಡಿಸಿ ।
ಗಗನದೆ ಚರಿಪ ಪಕ್ಷಿಯನೆಚ್ಚು ಗುರಿಯ ಬ
ಲ್ಸೊಗಸ ಬೀರಿದ ನೋಳ್ಪರಿಗೆ ॥ ೯೮

ಕಾದಿಸಿ ತಗರ ಮಲ್ಲರ ಕಾಳಗದ ವಿ
ನೋದದೊಳಗೆ ಪೊತ್ತುಗಳೆದು ।
ಭೂಧವ ಶಮಿಯನರ್ಚಿಸಿ ವರ ವಿಡಿದು ವಿ
ನೋದದೆ ನಡೆತಂದನಾಗ ॥ ೯೯

ದೊರೆ ರಾಯ ಕಂಠೀರವೇಂದ್ರ ಸಾರಿಗೆ ಹೋಗಿ
ಬರುವ ವಿಲಾಸವನಾಗ ।
ಪುರ ವನಿತೆಯರು ನೋಳ್ಪೊಡೆ ಸೆಜ್ಜೆ ವಳಿಗೆ ಮಂ
ದಿರಗಳ ಮೆಟ್ಟನೇರಿದರು ॥ ೧೦೦

ಕಾಯಜಾಕೃತಿಯಲ್ಲೈತಹ ಕಂಠೀರವ
ರಾಯ ಲಾವಣ್ಯಾಂಬುವಲಿ ।
ಆಯತಾಕ್ಷಿಯರ ಕಣ್ಮಕರಿ ಮೀನು ಹೊಳವ ವಿ
ಡಾಯವನೇನ ಬಣ್ಣಿಸುವೆ ॥ ೧೦೧

ಕರದಾವರೆ ಮುಗಿದುವು ನಯನೋತ್ಪಲ
ವರಳಿದುವಾ ವನಿತೆಯರ ।
ದರ ಹಾಸ ಜೊನ್ನವೆಸೆದುದು ಕಂಠೀರವ
ಪರಿ ಪೂರ್ಣ ಚಂದ್ರನೈತರಲು ॥ ೧೦೨

ಲೆಕ್ಕವಿಲ್ಲದ ಚಂದ್ರ ಜ್ಯೋತಿ ದೀವಟಿಗೆಗ
ಳುಕ್ಕಂದದ ಪ್ರಭೆಯೊಳಗೆ ।
ಅಕ್ಕರೊಳಗೆ ಕಂಠೀರವ ನರಸೇಂದ್ರ
ಪೊಕ್ಕನು ಪುರವನರ್ತಿಯಲಿ ॥ ೧೦೩

ಅಲ್ಲಲ್ಲಿ ಬಾಣ ಬಿರಿಸು ಸುರಪೂಗಳು
ಪಲ್ಲೈಸಿ ತುಡುಕಲಂಬರವ ।
ಸಲ್ಲಲಿತಾಂಗ ಕಂಠೀರವ ನರಸ ಭೂ
ವಲ್ಲಭನೈತಂದನಾಗ ॥ ೧೦೪

ಎಡ ಬಲದೊಳಗೆ ಡಾಳಿಸುವ ಸೀಗುರಿಗಳ
ಬೆಡಗಿನೊಳಾನೆಯ ಮೇಲೆ ।
ಕಡು ಹರುಷದೆ ಬಂದು ರಾಜ ಮಂದಿರವನು
ಪೊಡವೀಶ್ವರ ಪೊಕ್ಕನಂದು ॥ ೧೦೫

ಬಳ ರಾಣಿವೆಯ ನಾರಿಯರ ರತ್ನದಾರತಿ
ಹೊಳವ ಮುತ್ತಿನ ಸೇಸೆಗಳು ।
ಸುಳಿದುವು ನೃಪನಿದಿರಲಿ ಪಟ್ಟದಾನೆಯ
ನಿಳಿದಾತ್ಮಗೃಹಕ್ಕೈದಿದನು ॥ ೧೦೬

ಒಡೆಯನಪ್ಪಣೆಯಿಂದ ಸಂತೋಷದೊಳಾಗ
ಕಡು ಚೆಲ್ವ ದಳ ಪತಿ ನಗುತ ।
ಪಡೆಯು ಮನ್ನಿಸಿ ಬೀಳು ಕೊಟ್ಟು ಸಂಭ್ರಮದಲ್ಲಿ
ನಡೆದನು ತನ್ನರ ಮನೆಗೆ ॥ ೧೦೭

ಬಳಿಕಾಗ ಮರುದಿವಸದೆ ಭೂಪ ನೇಮಿಸೆ
ದಳ ಪತಿ ಕರಣಿಕರುಗಳು ।
ಇಳೆಯ ಯಾಚಕರಿಗೆ ಪೊನ್ನುಡು ಗೊರೆಗಳ
ತಳುವದಿತ್ತುಪಚರಿಸಿದರು ॥ ೧೦೮

ಧರೆಯ ಮಲ್ಲರು ಗಾಯಕರು ವಿದ್ವಾಂಸರು
ಪರಿ ಹಾಸಕ ಪರಿಣತರು ।
ಪಿರಿದು ಪೊನ್ನುಡುಗೊರೆ ಭೂಷಣಾಳಿಗಳಿಂದೆ
ನರೆ ಮನದಣಿದೈದಿದರು ॥ ೧೦೯

ಧರಣಿ ಸುರರ ಮನ್ನಿಸಿ ಬಹು ಧರ್ಮವ
ಪಿರಿದು ರಚಿಸಿ ತೋಷದಲಿ ।
ದೊರೆ ರಾಯ ನರಸ ರಾಜೇಂದ್ರ ಚಂದ್ರಮನಾಗ
ಸ್ಥಿರ ಸಾಮ್ರಾಜ್ಯದೊಳಿದ್ದ ॥ ೧೧೦

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮೊದದ ಸು ಧರ್ಮಾನುಬಂಧಿ ॥ ೧೧೧

೨೨ನೆಯ ಸಂಧಿ ಸಮಾಪ್ತಂ.

---

# ಇಪ್ಪತ್ತ ಮೂರನೆಯ ಸಂಧಿ.

ಗಜೇಂದ್ರನ ತಿರುನಾಳ ಉತ್ಸವದ ಮಂಟಪವನ್ನು ಕಟ್ಟಿಸಿದುದು.

ಸೂಚನೆ॥ ವರ ಗಜೇಂದ್ರನ ತಿರು ನಾಳ ರಂಗೇಶಗೆ
ನರಸರಾಜೇಂದ್ರ ಮಾಡಿಸಿದ ॥

ಕಮಲ ಸಖನ ವೈರಿಯು ಪೆಸರಸುರನ
ಕಮಲ ಚರನ ರೂಪ ತಾಳಿ ।
ಕಮಲದೊಳಗೆ ಪೊಕ್ಕು ಕೊಂದ ದೇವನ ಪಾದ
ಕಮಲಗಳಿಗೆ ನಮಿಸುವೆನು ॥ ೧

ಧರೆಗತಿ ಚೋದ್ಯವಡೆದ ಮಹಾ ನವಮಿಯು
ಪರವೋತ್ಸವವ ಪಟ್ಟಣದೆ ।
ದೊರೆ ರಾಯ ನರಸೇಂದ್ರ ಮಾಡಿಸಿ ಕೀರ್ತಿಯ
ಪರೆಪಿ ತಾ ಸುಖದೊಳಗಿರಲು ॥ ೨

ಧರೆಗೆ ಪುಣ್ಯವ ಬೀರುತೊಡನೆ ತುಲಾ ಮಾಸ
ಬರಲು ಕಾಶಿಯು ಗಂಗೆಯಾಗ ।
ನರಸೇಂದ್ರ ಹರಿಗೆ ಮಾಳ್ಪುತ್ಸವವನು ನೋಳ್ಪ
ಭರದೆ ಬಂದಿಹ ಸಮಯದಲಿ ॥ ೩

ನೆರೆ ಧರ್ಮ ಶೌರ್ಯದೇಳ್ಗೆಯಲಿ ಕರ್ಣಾಟವ
ಹೊರೆಯುತ ನರಸ ಭೂ ಪಾಲ ।
ಇರುತಿರೆ ರಂಗ ನಾಥನಿಗೆ ಗಜೇಂದ್ರನ
ತಿರುನಾಳ ಸಮಯವೈದಿದುದು ॥ ೪

ಆ ಮಹಿಮೆಯನುಸಿರುವೆ ಪೂರ್ವ ಯುಗದಲಿ
ಕಾಮ ಪಿತನ ಬಳಿಯಲಿ ।
ಪ್ರೇಮದೆ ಭಜಿಸುತಿಂದ್ರದ್ಯುಮ್ನ ರಾಯ ಸು
ತ್ರಾಮ ಭೋಗದೊಳೊಪ್ಪುತಿರ್ದ ॥ ೫

ಹರಿ ಭಕ್ತಿ ಯುತನಾತ ಸಕಲ ಸಾಮ್ರಾಜ್ಯದ
ಸಿರಿಗೆ ಸೇರದೆ ತ್ರಿ ಕೂಟದಲಿ ।
ಪಿರಿದು ತಪವ ಮಾಡುತಿರೆ ಕುಂಭ ಸಂಭವ
ನಿರದೆಯ್ದೆತಂದನಾ ಸ್ಥಳಕೆ ॥ ೬

ಸಿರಿಯರಸನ ಧ್ಯಾನದೆ ಮುನಿ ಪತಿಯ ಸ
ತ್ಕರಿಸದೆ ಯೋಗದೊಳಿರಲು ।
ವರ ಮುನಿ ಕೋಪಿಸಿ ಮದ ಗಜವಾಗೆಂ
ದೊರೆದು ಶಪಿಸಿದನಾ ನೃಪನ ॥ ೭

ಎಂದಿಗೀ ಶಾಪ ವಿಮೋಚನೆ ತನಗಹು
ದೆಂದು ಮುನಿಯ ನೃಪ ಕೇಳೆ ।
ಇಂದೀವರಾಕ್ಷನ ದರುಶನದಿಂ ನಿನ್ನ
ಮಂದತ್ವವಳಿದಪ್ಪುದೆಂದ ॥ ೮

ಎನುತಾಗ ಕಲಶಜ ತನ್ನಾಶ್ರಮಕ್ಕೈದೆ
ಜನ ನಾಥ ಗಜ ರೂಪ ತಾಳಿ ।
ಘನವಾದ ಕರಿಗಳಗರಸಾಗಿ ಬಿಡದಾಗ
ವನ ವನದೊಳು ಚರಿಸಿದನು ॥ ೯

ಬಳಿಕಿತ್ತ ಹಾಹಾಹೂಹುವೆನಿಪ ಪೆಸ
ರಳವಟ್ಟ ಗಂಧರ್ವನಂದು ।
ಬಲು ಗರ್ವಿಸೆ ನೆಗಳಾಗೆಂದು ಸುರ ಪತಿ
ಮುಳಿದು ಶಾಪವನಿತ್ತನವಗೆ ॥ ೧೦

ತನಗೀ ಶಾಪ ಪರಿವೃದೆಂದಿಗೆಂದವ
ನನಿಮಿಷ ಪತಿಯು ಪ್ರಾರ್ಥಿಸಲು ।
ವನಜಾಕ್ಷನ ಚಕ್ರ ಹತಿಯಿಂದ ಮುನ್ನಿನ
ಘನ ದಿವ್ಯ ರೂಪಹೆಯೆಂದ ॥ ೧೧

ಎಂದೆಂಬ ಸುರಪನ ಶಾಪದೆ ನೆಗಳಾಗಿ
ಬಂದೊಂದು ಕಾಸಾರದಲಿ ।
ಕುಂದದ ಜಲ ಮಧ್ಯದೊಳಗವನಿರುತಿರ
ಲಂದೊಂದು ಚೋದ್ಯವೆಸಗಿತು ॥ ೧೨

ಬಡನಂದು ಗಜ ರೂಪ ತಾಳಿದಿಂದ್ರದ್ಯುಮ್ನ
ಬಿಡದಾಗ ವನಗಳ ಚರಿಸಿ ।
ಕಡು ಬಳಲಿಕೆಯಿಂದ ನೀರೀಂಟೆ ನೆಗಳಿ
ರ್ದಡೆಯು ಪೊಂದಿದನೇ ಪೇಳ್ವ ॥ ೧೩

ಸರಸಿಯು ಕೂಲವ ಮಂದ ಗತಿಯಲಿಳಿ
ದುರುತರ ಪೂರ್ಣ ಜಲವನು ।
ಕರಿ ಬಂದು ಪೊಕ್ಕು ಕಲಕಿ ಕರದೊಳು ನೀರ
ನರೆ ತೀವಿ ಕುಡಿಯುತೊಪ್ಪಿರಲು ॥ ೧೪

ಬಳಿಕಲ್ಲಿ ವಾಸವಾಗಿರ್ದ ನೆಗಳು ನೀರ
ತುಳುಕಿ ಚೆಲ್ಲುವ ಗಜ ಪತಿಯ ।
ಚಲನವ ಪಿಡಿಗು ಭೋರ್ಗರೆದಾಗ ಮಡುವಿಗೆ
ಸೆಳೆಯಲೆಳೆಸಿದುದೇ ಪೇಳ್ವ ॥ ೧೫

ಕರಿ ರಾಜಗೆ ಮಕರಿಗೆ ಯುದ್ಧ ಸಾಸಿರ
ವರುಷವಾ ಸರಸಿಯೊಳಸಗೆ ।
ನೆರೆ ಸತ್ವಗುಂದಿ * ಯಾ ಗಜ ರಾಜ ವೈಕುಂಠ
ದೆರೆಯಗೆ ಮೊರೆಯಿಟ್ಟಿತಾಗ ॥ ೧೬

* ಯಾಗಾಗಜ.

ಆ ಮೊರೆಯನು ಕೇಳುತ ಚಕ್ರವಿಡಿದಾಗ
ಸಾಮಜವಿದ್ದೆಡೆಗೈದಿ ।
ಕಾಮ ಜನಕ ಮಕರಿಯ ಶಿರವರಿದು ಸು
ಪ್ರೇಮದೆ ಗಜವ ರಕ್ಷಿಸಿದ ॥ ೧೭

ಜಂಭಾರಿ ಮೊದಲಾದ ಸುರರಾಗ ಸಲೆ ಪೀ
ತಾಂಬರ ಧರನ ಕೊಂಡಾಡಿ ।
ಮುಂಬರಿದೊಡನೆ ಪೂ ಮಳೆಗರೆಯುತ ಬಲು
ಸಂಭ್ರಮಾನ್ವಿತರಾದರಾಗ ॥ ೧೮

ಕರಿ ರಾಜಗೆ ಮಕರಿಗೆ ಮುಕ್ತಿ ಮಾರ್ಗವ
ಕರುಣಿಸಿ ಸಿರಿ ದೇವಿ ಸಹಿತ ।
ಪರಮೋತ್ಸವದಲಿ ವೈಕುಂಠ ನಗರಿಗೆ
ಹರಿ ಬಿಜಯಂಗೈದನೊಲಿದು ॥ ೧೯

ಅಂದಿನ ಪರಮೋತ್ಸವವನೀಕ್ಷಿಸಿ ಜನ
ವೃಂದ ಕೃತಾರ್ಥವಪ್ಪಂತೆ ।
ಚೆಂದದೆ ಕಂಠೀರವ ರಾಜ ರಂಗೇಶ
ನಿಂದ ತೋರಿಸಲುಜ್ಜುಗಿಸಿದ ॥ ೨೦

ಬಳಿಕೋಲಗಗೊಟ್ಟು ಸಂತೋಷವನಾಗ
ತಳೆದು ಕಂಠೀರವ ರಾಜ ।
ದಳವಾಯಿ ಲಿಂಗರಾಜೇಂದ್ರನ ಕರೆದಂದು
ಗಳಲನೆ ನುಡಿದನಿಂತೆಂದು ॥ ೨೧

ಸಿರಿ ಧರ ರಂಗ ನಾಥನಿಗೆ ಗಜೇಂದ್ರನ
ತಿರುನಾಳ ಪರಮೋತ್ಸವವ ।
ವಿರಚಿಸು ಶುಭ ದಿನದೊಳಗೆಂದು ಭೂ ಪಾಲ
ಹರುಷದೊಳಗೆ ನೇಮಿಸಲು ॥ ೨೨

ಅರಸನಾಜ್ಞಾಪನೆಯಲಿ ದಳಪತಿಯಾಗ
ಕರಿಸಿ ಲಿಂಗೆಯಗವುಡನನು ।
ಕರಿ ರಾಜ ತಿರುನಾಳನುತ್ಸವಗಳಗೀಗ
ಪುರವ ಸಿಂಗರಿಸು ನೀನೆಂದ ॥ ೧೩

ವರ ದಿವ್ಯ ಸರಸಿಯು ಶ್ರೀ ರಂಗ ಧಾಮನ
ಪರಮೋತ್ಸವ ಮಂಟಪವ ।
ಹಿರಿದು ಸಿಂಗರಿಸೆಂದು ಲಿಂಗೆಯ ಗವುಡಗಂ
ದೊರೆದನು ದಳ ಪತಿ ನಗುತ ॥ ೧೪

ಒಡೆಯನಾಜ್ಞಾಪನೆಯನು ಸಿರದಲಿ ತಾಳಿ
ಕಡು ಭಕ್ತಿಯೊಳಗವನಾಗ ।
ಬಿಡದೆ ಶ್ರೀ ರಂಗ ಪಟ್ಟಣವ ಸಿಂಗರಿಸಿದ
ಬೆಡಗನದೇನ ಬಣ್ಣಿಸುವೆ ॥ ೧೫

ಕೇರಿ ಕೇರಿಯಲಿ ಪನ್ನೀರ ಚಳೆಯ ರನ್ನ
ದೋರಣ ಪೊಂಗುರುಜುಗಳು ।
ಮೇರೆಯಿಲ್ಲದೆ ಕಾಂತಿವಿಡಿದುವು ಪುರದ ಶೃಂ
ಗಾರವ ಪೊಗಳ್ವಡಾರಳವು ॥ ೧೬

ಗುಡಿ ಗೋಪುರ ರಾಜ ಗೇಹ ಮಂಡಲಿಕರ
ಕಡು ಚೆಲ್ವ ಸಾಲ ಸಜ್ಜೆಗಳು ।
ಬಿಡದೆ ಸಿಂಗರನಾಂತು ದಿಕ್ಪಾಲರರಮನೆ
ಗೊಡನಿತ್ತುವು ನಾಚಿಕೆಯ ॥ ೧೭

ಪೊಸ ಮುತ್ತು ವಜ್ರ ವೈಡೂರ್ಯ ಗೋಮೇಧಿಕ
ಮಿಸುಪ ನೀಲದ ಕುಚ್ಚಿನಿಂದ ।
ಜಸವಡೆದುದು ಕರಿ ರಾಜನ ತಿರು ನಾಳ
ಗೆಸೆಯುವುತ್ಸವ ಮಂಟಪವು ॥ ೧೮

ನವ ರತ್ನದ ತೋರಣ ಸಾಲುಗಂಭದೆ
ಛವಿ ಛವಿಸುವ ದರ್ಪಣಗಳು ।
ರವಿ ಕಿರಣವ ಜರೆಯುತ ತಮ್ಮ ಕಾಂತಿಯಿಂ
ಭುವನವ ಬೆಳಗಿದುವಾಗ ॥ ೨೯

ಪೂವಿನ ಮಾಲೆ ಹೊಂಬಾಳೆಯು ತೋರಣ
ತೀವಿದ ಫಲ ವಸ್ತುಗಳು ।
ಭಾವಜ ಪಿತ ರಂಗ ಧಾಮನಿಗುತ್ಸಾಹ
ವೀವ ಮಂಟಪದೊಳೊಪ್ಪಿದುವು ॥ ೩೦

ಶಶಿ ಕಾಂತದ ಸೋಪಾನ ಪೊಂದಾವರೆ
ಪೊಸ ಪರಿಮಳದ ಕಲ್ಹಾರ ।
ಎಸೆವ ಕನ್ನೈದಿಲ ಕಾಂತಿಯು ತಳೆದಾಗ
ಬಿಸರುಹಾಕರವೊಪ್ಪಿದುದು ॥ ೩೧

ಮರಿ ದುಂಬಿಗಳು ಕಳ ಹಂಸೆ ರಥಾಂಗಗ
ಳುರುತರ ಸಾರಸಪಕ್ಷಿ ।
ಮೆರೆವಾ ಕಮಲಾಕರದ ಸೌಂದರ್ಯದೊಂ
ದಿರವ ನಾನೇನ ಬಣ್ಣಿಸುವ ॥ ೩೨

ಪಿರಿದೆನಿಸುವ ಕಲ್ಪ ವೃಕ್ಷ ನಾನಾ ಬಗೆ
ಪರಿಮಳ ಪೂ ವಲ್ಲಿಗಳು ।
ವರ ದಿವ್ಯ ಸರಸಿಯು ಬಳಸಿದುದ್ಯಾನದೆ
ಮೆರೆದುವೇನೆಂಬೆನಚ್ಚರಿಯ ॥ ೩೩

ಅರಗಿಳಿಗಳು ಕೋಗಿಲೆ ನವಿಲ್ಮುಂತಾದ
ಮೆರೆವ ನಾನಾ ಪಕ್ಷಿಗಳು ।
ನೆರೆ ಮಧುರ ಸ್ವರಗೈಯುತುದ್ಯಾನದೆ
ಪರಿಶೋಭಿಸಿಹುವರ್ತಿಯಲಿ ॥ ೩೪

ಇಂತು ಪಟ್ಟಣವ ಸಿಂಗರಿಸಿ ಲಿಂಗೆಯಗೌಡ
ಸಂತಸದಲಿ ನಡೆತಂದು ।
ಮುಂತದ ದಳ ಪತಿಯಡಿಗೆ ಬಿನ್ನೈಸಿಯೋ
ರಂತೆ ಸಂಭ್ರಮವ ಬೀರಿದನು ॥ ೩೫

ಕರಿ ರಾಜ ತಿರು ನಾಳುತ್ಸವಗಳಿಗಾ
ಪುರ ಶೃಂಗರವಾದ ಬಗೆಯು ।
ಹರುಷದೆ ದಳ ಪತಿ ನರಸ ರಾಜೇಂದ್ರನ
ಚರಣಕೆ ಬಿನ್ನೈಸಿದನು ॥ ೩೬

ವರ ಗಜೇಂದ್ರನ ತಿರು ನಾಳ ರಂಗೇಶಗೆ
ನರಸ ರಾಜೇಂದ್ರ * ಮಾಡಿಸುವ ।
ಪರಮೋತ್ಸವಕಚ್ಚರಿವಟ್ಟು ಧರಣಿಯು
ನೆರೆ ಜನವೈತಂದುದಾಗ ॥ ೩೭

ಕೊಡಗು ಕೊಂಕಣ ಮಲೆಯಾಳ ಕರ್ಣಾಟದ
ಪೊಡವಿಯ ಜನರು ಸಂತಸದೆ ।
ಮಡದಿ ಮಕ್ಕಳು ಸಹ ಕರಿ ರಾಜ ತಿರು ನಾಳ
ಬಿಡದೆ ನಿಟ್ಟಿಸ ಬಂದರೊಲಿದು ॥ ೩೮

ಬೇಹಾರಿಗಳು ಬೆಲೆಯರಿವ ಜಾಣರು ಬಲು
ಸಾಹಸಿಗಳು ಸಜ್ಜನರು ।
ಶ್ರೀ ಹರಿ ರಂಗ ಧಾಮನ ತಿರುನಾಳು
ತ್ಸಾಹಕ್ಕೈತಂದರರ್ತಿಯಲಿ ॥ ೩೯

ಚೋಳ ಚಪ್ಪರದ ಸಮುಗಿಗಳು ಬಲು ವಾದ್ಯ
ತಾಳ ಜಾಗಟೆಯು ಮೇಳದಲಿ ।
ತೂಳುವ ಹರುಷದೆ ವರ ಗಜೇಂದ್ರನ ತಿರು
ನಾಳ ನಿಟ್ಟಿಸ ಬಂದರಾಗ ॥ ೪೦

---

* ರಾಜಿಸುವ.

ಕೌಂಕುಳ ಮಕ್ಕಳು ಕೈಯ ಕೂಸುಗಳುರೆ
ಬಿಂಕದೆ ತೊಟ್ಟಿಲ ಮಗುವ ।
ಶಂಕೆ ಯಿಲ್ಲದೆ ಪೊತ್ತು ರಂಗನ ಜಾತ್ರೆಗೆ
ಪಂಕಜಾಕ್ಷಿಯರೈದಿದರು ॥ ೪೧

ಎತ್ತಿನ ಮೇಲೆ ಬಾಜಿಸುವ ಪಮಾನದ
ಮೊತ್ತದೆ ಹರಿ ದಾಸರುಗಳು ।
ಮತ್ತಾಗ ಸಂಪ್ರದಾಯಗಳ ಮೇಳದೆ ಬರು
ವರ್ತಿಯನೇನ ಬಣ್ಣಿಸುವ ॥ ೪೨

ಇಂತು ಚಪ್ಪನ್ನ ದೇಶದ ನಾನಾ ಜನ
ಸಂತೋಷವ ತಾಳಿ ನಗುತ ।
ಕಂತು ಪಿತನ ಜಾತ್ರೆಗೈದಿ ಪಟ್ಟಣದಲ್ಲಿ
ತಿಂತಿಣಿಸಿತು ದೆಸೆ ದೆಸೆಗೆ ॥ ೪೩

ಆಸಿತರೊಳಗೆ ಶುಭ ತಿಥಿ ವಾರ ಲಗ್ನದೆ
ಮನಸಿಜ ಪಿತಸಿಗರ್ತಿಯಲಿ ।
ಘನತರ ಮಂಗಳೋತ್ಸವಕಂಕುರಾರ್ಪಣ
ವನು ರಚಿಸಿದರಂದೊಲಿದು ॥ ೪೪

ನರಸ ರಾಜೇಂದ್ರ ಭಕ್ತಿಯಲಿ ರಂಗೇಶಗೆ
ವಿರಚಿಪ ಪರಮೋತ್ಸವಕೆ ।
ಸರಿ ಯಿಲ್ಲ ತ್ರಿ ಜಗದೊಳೆಂದು ಸಾವ್ರೊಲು ಭೇರಿ
ಯುರುತರ ತಾಡನವಾಯ್ತು ॥ ೪೫

ದರುಶನ ಗೈದ ಬಕುತರಘ ಕುಲವನು
ಪರಿದು ವರವ ಕರುಣಿಸುವ ।
ಬಿರುದಿದೀಗೆಂದು ತೋರ್ಪೊಲು ರಂಗ ನಾಥನ
ವರ ಧ್ವಜ ಪಟವೇರಿದುದು ॥ ೪೬

ನೆರೆಯಾಕಾಶ ಮಾರ್ಗದೆ ಭಜಿಸುವ ಸುರ
ರೆರೆಯಗೆ ದರುಶನವಿತ್ತು ।
ಹೊರೆವೋಲು ರಂಗೇಶ ಪೊನ್ನ ಪುಷ್ಪಕದಲ್ಲಿ
ಮೆರೆದನು ಪ್ರಥಮ ದಿವಸದ ॥ ೪೭

ನೆರೆ ರಾಹುವಿನುಪಟಳಕಳುಕುತ ಬಂದು
ಮರೆ ಹೊಕ್ಕ ಶಶಿಯ ಮನ್ನಿಸುತ ।
ಹರುಷದಿಂದೆರಡನೆಯ ದಿವಸದುತ್ಸಾಹಕೆ
ಮೆರೆದನು ಚಂದ್ರ ಮಂಡಲದ ॥ ೪೮

ಗರುಡನ ಭಯಕಂಜಿಪ ಫಣಿ ರಾಜಗೆ
ನಿರುತದಭಯವಿತ್ತು ನಗುತ ।
ಪಿರಿದು ಪದ್ಮಾಸನವನು ಮಾಡಿ ರಂಗೇಶ
ಮೆರೆದನು ಶೇಷನ ಮೇಲೆ ॥ ೪೯

ಗರಳವ ಪರಿಹರಿಸೆ ಸುರ ಲೋಕಕ್ಕೈದಿ
ಸುರಪತಿಯನು ಜೈಸಿರುವ ।
ವರ ಶೌರ್ಯಕೆ ಮೆಚ್ಚಿ ವರವಿತ್ತು ಮೆರೆದನು
ಗರುಡ ಗಮನನಾಗಿ ಹರಿಯು ॥ ೫೦

* ಬರಲಾರನೆಯ ದಿವಸ ಗಜ ರಾಜನ
ಮೊರೆಗೇಳಿ ನರ ಹರಿಯಾಗ ।
ಪಿರಿದು ಕೋಪವ ತಾಳಿ ಗರುಡನ ಮೇಲೇರಿ
ಸಿರಿ ಸಹ ನಡೆತಂದನಾಗ ॥ ೫೧

ಕಂಡನು ಸರಸಿಯೊಳ್ ಸೊಂಡಿಲ ತುದಿಯನು
ಪುಂಡರೀಕಾಕ್ಷ ತಾನಾಗ ।
ಚಂಡ ಸಾಹಸ ಚಕ್ರವನು ತುಡುಕಿದನಾಗ
ಕೊಂಡಾಡೆ ದಿವಿಜ ಸಂತತಿಯು ॥ ೫೨

* ಬಳಿಕಾರನೆಯ.

ಖವ ಖವಿಸುವ ಪೊಂಬಣ್ಣದ ರಶ್ಮಿಯು
ತವೆ ಚಕ್ರವನು ಕೈಯೊಳಾಂತು ।
* ಜವದಿಂದೆಸೆಯು ಬೇಕೆನುತಲಿ ಮನದೊಳು
ತವಕಗೊಳುತ ಬರಬರುತ ॥ ೫೩

ಅನಿತರೊಳಗೆ ಶುಭ ಲಗ್ನದೆ ರಂಗೇಶ
ಕನಕ ಪಲ್ಲಕ್ಕಿಯನೇರಿ ।
ಘನವಾದ ದಿವ್ಯೋತ್ಸವ ಮಂಟಪಕಾಗ
ಮನ ಹರುಷದೊಳೈತಂದ ॥ ೫೪

ನರಸ ರಾಜೇಂದ್ರನು ದಳ ಪತಿ ಪುರ ಜನ
ಪರಿವಾರ ಸಹಿತೈತಂದು ।
ಕರಿ ರಾಜನ ಬಂಧನವ ಶ್ರೀ ರಂಗೇಶ
ಪರಿ ಹರಿಸುವುದನೀಕ್ಷಿಸಿದ ॥ ೫೫

ಸುರರು ಪೂ ಮಳೆಗರೆಯಲು ದೇವ ದುಂದುಭಿ
ಮೊರೆಯಲು ರಂಗೇಶನಾಗ ।
ಹಿರಿದು ಸಂತೋಷದೆ ನೆಗಳ ಮಸ್ತಕವನು
ಪರಿದನು ಚಕ್ರದೊಳಂದು ॥ ೫೬

ಕರಿ ರಾಜನಿಗೆ ಮಕರಿಗೆ ಮೋಕ್ಷವನಿತ್ತು
ಪರಮ ಮಂಗಳ ಮೂರ್ತಿಯಾಗ ।
ಸಿರಿ ದೇವಿ ಸಹಿತ ಶ್ರೀ ರಂಗೇಶ ತನ್ನಂತ
ಪುರವನು ಸಾರಿದನಾಗ ॥ ೫೭

ಧರಣಿಪ ನರಸ ರಾಜೇಂದ್ರ ಸಂತೋಷದೆ
ನೆರೆ ಮಂಡಲಿಕ ಮನ್ನೆಯರ ।
ಹರುಷದೆ ಬೀಳ್ಕೊಟ್ಟು ಪರಮೋತ್ಸವದೊಳ
ಗರಮನೆಗೈದಿದನಾಗ ॥ ೫೮

* ತವಕದಿಯೆಸೆಯುಬೇಕೆನುತಲಿ ಮನದೊಳು ಕಳವಳಗೊಳುತಿರಲಾಗ,

* ಆ ಸಮಯದೆ ರಂಗನುತ್ಸವವನು ನಳಿ
ನೀ ಸಖ ನೋಡಿ ಸಂತಸದೆ ।
ಸೂಸುವ ಹರುಷದೆ ಪಶ್ಚಿಮಾಂಗನೆಯ ನಿ
ವಾಸಕ್ಕೈದಿದನರ್ತಿಯಲಿ ॥ ೫೯

ವರ ಪಶ್ಚಿಮಾಂಗನೆ ರಮಣನೈತರುತಿರೆ
ಹರುಷದೆ ಮಜ್ಜನ ಮಾಡಿ ।
ಅರುಣ[ವರ್ಣದ] ಪೊಂಬಟ್ಟೆಯನುಟ್ಟಂತೆ
ಪರಿ ಶೋಭಿಸಿತು ನಿಜಗೆಂಪು ॥ ೬೦

† ಒದವಿದುತ್ಸವದೆ ರಂಗೇಶನಾ ಸಮಯದೆ
ಮದಕರಿಯೇರಿ ಸಂಭ್ರಮದೆ ।
ಮುದದಿಂದ ನೆರೆದ ಭಕ್ತರಿಗೆ ವರವನಿತ್ತು
ಸದನಕ್ಕೈದಿದನರ್ತಿಯಲಿ ॥ ೬೧

ನರಸ ರಾಜೇಂದ್ರ ಭಕ್ತಿಯಲಿ ವಿರಚಿಸಿದ
ವರ ಗಜೇಂದ್ರನ ತಿರುನಾಳ ।
ಧರಣಿಯೊಳಗೆ ಸಾರಿ ಡಂಗುರಿಪಂದದೆ
ಚರಣಾಯುಧಗಳುಲಿದುವು ॥ ೬೨

ತರಣಿ ಪೂರ್ವಾಂಗನೆಯೊಳು ರತಿ ಕೇಳಿಯು
ನೆರೆ ಬಯಸಿದ ತೆರನಾಗ ।
ವರ ಮೂಡಣಾದ್ರಿಯ ಶಿಖರದೆ ರಾಜಿಪೊ
ಲರುಣೋದಯ ರಂಜಿಸಿತು ॥ ೬೩

‡ ದಿವಸಾಧಿಪ ಶ್ರೀ ರಂಗ ಧಾಮನ ರಥೋ
¶ ತ್ಸವವನು ನಿಟ್ಟಿಸಲೆಂದು ।
ತವೆ ಹರುಷದೆ ಬಂದನೆನೆ ಪೂರ್ವ ಗಿರಿಯ § ಮಂ
ಡವದೆ ರಾಜಿಸಿದನೇ ವೇಳ್ವ ॥ ೬೪

---

* ಆ ಸಮಯದಿ ಶ್ರೀರಂಗನವುತ್ಸಹವ ಕಮಲಾಪ್ತನು ನೋಡಿ.

† ಪರಮೋತ್ಸವದೆ. ‡ ಜಲಜಾಪ್ತನುಶ್ರೀ. ¶ ತ್ಸವನೆರೆ. § ಮಸ್ತಕದೆ.

ಬಳಿಕಲಾ ಸಮಯದೆ ರಂಗ ಧಾಮನ ರಥ
ಸುಲಲಿತ ಶೃಂಗಾರವಾಗಿ ।
ಬಲು ಸಂಭ್ರಮದೆ ಬರುವುದ ಬಣ್ಣಿಸುವೆನು
ನಲಿದಾಲಿಸುವುದು ಸಜ್ಜನರು ॥ ೬೫

ಪರಿ ಶೋಭಿಸುವ ತಮ್ಮ ವೃತ್ತಾಕಾರಕ್ಕೆ
ತರಣಿ ಶಶಿಗಳ ವೃತ್ತಗಳು ।
ಸರಿಯಲ್ಲವೆಂದಾಗ ಜರೆದು ಸೊಬಗ ಬೀರಿ
ಮೆರೆದುವು ರಥದ ಗಾಲಿಗಳು ॥ ೬೬

ಪೊಸಮಿಸುನಿಗಳಾಯಗಾಲಂತರಾಂತರ
ಜಸವಡೆದಿಹ ರನ್ನ ಲೋವೆ ।
ಬಿಸಜಾಕ್ಷ ರಂಗ ನಾಥನ ದಿವ್ಯ ರಥದೊಳ
ಗೆಸೆದುವೇನೆಂಬೆನಚ್ಚರಿಯು ॥ ೬೭

ಮಿರುಗುವ ಪಂಚಾಂಗರಾಯ ಪಟ್ಟಾಳಿಯು
ಸರ ಗೊಂಡೆಯ ಝಲ್ಲಿಗಳು ।
ಮೆರೆದುವು ರಥದಂತರಾಂತರದೊಳಗಿಹ
ಸುರುಚಿರ ಲೋವೆಗಳೊಳಗೆ ॥ ೬೮

ಪವಳದ ಕುಚ್ಚು ಮುತ್ತಿನ ಗೊಂಚಲುಗಳು
ತವೆ ರನ್ನಗಳ ಸೂಸಕಗಳು ।
ಧವಳ ವರ್ಣದ ಝಲ್ಲಿಗಳು ಸಾಲುವಡೆದಾಗ
ಖವಖವಿಸಿದುವರ್ತಿಯಲಿ ॥ ೬೯

ತಳಗೆದೋರಣ ಕನ್ನಡಿ ಕಳಸಗಳುರೆ
ಹೊಳವ ಹೊಳವೆ ನೆರೆ ಕುರುಜು ।
ಥಳಥಳಿಸುವುದಂತರದೊಳಾಗಳತಿ ಚೆಲ್ವ
ದಳದು ರಾಜಿಸಿದುವರ್ತಿಯಲಿ ॥ ೭೦

ಬಳಸಿ ಚೌ ದೆಸೆಯು ಬಾಗಿಲ ಪ್ರತಿಮೆಗಳೊಳ
ಗಳವಟ್ಟ ಚಿಮ್ಮುವ ಚಮರ ।
ನೆಲನ ಸೋಂಕುವ ಪಾಟ ಪಾವಡೆ ರಥದೊಳು
ತೊಳಗಿದುವತಿ ಮುದದಿಂದ ॥ ೩೧

ಪಲ್ಲವ ಸತ್ತಿಗೆ ಪೊಸ ಮಿಸುನಿಯ ಪಟ
ಸಲ್ಲಲಿತದ ಹೊನ್ನ ಕಳಸ ।
ಫುಲ್ಲ ನಾಭನ ದಿವ್ಯ ರಥದೊಳು ರಾಜಿಸು
ವುಲ್ಲಾಸವನೇ ಪೇಳ್ವೆ ॥ ೩೨

ಹೊಳೆವ ಪೊಂಬಾಳೆಯು ಕಂಬ ನಾನಾ ಬಗೆ
ಫಲ ವಸ್ತ್ರ ಪೂವಿನ ಮಾಲೆ ।
ಅಳವಟ್ಟ ರಂಗ ಧಾಮನ ರಥದೊಳಗಿಪ
ಚಲುವನದೇನ ಬಣ್ಣಿಸುವೆ ॥ ೩೩

ಅನಿತರೊಳಗೆ ಶುಭ ಲಗ್ನದೆ ರಂಗೇಶ
ಕನಕ ವಿಮಾನವನೇರಿ ।
ಘನ ಹರುಷದೊಳೈದಿ ದಿವ್ಯ ರಥದೊಳಾಗ
ಚಿನುಮಯ ಮೂರ್ತಿ ರಂಜಿಸಿದ ॥ ೩೪

ತೆಲುಗ ತಿಗುಳ ಕೊಂಕಣ ಮಲೆಯಾಳರು
ಸು ಲಲಿತ ಕರ್ಣಾಟ ಜನರು ।
ಪಲ ಬಗೆಯಲಿ ಸಿಂಗರಗೈದು ದೇವನ
ವಿಲಸಿತೋತ್ಸವಕೈದಿದರು ॥ ೩೫

ಪರಿಜನ ಪುರ ಜನ ನೋಟಕ ಜನರಾಗ
ಹರುಷದೊಳಗೆ ಸಿಂಗರಿಸಿ ।
ಸಿರಿ ಧರ ರಂಗ ಧಾಮನಿಗೆಸಗುವ ದಿವ್ಯ
ತಿರು ನಾಳ ನೋಡಲೈದಿದರು ॥ ೩೬

ಮಾರನ ಮಸೆದಲಗುಗಳಂದದೆ ಪೌರ
ನಾರಿಯರುಗಳು ಸಿಂಗರಿಸಿ ।
ಕಾರುಣ್ಯ ಮೂರ್ತಿಯುತ್ಸವವ ನಿಟ್ಟಿಸುವೊಡೆ
ಮೇರೆಯಿಲ್ಲದೆ ಬಂದರಾಗ ॥ ೭೭

ಬಳಿಕ ಭೂಪನ ನೇಮದೊಳಗೆ ಸಂತೋಷದೆ
ದಳವಾಯಿ ಲಿಂಗ ರಾಜೇಂದ್ರ ।
ಪಲ ಬಗೆಯಲಿ ಸಿಂಗರಿಸಿಯೋಲಗಕಾಗ
ಳಳವಟ್ಟು ಬರುವುದೇ ಪೇಳ್ವ ॥ ೭೮

ಥಳ ಥಳಿಸುವ ಬಾಹುಲಿ ವಜ್ರ ವೈಡೂರ್ಯ
ದಳದಿಹ ಹಮ್ಮೀರ ತಾತಿ ।
ತೊಳಗುವ ಮುತ್ತಿನ ಕಡಗ ಕಂಕಣದಿಂದ
ಬಲು ಸೊಬಗಾಂತನರ್ತಿಯಲಿ ॥ ೭೯

ಮಿಸುನಿಯ ಜರತಾರ ರುಮ್ಮಾಲು ಪೈರಣಿ
ಪೊಸತಾದ ದುಪ್ಪಟದಿಂದ ।
ವಸುಧೆಗೆ ನೂತನ ಮನ್ಮಥನಂತೆ ರಂ
ಜಿಸಿದನೇನೆಂಬೆನಚ್ಚರಿಯ ॥ ೮೦

ಆಣಿ ಮುತ್ತಿನ ಕಂಠಮಾಲೆ ಚೌಕುಳಿ ಪೊಸ
ಮಾಣಿಕಗಳ ದಿವ್ಯ ಪದಕ ।
ಜಾಣ ಶೇಖರನ ಸರ್ವಾಂಗದೆ ಮೆರೆದುವು
ಕ್ಷೋಣಿಗಚ್ಚರಿಯ ಕಾಣಿಸುತ ॥ ೮೧

ಇಂತು ಸಿಂಗರಿಸಿ ಮನ್ನೆಯ ಮಂಡಲಿಕರ
ತಿಂತಿಣಿ ಸಹಿತ ಸಂಭ್ರಮದೆ ।
ಮುಂತೆ ಭೂ ಪಾಲನೋಲಗಕಾಗ ದಳ ಪತಿ
ಸಂತೋಷದೊಳೈತಂದ ॥ ೮೨

ತಾಲಿ ಚೌಕುಳಿ ಹೊನ್ನ ಸರ ಹೊಸ ಮುತ್ತಿನ
ಜೂಳೆಯು ಕಡಗ ಕಂಕಣದ ।
ಮೇಲು ದುಪ್ಪಟಿ ಪೈರಣೆ ಮಂಡಲಿಕರ
ಜಾಲವೈತಂದುದುಬ್ಬಿನಲಿ ॥ ೮೩

ಮುಂಗೈಯ ಮುರಿ ಮುರಡಿಯ ಸರಪಳಿ ಹೊ
ನ್ನುಂಗುರ ತೋಳ ಬಾಪುರಿಯು ।
ಶೃಂಗಾರದ ನಾಯಕ ಜಾಲ ಬಹಳ ಬೆ
ಡಂಗಿನೊಳೈತಂದುದಾಗ ॥ ೮೪

ಕಾಯದೊಳಳವಟ್ಟ ಹೊನ್ನ ದಗಲೆ ದಿ
ವ್ಯಾಯುತದಾಭರಣಗಳ ।
ವೈಯಾರದ ಬಿರುದಿನ ಚೆಂದಿಗಳ ಚೆಲ್ವ
ರಾಯ ರಾವುತರೈದಿದರು ॥ ೮೫

ಬಿಡದುಟ್ಟ ಪಟ್ಟೆಯ ದಟ್ಟಿ ಕುಂಕುಮ ಗಾಸೆ
ತೊಡರಿದ ದಿವ್ಯ ಭೂಷಣದ ।
ಪಿಡಿದ ನಾನಾ ಬಗೆ ಕೈದಿನ ಸು ಭಟರ
ಗಡಣವೈತಂದುದರ್ತಿಯಲಿ ॥ ೮೬

ಉತ್ತರಿಗೆಯ ಹೊನ್ನ ಸರ ಗಂಟೆ ಸರಪಳಿ
ಮುತ್ತಿನ ಕಡುಕು ಉಳಿಗಳ ।
ಮತ್ತಾಗ ಧರಿಸಿರುವೊಂಟಿರಿಗಾರರ
ವೊತ್ತವೈತಂದುದರ್ತಿಯಲಿ ॥ ೮೭

ಚಿನ್ನದ ಹರಡೆ ಬಿರುದಿನ ಬೆಳ್ಳಿಯ ಕಟ್ಟ
ನುನ್ನತವಾದ ಸೇಜೆಯದ ।
ಹೊನ್ನ ಭೂಷಣದ ವೈಗಾವಲೊಳಗದರ
ಸನ್ನಾಹವೈತಂದುದಾಗ ॥ ೮೮

ಹಡಪ ಸೀಗುರಿ ಕುಂಚ ಕಾಳಾಂಜಿ ಪಾವುಗೆ
ವಿಡಿದು ಸಂತೋಷದೊಳಾಗ ।
ಕಡು ಸೊಬಗಾಂತು ಸಮ್ಮುಖದೊಳಗದ
ಗಡಣವೈತಂದುದತಿರ್ಯಯಲಿ ॥ ೨೯

ನವರತ್ನಗಳ ಕಾಲು ಗಗ್ಗರ ಪೊಂಗೆಜ್ಜೆ
ಕಿವಿಯ ಮುತ್ತಿನ ಕುಚ್ಚುಗಳ ।
ತವೆ ಸೆಡಕಿನ * ಝಲ್ಲಿತೆರದ ಪಕ್ಕರಿಕೆಯ
ಭುವನೇಶನಶ್ವವೈದಿದುವು ॥ ೯೦

ಮಿಸುನಿಯ ನಿಗಳದ ಮೊಗಗನ್ನಡಿ ಕಾಂತಿ
ವಿಸರದ ಚೆನ್ನ ಹಕ್ಕರಿಕೆ ।
ಪೊಸ ಸಮ ಕಟ್ಟಿನ ಝಲ್ಲಿಗಳಿಂದ ರಾ
ಜಿಸುವ ದಿವ್ಯಾಶ್ವವೈದಿದುವು ॥ ೯೧

ಬಾಲ ಸೂರ‍್ಯನ ಪ್ರಭೆಯನು ಸೋಲಿಸುವ ರತ್ನ
ಜಾಲದುಭಯ ತರಕಸದ ।
ಮೇಲು ಪಚ್ಚೆಳದರಳೆಲೆಯ ತುರಂಗಮ
ಸಾಲುಗೊಂಡೈತಂದುವಾಗ ॥ ೯೨

ಕೊರಳು ತುಂಬಿದ ಮುತ್ತಿನ ಸರ ನೊಸಲೊಳು
ಮೆರೆವ ಮಾಣಿಕ್ಯಜಾಳಿಗದ ।
ಬಿರುದಿನ ಪೊಂಬಾವಡೆಗಳ ಸಿಂಗರ
ಮೆರೆದ ತೇಜಿಗಳೈದಿದುವು ॥ ೯೩

ಕಟ್ಟಾಣಿ ಮುತ್ತಿನ ಮೊಗರಂಬ ನೆರೆ ಪುಟ
ವಿಟ್ಟ ಮಿಸುನಿಯ ಗುಬ್ಬಿಗಳ ।
ಕಟ್ಟಿದ ಹೊಕ್ಕುಳ ಗಂಟೆಯ ತೇಜಿಗ
ಳಿಟ್ಟಣಿಸುತಲೈದಿದುವು ॥ ೯೪

---

* ಝಲ್ಲಿತಂದವಕ್ಕರಿಕೆಯ.

ಸಂಗರ ಭೂಮಿಯೊಳಗೆ ರಿಪು ವಕ್ಷೋ
ರಂಗದೊಳಗೆ ನಾಟ್ಯಗೈದು ।
ಹಿಂಗದೆ ಧೈರ್ಯದ ಜೀವವೆಬ್ಬಿಸುವ ತು
ರಂಗಗಳೈತಂದುವಾಗ ॥ ೯೫

ಬಿರುದಿನ ನೆರೆ ಪರ ಬಲ ಭಯಂಕರನೆಂಬ
ಕರಿ ರಾಜ ಸಿಂಗರವಾಗಿ ।
ವರ ಮದ ಗಜಗಳ ಖೇಳ ಮೇಳದೊಳಾಗ
ಬರುತಿರ್ದುದೇನ ಬಣ್ಣಿಸುವೆ ॥ ೯೬

ಉದಯಾದ್ರಿಯು ಮೇಲೆ ಬಾಲ ಸೂರ್ಯನ ಪ್ರಭೆ
ಮುದವೆದ್ದು ರಾಜಿಸುವಂತೆ ।
ಮದ ಗಜದಮುಖಪದದಲಿ ಪೊನ್ನ ರೆಂಚೆಗೆ
ಪದುಳದೆ ಹೊಳೆಯುತೊಪ್ಪಿದುದು ॥ ೯೭

ಮೇರು ಗಿರಿಯು ಕೋಡುಗಲ್ಗಳಿಂ ಗಂಗೆಯು
ಧಾರೆ ಭೂತಳಕಿಳಿವಂತೆ ।
ವಾರಣದುಭಯ ಕರ್ಣದೆ ರಾಜಿಸುವ ಝಲ್ಲಿ
ಬೀರಿತು ಧವಳ ದೀಧಿತಿಯ ॥ ೯೮

ಕರಿ ಕಪೋಲದ ಮದ ಸೊಗಡೆಂದು ತುಂಬಿಯು
ನೆರವಿಗೆ ಪರಿಮಳವೀವ ।
ಅರಳು ಮಲ್ಲಿಗೆ ಗೊಂಚಲೆನೆ ಗಜ ಕರ್ಣದೆ
ಮೆರೆದುವು ಮುತ್ತಿನ ಕುಚ್ಚು ॥ ೯೯

ಮಂದರಾದ್ರಿಯು ನೆರೆ ಬಿಗಿದುರಗೇಂದ್ರನ
ಬಂಧುರ ದೇಹದಂದದಲಿ ।
ಕುಂದದೆ ಮೆರೆದುದು ಮದ ಕರಿಯುರದೊಳ
ಗೊಂದಿಹ ಹೊರಜೆಯುತ್ತರಿಯಲಿ ॥ ೧೦೦

ಮೇಲೆ ಕಾರ್ಗಾಲದ ಘನದೊಳು ಮೂಡಿದ
ಬಾಲ ಸೂರ್ಯನ ಬಿಂಬದಂತೆ ।
ಆಲೋಕಿಸಿ ರನ್ನ ಮಿಸುನಿಗನ್ನಡಿ ಶುಂ
ಡಾಲದ ನೊಸಲೊಳೊಪ್ಪಿದುದು ॥ ೧೦೧

ಕೊರಳ ಹೊರಜಿ ಕುಂಭಸ್ಥಳ ಕೋಹಾಳ
ಸರ ಗಂಟೆ ಪಕ್ಕ ಗಂಟೆಗಳು ।
ಬಿರುದಿನ ಪಟ ಪಲ್ಲವ ಸತ್ತಿಗೆ ಮದ
ಕರಿಯ ಮೇಲೊಡನೆ ಮೆರೆದುವು ॥ ೧೦೨

ನೀಲಾದ್ರಿ ಶಿಖರದಿಂದಿಳಿವ ಕಾಳಿಂದಿಯ
ಕಾಲುವೆಯೆನೆ ಭದ್ರ ಗಜದ ।
ಮೇಲು ಕಪೋಲದೆ ಸುರಿವ ಮದಕೆ ನೆರೆ
ರೋಲಂಬ ಕುಲವೆರಗುವುವು ॥ ೧೦೩

ಗಿರಿ ಶಿಖರದೆ ಪೂ ತುಂಬಿದ ಕಕ್ಕೆಯ
ಮರದಂತೆಯುತಿ ಚೆಲುವಿಂದ ।
ಪರಿ ಪರಿ ಯಾಭರಣದ ಶೃಂಗಾರದೆ
ಮೆರೆದರು ಮಾವುತರಾಗ ॥ ೧೦೪

ಇಂತೊಪ್ಪುವ ಕರಿಗಳುಗೂಡಿ ಪಟ್ಟದ
ದಂತಿಯೈತಂದರಮನೆಯ ।
ಮುಂತೆ ರಾಜಿಪ ಬಾಗಿಲ ಹಜಾರದ ಮುಂದೆ
ಸಂತಸದೊಳಗೊಪ್ಪಿದುದು ॥ ೧೦೫

ಆನೆ ಕುದುರೆ ಮನ್ನೆಯ ಮಂಡಲಿಕರು
ನಾನಾ ದೆಸೆಯರಸುಗಳು ।
ಭೂನಾಥನ ಹಜಾರದೆ ಮುಂದೆ ಬಹಳ ಸು
ಮ್ಮಾನದೆ ಮೆರೆದರರ್ತಿಯಲಿ ॥ ೧೦೬

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೊಳಗೆಯು ಸಂಧಿ
ಮುದದ ಸುಧವರ್ಣಾನುಬಂಧಿ ॥ ೧೦೭

ಎಳನೆಯ ಸಂಧಿ ಸಮಾಪ್ತಂ.

---

# ಇಪ್ಪತ್ತು ನಾಲ್ಕನೆಯ ಸಂಧಿ

ಅರಸಿನವರ ಶೃಂಗಾರ

**ಸೂಚನೆ**॥ ನರಸ ರಾಜೇಂದ್ರ ರಂಗನ ರಥೋತ್ಸವಕಾಗ
ಬರುವ ಸಂಭ್ರಮವ ಬಣ್ಣಿಸುವೆ ॥

ಬಳಿಕಲೀ ಪರಿಯೊಳೊಪ್ಪುವ ಸಂತೋಷದೊ
ಳೆಳೆಯು ಮೇಲಣ ಸರ್ವ ಜನರು ।
ನಳಿನಾಕ್ಷ ರಂಗ ಧಾಮನ ತೇರ ಬೀದಿಯೊ
ಳೆಳಪಟ್ಟು ಮೆರೆದರತಿ-ಯಲಿ ॥ ೧

ಆ ಸಮಯದೊಳರಸನ ನೇಮದೆ ರಾಣಿ
ವಾಸ ಭೋಗಾಂಗನಾ ನಿವಹ ।
ಭಾಸುರವಹ ತಿರು ನಾಳ ನಿಟ್ಟಪೊಡೆ ವಿ
ಲಾಸದೆ ಸಿಂಗರಿಸಿದರು ॥ ೨

ಪತಿ ಭಕ್ತಿ ಸಚ್ಚರಿತಾನುರಂಜನೆ ನೆರೆ
ವ್ರತ ನಿಷ್ಠೆ ಬಹು ಧರ್ಮ ಶೀಲ ।
ಅತಿ ದಯೆ ಸುಗುಣತ್ವ ಭೂಪನ ಪಟ್ಟದ
ಸತಿಯರ ಕೆಳಗೊಂಡಿಹುವು ॥ ೩

ಪರಮ ಮಂಗಳಕೆ ಪಾರ್ವತಿ ಸೌಭಾಗ್ಯದ
ನೆರವಣಿಗೆಗೆ ಸಿರಿ ದೇವಿ ।
ವರ ವಿದ್ಯಾ ಕಲಾ ಪ್ರೌಢಿಗೆ ಶಾರದೆ
ಸರಿ ಮಿಗಿಲೆನಿಸಿ ರಾಜಿಪರು ॥ ೪

ಹೊಳೆವ ನಾಟಕ ಶಾಲೆಯು ಮುದ್ದು ಪಾತ್ರದ
ನಳಿನಾಕ್ಷಿಯರು ಗಾನದವರು ।
ಸಲೆ ಸರ್ವ ಶಾಸ್ತ್ರ ಕೋವಿದೆಯರು ಸೊಬಗಿಂದ
ಲಳವಟ್ಟ ಬಗೆಯ ಬಣ್ಣಿಸುವೆ ॥ ೫

ಕೆಂಜಾಜಿಯ ದಿವ್ಯ ಸೌರಭ್ಯವೆನಪ
ರಂಜಿಯೊಳಗೆ ಮಿಗೆ ಹುದುಗಿ ।
ಕಂಜಜ ಕೈಗೈದ ಜೀವ ಪುತ್ಥಳಿಯೊಲು
ರಂಜಿಸಿದರು ಕೋಮಲೆಯರು ॥ ೬

ಮೋಹನ ಮಂತ್ರದೋಳಿಗಳೋ ಮನಸಿಜ
ನಾಹವದಲಿ ಮುಂದುವರಿವ ।
ಸಾಹಸವಿಡಿದ ಪಟ್ಟದ ಮದ ಕರಿಯು ಸ
ಮೂಹವೆನಲು ರಂಜಿಸಿದರು ॥ ೭

ಎಸಳುಗಂಗಳ ದಿಟ್ಟಿಯು ಕೂರಿಟ್ಟಿಯು
ಮಿಸುಪ ಸೆಳ್ಳುಗುರ ಸುರಗಿಯು ।
ಪೊಸ ದಿವ್ಯಾಂಗ ಖಂಡೆಯಗಳಿಂದೆಸೆದರು
ಕುಸುಮ ಶರನ ಪಡೆಯಂತೆ ॥ ೮

ತಳಿರು ಪೊಂಬಾಳೆ ಕೆಂದಾವರೆ ದಂಟುಗ
ಳಳನೂಲು ಲಲಿತ ತಮಾಲ ।
ಬೆಳಗಾಯಿ ನೈದಿಲು ಹೆಂಗಳ ದಿವ್ಯಾಂಗ
ಲಲಿತ ನಂದನದೊಳೊಪ್ಪಿದುವು ॥ ೯

ನವಿಲು ಪಾರಿವ ಕೋಗಿಲೆ ಗಿಳಿಯರಸಂಚೆ
ತವೆ ತುಂಬಿಯು ಬಳಗಗಳು ।
ಸುವಿಲಾಸವಡೆದ ಹೆಂಗಳ ಚೆಲುವಿಕೆಗೆ ಸೋ
ತವಯವಗಳಲಿ ಮೆರೆದುವು ॥ ೧೦

ಕರಿ ಹರಿ ತಾವರೆ ಚಂದ್ರಮನೆಳ ಮಿಾನು
ನೆರೆ ರಥಾಂಗಗಳು ತಮ್ಮೊಳಗೆ ।
ಪಿರಿದು ವೈರವ ಮರೆದಂಗನೆಯರ ತನು
ವರ ವಲ್ಲರಿಯೊಳೊಪ್ಪಿದುವು ॥ ೧೧

ಸುಳಿದಾಡುವಬ್ಜ ನೇತ್ರೆಯರ ಪಾದಾಂಗುಳಿ
ಗಳವಟ್ಟ ನಖದಳತಗೆಯು ।
ಬಲುಗೆಂಪು ನೆಲದೊಳೊಪ್ಪಿತು ಭೂ ದೇವತೆ
ತಳೆದ ಕುಂಕುಮ ಗಂಧದಂತೆ ॥ ೧೨

ನಸು ನಗೆ ಯೆಸೆವ ಕೌಮುದಿ ಕಣ್ಗಳು ಮಿಗೆ
ಮಿಸುಪ ಕನ್ನೈದಿಲ್ಗಳಾಗೆ ।
ನೊಸಲ ಕಸ್ತೂರಿಯ ತಿಲಕದ ಲಾಂಛನದಿಂದ
ಶಶಿ ಮುಖಿಯರು ರಾಜಿಸಿದರು ॥ ೧೩

ರತಿ ದೇವಿಯರ ಸಮೂಹವೊ ಸೌಭಾಗ್ಯದ
ಸತಿ ನೆರೆ ಪಲವು ರೂಪಿನಲಿ ।
ಕ್ಷಿತಿಯೊಳುನ್ನತದ ಚೆಲ್ವಿನೊಳೊಪ್ಪಿದಳೆನ
ಲತಿಶಯಾಂಗನೆಯರೆಸೆದರು ॥ ೧೪

ಜಾಣಿನ ಜಂತ್ರ ದೇವತೆಗಳೊ ನೂತನ
ವಾಣಿಯರುಗಳೆಂತೆನಲು ।
ಕ್ಷೋಣಿಗೆ ನಾನಾ ಬಗೆಯ ವಿದ್ಯೆಗಳ ಪ್ರ
ವೀಣೆಯರೆಸೆದರೇ ವೇಳ್ಯ ॥ ೧೫

ಸೋಗೆದುರುಬಿನ ಶೃಂಗಾರ ವೇಣಿಯ ಸೊಗ
ಸಾಗಿ ಮೆರೆವ ಪೆರೆ ನೊಸಲ ।
ರಾಗವಿಡಿದ ಕೈರವ ನೇತ್ರಗಳ ನೃಪ
ಭೋಗಾಂಗನೆಯರೊಪ್ಪಿದರು ॥ ೧೬

ವರ ತಿಲ ಕುಸುಮ ನಾಸಿಕ ದಿವ್ಯ ಪರಿಮಳ
ವೆರೆದ ಕರ್ಪೂರ ಭರಣಿಗಳ ।
ಸುರುಚಿರವಹ ಬಾಯ್ದೆರೆಗಳ ಸೊಬಗಿನ
ತರುಣಿಯರೆಸೆದರತಿರ್ಯಲಿ ॥ ೧೭

ನವ ರತ್ನಗಳ ಕರ್ಣ ಭೂಷಣ ಕಾಂತಿಯು
ತವಕದೆ ಕೆಳಗೊಂಡು ಮೆರೆವ ।
ಖವಖವಿಸುವ ಕದಪಿನ ಮುದ್ದು ಕಾಂತಾ
ನಿವಹವೊಪ್ಪಿದುದೇನೆಂಬೆ ॥ ೧೮

ಥಳ ಥಳಿಸುವ ಕಂಬು ಕಂಜ ಕುಟ್ಮಲ ಬಲು
ಸುಳಿ ಸೆಳ * ತೆರೆ ತಿಳಿ ನೀರ ।
ತಳೆದು ನೃಪಾಲನರ್ತಿಯ ಕ್ರೀಡೆಯು ದಿವ್ಯ
ವಿಲಸಿತ ಸರಸಿಯಂತಿಹರು ॥ ೧೯

ಲಾವಣ್ಯ ಜಲ ಪೂರ್ಣ ಕುಂಭ ರಂಭಾವಳಿ
ಕಾಪನಂಬಿನ ಬತ್ತಳಿಕೆ ।
ತೀವಿದ ಕೆಂದಳಿರುಗಳ ಕೆನ್ನೀಮುರ್ತ್ತ
ಭಾವಕಿಯರು ತಳೆದಿಹರು ॥ ೨೦

ಮಿರುಗುವ ಸೌಂದರ್ಯ ಸಾರ ಸಂಭ್ರಮಗಳ
ಪರಮ ವಿಲಾಸವ ತಳೆದು ।
ಅರಸನ ಕಣ್ತುಂಬಿಗಾಸ್ಯಾಬ್ಜ ಬಂಧುರ
ದುರು ಪರಾಗವ ಬೀರುತಿಹರು ॥ ೨೧

ಕೆಂವಳರೆಸಳ ದೀಧಿತಿ ತಮ್ಮ ಚರಣಾರ
ವಿಂದದಂಗುಳಿಯು ಚೆಲ್ವಿಕೆಗೆ ।
ಮುಂದೆಣೆಯಿಲ್ಲೆಂದು ವೀರ ಮುದ್ರೆಯು ನಗು
ತೊಂದಿಸಿ ಮೆರೆದರಂಗುಟಕೆ ॥ ೨೨

* ಥಳಿ.

ಮೇಲೆ ನಿಮ್ಮಯ ಚೆಲುವಿಕೆ ನಮ್ಮ ಪದ ನಖ
ಜಾಲಕೆಣೆಯೆ ಯೆಂದು ಸುರರ ।
ಬಾಲೆಯರನು ಜರೆದುರೆ ಬಿರುದಿನ ಹೊನ್ನ
ಕಾಲುಂಗುರವನಿಕ್ಕಿದರು ॥ ೧೩

ಸೊಲ್ಲಿಪಲೆಮ್ಮ ಸೊಬಗು ನಾಗ ಸ್ತ್ರೀಯ
ರಲ್ಲಿ ಹೋಲಿಸಿದೊಡಿಲ್ಲೆನುತ ।
ಉಲ್ಲಾಸದೆ ಪರಿಹಾಸಕಗೈದಾಗ
ಪಿಲ್ಲಿ ಮಂಟಿಗೆಯನಿಕ್ಕಿದರು ॥ ೧೪

ಸುರ ಲೋಕದೊಳಗೆಮ್ಮಂದದ ಪತಿ ಭಕ್ತಿ
ವೆರೆದ ನಾರಿಯರಿಲ್ಲೆಂದು ।
ಕರ ಹೊಯ್ಯು ನಗುತ ಪಾದಾಂಗುಲಿಗಳಿಗಾಗ
ಕಿರು ಪಿಲ್ಲಿಯನಿಕ್ಕಿದರು ॥ ೧೫

ನೆರೆ ತಮ್ಮ ನಾಟ್ಯಕ್ಕೆ ರಂಭೆಯೂರ್ವಶಿ ಮುಖ್ಯ
ತರುಣಿಯರೆಣೆಯಲ್ಲವೆಂದು ।
ಜರೆದುರೆ ನವ ರತ್ನದ ಬಿರುದಿನ ದಿವ್ಯ
ಚರಣ ಪೆಂಡೆಯವನಿಕ್ಕಿದರು ॥ ೧೬

ಪದ ಕಮಲಗಳ ಬಂಡುಣಿಸಿಗೆಳಸಿ ಬಂದ
ಮದ ಹಂಸ ಮಿಥುನದಂದದಲಿ ।
ಮುದವಡೆದಿಹ ಮುತ್ತಿನ ಪಾಯವಟ್ಟಗಳ
ಸುದತಿ ರನ್ನೆಯರಿಗೊಪ್ಪಿದುವು ॥ ೧೭

ಮಂಟಿಗೆ ಕಿರು ಪಿಲ್ಲಿ ಕಾಲುಂಗುರದ ದನಿ
ಗೆಂಟು ಮಡಿಯು ದಿವ್ಯ ಸ್ವರವ ।
ಉಂಟು ಮಾಡುವ ತೊಡರೆಂದು ಪಾದಕೆ ಹೊನ್ನ
ಗಂಟೆ ಸರವ ಕಟ್ಟಿದರು ॥ ೧೮

ವಿಲಸಿತ ಮುಖ ಚಂದ್ರನೆರಳಗೆ ತನು ಮಧ್ಯ
ದೊಳಗಿಹ ಹರಿ ಪಾರ್ವ್ರದೆನುತ ।
ಅಲರಂಬನದ ಬಂಧಿಪ ಜಾಲವೆನೆ ರನ್ನ
ಬಲೆಯುಡಿದಾರವೊಪ್ಪಿದುವು ॥ ೧೯

ಕರಿಣಿ ಪಯೋಧರ ಭಾರಕ್ಕೆ ಸೆಳ ನಡು
ಪಟು ತಗ್ಗಿ ಬಳುಕುವುದೆಂದು ।
ನಿಟಲಾಕ್ಷ ವೈರಿ ಕಟ್ಟಿಟ್ಟೊಲು * ಟೊಂಕವೆ
ಕಟಿ ಸೂತ್ರಗಳೊಪ್ಪಿದುವು ॥ ೨೦

ಸುರ ಗಿರಿ ತಟವ ಬಳಸಿ ಸಾಲುಗೊಂಡಿಹ
ವರ ನವ ರತ್ನ ಜಾಲಗಳ ।
ಸಿರಿಯೊಲು ದಿವ್ಯ ಕಾಂಚೀ ದಾಮ ರಂಜಿಸಿ
ಪರಿಪೂರ್ಣ ಪ್ರಭೆಯು ಬೀರಿದುದು ॥ ೨೧

ಮುಡಿಯು ಭಾರಗಳ ನಾರಿಯುರ ಕಂಬು ಗ್ರೀವ
ಬಿಡದಾನಲಾರವೆಂದೆನುತ ।
ಕುಡು ವಿಲ್ಲ ರಕ್ಷೆಗಟ್ಟಿದ ಮಂತ್ರ ಲೇಖನ
ದಡಹೆನೆ ಪ್ರಸ್ತಿಯೊಪ್ಪಿದುವು ॥ ೨೨

ಒಡ ಹುಟ್ಟಿದರ ಕಂಡು ಬಿಗಿಯಪ್ಪಿ ಸ್ನೇಹವ
ಬಿಡದಿಹ ಸು ಜನರಂದದಲಿ ।
ಕಡು ತವಕದೆ ಕಂಬು ಕಂಠವ ಸುತ್ತಿಕೊಂ
ಡೊಡನೊಪ್ಪಿದುವು ಮುಕ್ತಾಳಿ ॥ ೨೩

ಲೀಲೆಯೊಳಗೆ ಹೃದಯಾಬ್ಜವನಲರಿಪ
ಬಾಲ ಸೂರ್ಯನ ಬಿಂಬದಂತೆ ।
ಮೇಲುರದೊಳಗೊಪ್ಪುವ ರತ್ನ ಪದಕದ
ಬಾಲಕಿಯರು ರಾಜಿಸಿದರು ॥ ೨೪

* ಟೊಂಕೆಯು.

ಗುಣ ಮಣಿಯೆನಿಸಿ ರಾಜಿಪ ಕಾವ ಪಂಕಜೇ
ಕ್ಷಣೆಯರ ಹೃದಯಾಬ್ಜದೊಳಗೆ ।
ಕ್ಷಣ ಬಿಟ್ಟಿರನೆಂದು ನೊಳಸ್ಪೃಡೈತಂದೊಲು
ಗಿಣಿಯು ತಾಲಿಗಳೊಪ್ಪಿದುವು ॥ ೩೫

ಹೆಂಗಳ ಮೊಗದಾವರೆ ದಿವ್ಯ ನಯನೋತ್ಪ
ಲಂಗಳ ಮಿಗೆಯಲರ್ಚಿಸುವ ।
ಮಂಗಳ ರವಿ ಶಶಿ ಬಿಂಬದೋಲ್ಪರಳೋಲೆ
ಕಂಗೊಳಿಸಿದುವು ಕರ್ಣದಲಿ ॥ ೩೬

ಹೊಳವ ಮುಖಾಬ್ಜ ಮಂಡಲವನು ಸಾಲ್ಗೊಂಡು
ಬಳಸಿಹ ತಾರಾಳಿಯಂತೆ ।
ನಳಿನ ದಳಾಯತೇಕ್ಷಣೆಯರ ಕೊರಳೊಳ
ಗಳವಟ್ಟುವು ಕಂಠ ಮಾಲೆ ॥ ೩೭

ಥಳ ಥಳಿಸುವ ರತ್ನದ್ವೈರಗಡಗ ದಿವ್ಯ
ನುಲಿಗಡಗಗಳಾಮಲಕದ ।
ತೊಳಪ ಕಡಗ ಹಲಸಿನ ಕಾಯಿಗಡಗಗ
ಳಳವೆಣ್ಗಳೆಸೆದರರ್ತಿಯಲಿ ॥ ೩೮

ಕೀಲ ಕಡಗ ಹಸ್ತ ಕಡಗ ಹೀರಾವಳಿ
ಡಾಳಿಸುತಿಹ ಸಿಂಹ ಕಡಗ ।
ಗೌಳ ಸರದ ಪಣಿಗಡಗದ ಸೊಬಗಿನ
ನೀಲ ಕುಂತಳೆಯರೊಪ್ಪಿದರು ॥ ೩೯

ಮಿರುಗುವ ಕಾರ್ಮುಗಿಲೆಡೆಯೊಳು ರಾಜಿಪ
ವರ ಬಿದಿಗೆಯ ಶಶಿಯಂತೆ ।
ತರುಣಿ ರನ್ನೆಯರುತ್ತಮಾಂಗದ ಚಿಕುರದೆ
ಹೆರೆ ಚಂದ್ರಮನೊಪ್ಪಿದುವು ॥ ೪೦

ಮಿಸುಪ ರತ್ನದ ಕೊಪ್ಪು ವೆಂಟೆಯು ನೊಸಲೊಳ
ಗೆಸೆವ ಮುತ್ತಿನ ಬೊಟ್ಟುಗಳ ।
ಹೊಸ ಹರೆಯದ ಹೊಂಮಿನ ಬಾಲೆ ವೆಂಗಳು
ಜಸವಡೆದೆಸೆದರೇನೆಂಬೆ ॥ ೪೧

ಜಡೆ ಸರ ಸೂರಿಯು ಕಾಂತಿ ಮೌಕ್ತಿಕಗಳ
ಮುಡಿವಲೆ ಮೆರೆವ ಬಾವುಲಿಯು ।
ನಿಡುಗುರುಳಿನ ಮುತ್ತಿನ ಕುಚಿ ನಿಂದ ಬ
ಲ್ಬೆಡಗಾಗಿ ಮೆರೆದರತಿಯರಲಿ ॥ ೪೨

ನವ ರತ್ನದುಂಗುರ ಹೊಸ ಮಿಸುನಿಯು ತಾತಿ
ಛವಿ ಛವಿಸುವ ತೋಳ ಬಳೆಯು ।
ಕುವಲಯ ನೇತ್ರೆಯರೆಸೆದರು ಸುಮನಸ
ಯುವತಿಯರೊಪ್ಪವ ಜರೆದು ॥ ೪೩

ಎಸೆವ ಬೊಂಬೆಯ ಬರಹದ ಪಟ್ಟೆ ಪೀತಾಂಬ್ರ
ಪೊಸ ಚಂದ್ರಗಾವಿ ಪೊಪ್ಪುಳಿಯು ।
ಮಿಸುಪ ಶುಭ್ರದ ದಿವ್ಯ ದುಗುಲದ ನಿರಿಗಳ
ಶಶಿ ಮುಖಿಯರು ರಂಜಿಸಿದರು ॥ ೪೪

ಮಿರುಪ ಯೌವನ ವನ ವಲ್ಲಿಯೊಳ್ ಪೂತೊಪ್ಪಿ
ಮೆರೆವರಳ್ಗಳ ಮೊತ್ತದಂತೆ ।
ಸರಸಿಜಾಕ್ಷಿಯರ ಜಡೆಯೊಳೊಪ್ಪಿದುವಾಗ
ಪರಿಮಳಿಸುವ ಪೂ ಮಾಲೆ ॥ ೪೫

ನಿರಿಗುರುಳ್ಗಳ ನೇವರಿಸುತ ಸಾಲಿಯ
ಸೆರಗ ಮೇಲುದ ಸಂತವಿಡುತ ।
ಸಿರಿ ನೊಸಲೊಳು ಕಸ್ತುರಿಯ ತಿದ್ದುತ ಹೆಂಗ
ಳರಸಿಯರೆಸೆದರತಿಯರಲಿ ॥ ೪೬

ಅಂದುಗೆಗಳ ಝಣತ್ಕೃತಿ ಪಿಲ್ಲಿ ಮಂಟಿಗೆ
ಗೊಂದಿದ ಸ್ವರ ಮೇಖಳೆಯು ।
ಚೆಂದದ ಕಿರು ಗಂಟೆಯ ದನಿ ದಶ ದಿಕ್ಕ
ಮುಂದುವರಿದು ಮುಸುಕಿದುದು ॥ ೪೭

ತರುಣಿಯರುರುಗಳಟ್ಟಣಿಸಿ ಮೈ ಮೈ ಸೋಂಕ
ಲುರು ಹೇಮದೊಡವುಗಳ್ಗಸೆದು ।
ವರ ರಜವಿಳೆಯೊಳೊಪ್ಪಿತು ಬಾಲ ಸೂರ್ಯನ
ಕಿರಣದ * ಡಾಕ್ಕ ತೋರಿಸುತ ॥ ೪೮

ಇಂತಪ್ಪ ಚೆಲುವ ನಾರಿಯರು ಸಿಂಗರಿಸಿಯ
ತ್ಯಂತ ಸಂತೋಷವ ತಳೆದು ।
ಕಂತು ಸನ್ನಿಭ ನರಸೇಂದ್ರಗಲಂಕಾರ
ಮಂ ತವೆ ರಚಿಪುದೇ ವೇಳ್ವ ॥ ೪೯

ಧರಣಿಪ ಕೇಳೀ ವನ ಲಕ್ಷ್ಮಿಯಂತೊರ್ವ
ಹರುಷದೊಳಗೆ ನಡೆತಂದು ।
ಪರಿಮಳಿಸುವ ಪೂ ಮಾಲೆಯ ಭೂಪನ
ಸಿರಿ ಮುಡಿಗಳವಡಿಸಿದಳು ॥ ೫೦

ಮೂಡಿದ ಬಾಲ ಸೂರ್ಯ ಪ್ರಭೆ ಯಿದರ ಸ
ಘಾಡಿಕೆಗೆಣೆಯೆ ಭೂ ಪಾಲ ।
ನೋಡೆಂದು ನಗುತೊರ್ವ ಮಿಸುನಿಯ ರುಮ್ಮಾಲ
ಜೋಡಿಸಿದಳು ವರ ಶಿಖಿಗೆ ॥ ೫೧

ಧರಣೀಶ್ವರ ಕುಲ ತಿಲಕ ನೀನಹುದೆಂದು
ಸರಸಿಜ ಮುಖಿ ಯೊರ್ವ ನಗುತ ।
ನರಸ ರಾಜೇಂದ್ರನ ಪೆರೆ ನೊಸಲಿಗೆ ಕ
ಸ್ತೂರಿ ತಿಲಕವ ರಚಿಸಿದಳು ॥ ೫೨

---

* ಧಾತ

ನೆರೆ ಜಸ ವೆಂಣ ಭೂ ವರನುತ್ತಮಾಂಗಕೆ
ಸಿರಿ ದೇವಿ ಸೇರಿಸುವಂತೆ ।
ಬಿರುದಿನ ಕೀರ್ತಿ ಮುಖದ ದಿವ್ಯ ವಜ್ರದ
ವಿರುಪ ತುರಾಯ ಕಟ್ಟಿದಳು ॥ ೫೩

ಮುಖ ಚಂದ್ರನಿಗೆ ಮೋಹಿಸುತಿಹ ತಾರಾ
ನಿಕರವ ತಂದು ಕೂಡಿಸಿದ ।
ಸಖಿಯೆನೆ ಮುತ್ತಿನ ಚೌಕುಳಿಗಳನಿಟ್ಟ
ಳಕಳಂಕನಿಗೊರ್ವ ನೀರೆ ॥ ೫೪

ಇಳೆಯಾಣ್ಮನ ಮುಖಾಬ್ಜದ ಪರಿಮಳದೊಳು
ಬಳೆ ಯೆಂದು ತುಂಬಿಯು ನುರಿಯು ।
ತಳುವದೆ ತಂದು ಸೇರಿಪ್ಪೊಲಿಂದ್ರ ನೀಲದ
ಹೊಳವ ಬಾವುಲಿಯ ಕಟ್ಟಿದಳು ॥ ೫೫

ವರ ಜಯ ಲಕ್ಷ್ಮಿ ಮೋಹಿಸಿ ನಗುತ್ತೈತಂದು
ಧರಿಸಿದ ದುಂಡು ಮಲ್ಲಿಗೆಯ ।
ಸರವೆನೆ ತರುಣಿಯೊರ್ವಳು ಕಂಠ ಮಾಲೆಯ
ಕೊರಳೊಳಿಟ್ಟಳು ಭೂ ಪತಿಯ ॥ ೫೬

ಧರಣೀಶ್ವರ ಧೈರ್ಯ ಲಕ್ಷ್ಮಿ ನಿನ್ನುರದೊಳು
ಸ್ಥಿರವಾಗಿ ನೆಲಸಿಹೆನೆಂದು ।
ಹರುಷದೆ ಬಂದಳೀಕೆಯು ಸಲಹೆಂದೊರ್ವೆ
ವರ ವಜ್ರ ಪದಕವಿಕ್ಕಿದಳು ॥ ೫೭

ನರ ರೂಪ ಮನ್ಮಥ ರತಿ ದೇವಿಯು ನಿ
ನ್ನುರದೊಳಿಂಬಿಟ್ಟುಕೊಳ್ಳೆಂದು ।
ಹರುಷದೆ ನುಡಿದೊರ್ವ ಪಚ್ಚೆಯ ಪದಕವ
* ಧರಿಸಿದಳವನೀಶ್ವರಗೆ ॥ ೫೮

* ಧರಿಸೆಂದಳವನೀಶ್ವರಗೆ.

ಧರಣಿಪ ನಿನ್ನಯ ಹೃದಯಾಬ್ಜದೊಳಗಿಹ
ಹರಿಯ ದಿವ್ಯಾಂಗ ದೀಧಿತಿಯ ।
ಸಿರಿ ಯೀ ಪರಿಯೆ ಹೇಳೆಂದೊರ್ವೆ ನೀಲದ
ಮಿರುಪ ಪದಕವ ತೋರಿದಳು ॥ ೫೯

ಹರಿಯುರದೆಡೆಗೆ ಕೌಸ್ತುಭ ದಿವ್ಯ ರತ್ನವ
ವರ ಲಕ್ಷ್ಮಿ ಸೇರಿಸುವಂತೆ ।
ನೆರೆ ಪದ್ಮ ರಾಗದ ಪದಕವ ಭೂಪಗೆ
ಹರುಷದೆ ನೀಡಿದಳೊರ್ವೆ ॥ ೬೦

ಅರಿ ನೃಪ ಗಜ ಮಸ್ತಕವ ಸೀಳ್ದು ನೀ ನಿ
ನ್ನುರದೊಳಗೊಗೆದ ಮೌಕ್ತಿಕವ ।
* ಮೆರೆಸೆಂದು ಕಂಠೀರವೇಂದ್ರಗೆ ಮುತ್ತಿನ
ಸು ರುಚಿರ ಪದಕವಿಕ್ಕಿದಳು ॥ ೬೧

ತರುಣಿಯೊರ್ವಳು ತನ್ನ ದಿವ್ಯಾಂಗ ರುಚಿಯನು
ನರಸೇಂದ್ರನುರ ವನೆಯೊಳಗೆ ।
ಇರಿಸುವಂದದೆ ವೈಡೂರ್ಯದ ಪದಕವ
ಧರಿಸಿದಳೇನ ಬಣ್ಣಿಸುವೆ ॥ ೬೨

ಅಂದು ಶ್ರೀ ಹರಿ ನೀನೈತಂದು ಸಿಂಗರ
ದಿಂದೆನ್ನೊಳಿಹೆಯನವರತ ।
ಇಂದು ನಿನ್ನುರದೊಳಗಿಹೆನೆಂದು ಬಂದೊಲು
ಬೃಂದಾವನ ತಾಲಿ ಯಿಹುದು ॥ ೬೩

ಹೊಳೆವ ವಜ್ರದ ಕಂಠ ಮಾಲೆ ಮಾಣಿಕ್ಯದ
ಸು ಲಲಿತ ಕಂಠ ಮಾಲೆಗಳ ।
ನಳಿನಾಕ್ಷಿಯೊರ್ವಳು ದ್ವಯ ಕಂಠ ಮಾಲೆಯ
ಸಲೆ ಧರಿಸಿದಳು ಭೂ ಪತಿಗೆ ॥ ೬೪

* ವೈರಸಿಂದು.

ನಿಚ್ಚ ಕೈಯೆತ್ತಿ ಕೊಡುವ ದಾನ ಧರ್ಮಕ್ಕೆ
ಸಚ್ಚರಿತಾನು ರಂಜನೆಗೆ |
ಅಚ್ಚು ತನೊಲಿದಿತ್ತ ಬಿರುದ ಕೊಳ್ಳಂದೊರ್ವೆ
ವಚ್ಚೆಯು ಕಡಗವಿಕ್ಕಿದಳು || ೬೫

ಭೂ ತಳದೊಳು ಸೆಣಸುವ ರಿಪು ನೃಪ ಗಜ
ವ್ರಾತ ಪಂಚಾನನನೆಂದು |
ಪ್ರೀತಿಯಿಂದೊಲಿದು ಭೂಪನ ಕೈಗೆ ಹವ್ಮಾರ
ತಾತಿಯು ಕಟ್ಟಿದಳೊರ್ವೆ || ೬೬

ಅರಿ ನೃಪರೆದೆ ಧೈರ್ಯ ಗಿರಿಯು ಸೀಳ್ಮಾಡುವ
ನೆರೆ ಕುಲಿಶಾಯುಧವೆಂದು |
ತರುಣಿಯೊರ್ವಳು ನವ ರತ್ನದ ಕೈಯುಂಬ
ಧರಿಸಿದಳವನೀಶ್ವರಗೆ || ೬೭

ನವ ರತ್ನದುಂಗುರ ಮುತ್ತಿನ ಕಂಕಣ
ತವೆ ದಿವ್ಯ ಕಟಿ ಸೂತ್ರಗಳ |
ಸು ವಿಲಾಸದೊಳಗೆ ನಾರಿಯರು ಭೂ ಪಾಲ
ನವಯುವದೊಳು ಧರಿಸಿದರು || ೬೮

ವರ ತೋಳ ಭಾಪುರಿ ನವ ರತ್ನ ಖಚಿತದ
ಸಿರಪೇಷ್ತುರಾಯಿ ಕಲ್ಗಿಯನು |
ಸರಸಿಜ ಮುಖಿಯೊರ್ವೆ ಪಿಡಿದು ನಿಂದಿರ್ದಳು
ಸ್ಮರನರಸಿಯೊಲಂದದಲಿ || ೬೯

ದುರವನೆಸಗಲಂಜಿ ಶರಣಾಗತರಾದ
ದೊರೆಗಳ ಮುಕುಟ ರತ್ನಗಳ |
ಕಿರಣವೆ ಕೆಳಗೊಂಡು ನರಸ ರಾಜೇಂದ್ರನ
ಚರಣ ಪೆಂಡೆಯುಗಳೊಪ್ಪಿದುವು || ೭೦

ಹೊಸ ಕೆಂದಾವರೆ ಯೆಸಳುಗಳಂತೆ ರಾ
ಜಿಸುವ ಪಾದಾಂಗುಳಿಗಳಿಗೆ ।
ಬಿಸಜಾಕ್ಷಿಯೊರ್ವಳು ನಗುತ ಸಂತೋಷದೆ
ಮಿಸುನಿಯ ಮಿಂಚನಿಕ್ಕಿದಳು ॥ ೩೧

ಕಟ್ಟಾಣಿ ಮುತ್ತು ತೆತ್ತಿಸಿದುಡಿಗೆಯೊಳಳ
ವಟ್ಟು ಮೆರೆದ ದುಪ್ಪಟದೆ ।
ಸೃಷ್ಟಿಗೆ ನರ ರೂಪ ನರ ಸಿಂಹನ ಪ್ರೋ
ಲ್ಲಾಷ್ಟ ಮೆರೆದ ನರಸೇಂದ್ರ ॥ ೩೦

ಈ ಪರಿಯಲಿ ಸಿಂಗರ ಗೈದು ನೆರೆ ನರ
ರೂಪ ನೃ ಸಿಂಹನೆಂಬಂತೆ ।
ಭೂ ಪಾಲ ವಂಶಾಂಬುಧಿ ಚಂದ್ರ ಕೀರ್ತಿ ಕ
ಲಾಪನೊಪ್ಪಿದನರ್ತಿಯಲಿ ॥ ೩೨

ಅರಿ ಭೂಮಿಪರ ಮಣಿ ಮಕುಟ ಚ್ಛವಿಯೊಳು
ಪರಿಶೋಭಿಸುವುವಿವೆಂದು ।
* ವರ ರತ್ನದ ಹಾವುಗೆಯನೊರ್ವ ಭೂಪನ
ಚರಣಾಬ್ಜ ಕಳವಡಿಸಿದಳು ॥ ೩೪

ಹರಿಯೆಡ ಬಲದಲಿ ಸಿರಿ ಸತ್ಯ ಭಾಮೆಯು
ರಿರದ್ಯೆದಿ ಬರುವಂದದಲಿ ।
ನರಸೇಂದ್ರನ ಪ್ರೈರಣೆಯ ಜೋಲ್ವೆರಗಾಂತು
ಗರುವೆಯರಿರ್ವರೈದಿದರು ॥ ೩೫

ರಾಗದೆ ಮದನನ ಕೈಯ ನಂಬುಗೆಗೊಂಬ
ಭೋಗದ ರತಿ ದೇವಿಯಂತೆ ।
ಭೂಗಧೀಶ್ವರ ಕಂಠೀರವೇಂದ್ರಗೆ ಕೈ
ಲಾಗಿತ್ತಳೊರ್ವಬ್ಜ ನೇತ್ರೆ ॥ ೩೬

---

* ನವರತ್ನದ.

ಭೂ ಲೋಲ ನಿನ್ನ ಮುಖಾಬ್ಜವನಲರಿಪ
ಬಾಲ ಸೂರ್ಯನ ನಿಟ್ಟಿಸೆಂದು ।
ಲೀಲೆಯಿಂ ತೋರ್ಪೊಲು ರತ್ನ ದರ್ಪಣವಾಂತು
ಬಾಲಿಕಿಯೊರ್ವಳೊಪ್ಪಿದಳು ॥ ೭೭

ಪಂಚೇಷು ರೂಪನ ಮುಖ ಪದ್ಮಕೆರಗುವ
ಚಂಚರೀಕವನೆಬ್ಬಿಪಂತೆ ।
ಅಂಚೆ ಗಮನೆಯೊರ್ವಳು ನವ ರತ್ನದ
ಕುಂಚವ ಬೀಸಿದಳೊಲಿದು ॥ ೭೮

ನೆರೆ ನಮ್ಮರಸನ ಶೌರ್ಯವ ಸುರ ಲೋಕ
ಕರುಪೆಂದು ಕೀರ್ತ್ಯಂಗನೆಯು ।
ಸಿರಿ ಜಯ ವಧುಗಳಟ್ಟಿದರೆನೆ ಶುಭ್ರ ಚಾ
ಮರವ ಚಿಮ್ಮಿದರೆಡ ಬಲಕೆ ॥ ೭೯

ವದನ ಶಶಿಯ ತಣ್ಪುಗೂಡಿ ಸೌರಭ್ಯದೆ
ಪುದುಗಿದ ಮಂದ ಮಾರುತನ ।
ಮದನ ದಿವ್ಯಾಂಗ ಲತೆಗೆ ಸೂಸುವೋಲೊರ್ವ
ಚದುರೆ ಬೀಸಿದಳಾಲವಟವ ॥ ೮೦

ಸಲೆ ಮುಖ ಸಿರಿ ನಿನ್ನ ಬಿಟ್ಟಿರಳೆಂದಾಗ
ಳೊಲಿದು ಕೈಲೆಡೆಯಿತ್ತು ನಲಿವ ।
ಕೆಳದಿಯೆಂದೆನಲೊರ್ವೆ ಕರ್ಪೂರ ವೀಳ್ಯದ
ಗಳಿಗೆಯನಿತ್ತಳರಸಗೆ ॥ ೮೧

ರೂಢೀಶ ನಿನ್ನಯ ಹೃದಯಾಬ್ಜರಾಗವ
ನೋಡ ಬೇಕಿಲ್ಲಿರಿಸೆಂದು ।
ಬೇಡಿ ಕೊಂಬೋಲೊರ್ವೆದ್ವಯ ಕರಾಬ್ಜದೊಳಾಗ
ನೀಡಿದಳಕ್ಕಳಾಂಜಿಯನು ॥ ೮೨

ಶಾರದೆ ನಮ್ಮರಸಿನ ಜಿಹ್ವಾಗ್ರದೆ
ಸೇರಿಹಳ್ಗೆಂಗೆ ನೋಡೆಂದು ।
ಓರಂತೆ ಕಳಾಪ್ರುವೊಲ್ ರತ್ನ ಗಿಂಡಿಯ ಪ
ನ್ನೀರನೊರ್ವಳು ನೀಡಿದಳು ॥ ೮೩

ಅಕಳಂಕ ರೂಪನ ಮುಖ ಚಂದ್ರಮನ ಕೂಡಿ
ಸುಖದೊಳಾಲಾಡು ನೀನೆಂದು ।
ಸಖಿ ದರ ಹಸಿತ ಬೆಳ್ದಿಂಗಳೀವೊಲು ಶುಭ್ರ
ಮುಖ ಪಾವುಡೆಯ ನೀಡಿದಳು ॥ ೮೪

ಇಂತಾಗ ನಾರಿಯರುಗಳೋಲೈಸಲು
ಕಂತು ಸನ್ನಿಭ ನರಸೇಂದ್ರ ।
ಸಂತೋಷದೊಳಂತಃಪುರದಿಂದಲ
ತ್ಯಂತ ಸಂಭ್ರಮದೊಳೈತಂದ ॥ ೮೫

ಬಳರಾಣುವೆಯ ಗಜೇಂದ್ರನ ತಿರು ನಾಳ
ಬಲು ಸಂಭ್ರಮವ ನೋಡುವೊಡೆ ।
ನೆಲವಾಡವೇರಲಪ್ಪಣೆಗೊಟ್ಟು ಭೂಪಾಲ
ಬಲು ಹರುಷದೊಳೈತಂದ ॥ ೮೬

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದ ಸುಧರ್ಮಾನುಬಂಧಿ ॥ ೮೭

೨೪ನೆಯ ಸಂಧಿ ಸಮಾಪ್ತಂ.

---

# ಇಪ್ಪತ್ತ್ರೈದನೆಯ ಸಂಧಿ.

ರಂಗನಾಥ ರಥೋತ್ಸವಕ್ಕೆ ರಾಜರು ಬಂದುದು.

**ಸೂಚನೆ**॥ ಕಡುಚೆಲ್ವ ರಂಗನ ಗಜ ರಾಜ ತಿರು ನಾಳು
ಬೆಡಗ ಬೀರಿತು ತ್ರೈಜಗಕೆ ॥

ಧ್ವನಿಗೈದುವನಿತರೊಳಗೆ ರಾಯ ಭೇರಿಗ
ಳನುವಾದ ಚೆನ್ನಗಾಳೆಗಳು ।
ಘನತರವಾದ ನಾನಾ ವಾದ್ಯದ ರವ
ವನಧಿ ಘೋಷವ * ಮೀರಿದುವು ॥ ೧

ಹೊರ ಬಾಗಿಲುಪ್ಪರಿಗೆಯು ಚಂದ್ರ ಶಾಲೆಗೆ
ಪಿರಿದು ಚಿಕ್ಕೊಳಗದವರ ।
ನೆರವಿಯೊಳರಸನೈತರುತಿರೆ ದಳ ಪತಿ
ಹರುಷದೆ ಕೈಲಾಗನಿತ್ತ ॥ ೨

ಹಡಪ ಸೀಗುರಿ ಕನ್ನಡಿ ಕುಂಚ ಕಾಳಾಂಜಿ
ಪಿಡಿದ ಬೀಸಣಿಗೆ ಪಾವುಗೆಯ ।
ಕಡು ಚೆಲುವಾಂತಿಹಾಳಗದವರೈತಂ
ದೆಡಬಲವನು ಸಾರಿದರು ॥ ೩

ರಾಯ ರಾವುತ ಮನ್ನೆಯ ಮಂಡಲಿಕ ಸಮು
ದಾಯ ಸುಭಟ ಸಂದೋಹ ।
ಆಯುತದಲಿ ಕರಾಂಜುಳಿಯ ನೊಸಲಿಗಿಟ್ಟು
ಪ್ರಿಯದೆ ನಡೆದರೇ ವೇಳ್ವ ॥ ೪

---

* ಮಿಗಿಸಿವುವು.

ಕರಣಿಕರಾಪ್ತ ಮಂತ್ರಿಗಳು ವಿದ್ವಾಂಸರ
ನೆರವಿ ಭೂಪರನ ಹಿಂಗಡೆಯೊ ।
ಪರಮ ಸಂತೋಷದಿ ನಡೆದು ಬರುವ ಬಲು
ಸಿರಿಯ ಸಂಭ್ರಮವನೇನೆಂಬೆ ॥ ೫

ಸಿಂಗರಿಸಿದ ರಾಜ ತೇಜಿಯ ಬಲವಂದು
ಹಿಂಗದೆ ಚರಣಕೆ ನಮಿಸಿ ।
ತುಂಗ ವಿಕ್ರಮ ಕಂದವ ತಟ್ಟಿ ಜಯ ಜಯ
ಮಂಗಳೋತ್ಸವದೊಳೇರಿದನು ॥ ೬

ಪಾದಾವಧಾನ ಹಸ್ತಾವಧಾನ ಜೀಯ ಶು
ಭೋದಯ ಚಿತ್ತೈಸೆಂದು ।
ಆದರದೊಳಗುಗ್ಗಡಿಪವಸರದರ
ಸಾಧು ವಾದಗಳೊಪ್ಪಿದುವು ॥ ೭

ಮುತ್ತಿನ ಸತ್ತಿಗೆ ನವ ರತ್ನ ಖಚಿತದ
ಚಿತ್ತಾರದಾಲವಟ್ಟಗಳು ।
ಸುತ್ತ ಮೆರೆದುವಾ ನರಸೇಂದ್ರನೃತರು
ವರ್ತಿಯನೇನ ಬಣ್ಣಿಸುವೆ ॥ ೮

ಮರುತ ಪಥವ ಸೋಂಕುವ ಬಿರುದಿನ ಡಾಳು
ಗರುಡ ಹನುಮನ ಕುರುಹಿನ ।
ಪರ ಶಂಖ ಚಕ್ರ ಮಕರ ಟೆಕ್ಕೆಯ ನೆರೆ
ಪರಿ ಶೋಭಿಸಿದುವರ್ತಿಯಲಿ ॥ ೯

ಎಡ ಬಲದೊಳಗೆ ಡಾಳಿಪ ಪೆಟ್ಟು ಪಾವಡೆ
ತುಡುಕಲಾಕಾಶ ಮಂಡಲವ ।
ಪೊಡವಿಗೆ ನರ ರೂಪ ನರ ಸಿಂಹನೃತಹ
ಬೆಡಗನದೇನ ಬಣ್ಣಿಸುವೆ ॥ ೧೦

ಶಶಿಯು ಷೋಡಶ ಕಲೆ ದಿವ್ಯಾಂಗನೆಯರ
ಪೊಸ ಯೌವನ ರೂಪ ತಾಳಿ ।
ಜಸವ ಬೀರ್ವೊಲು ಪದಿನಾರು ಚಾಮರವ ಡಾ
ಳಿಸುತ ನಾರಿಯರೈದಿದರು ॥ ೧೧

ಅನಿತರೊಳಗೆ ದಿವ್ಯ ಶೃಂಗಾರವನಾಂತ
ವಿನುತ ಭಟ್ಟರುಗಳ್ಬಂದು ।
ಜನ ನಾಥನ ಬಿರುದುಗಳ ಕೈವಾರಿಸು
ವನುವ ನಾನೇನ ಬಣ್ಣಿಸುವೆ ॥ ೧೨

ಕೈವಾರ॥— ಸ್ವಸ್ತಿ ; ಸಮಸ್ತ ಭುವನ ಪ್ರತಾಪ ಮಾರ್ತಾಂಡ, ಜಯ ಲಕ್ಷ್ಮೀ ಭಾಗ್ಯ ಲಕ್ಷ್ಮೀ ಕಟಾಕ್ಷ ನಿರೀಕ್ಷಣ ಶೋಭಾಯಮಾನ ದಿವ್ಯಾಂಗ, ಸಕಲ ವಿದ್ವಜ್ಜನಾಧಾರ, ಆಶ್ರಿತ ಜನ ಕಲ್ಪ ವೃಕ್ಷ, ತುರುಷ್ಕ ಬಲ ಪಾರಾವಾರ ಬಡಬಾನಲ, ಆರ್ಯಾಂಧ್ರ ನೃಪ ಗರ್ವ ಪರ್ವತ ಕುಲಿ ಶಾಯುಧ, ರಿಪು ಪಾಂಡ್ಯ ಭೂಮಿ ಪತಿ ತಿರುಮಲೆ ನಾಯಕ ಚತುರಂಗ ಬಲ ವಲ್ಲರೀ ಲವಿತ್ರ, ಆನತ ರಾಜಾಭಯ ದಾನ ಪರಿಪೂರ್ಣ ಕರುಣಾ ರ್ಣವ, ಸೌಂದರ್ಯ ಸಾಲಂಕಾರ, ನಾರೀ ಜನ ನಯನ ಚಕೋರ ಚಂದ್ರಮ, ಸು ಚರಿತ ಸು ಪ್ರಸನ್ನ ಸಮಸ್ತೋರ್ವೀಶ ಮಕುಟ ಮಣಿ ಗಣ ರಂಜಿತ ಪಾದ ಪದ್ಮ, ಚಾಮುಂಡೀ ವರ ಪ್ರಸಾದ, ಸಂಗೀತ ಸಾಹಿತ್ಯ ಶಾಸ್ತ್ರ ವಿಶಾರದ, ಬಿರುದಂತೆಂಬರ ಗಂಡ, ಸೋಮ ವಂಶಾಬ್ಧಿ ಸುಧಾ ಕರ, ಮೈಸೂರು ಪುರ ವರಾಧೀಶ್ವರ, ಕಂಠೀರವ ನರಸ ರಾಜೇಂದ್ರ ವಿಜಯೀ ಭವ ದಿಗ್ವಿಜಯೀ ಭವ ॥ ೧೩

ಇಂತೆಂದು ಕೈವಾರಿಸುವ ಪಾಠಕ ಜನ
ತಿಂತಿಣಿಸಿರಲೆಡ ಬಲಕೆ ।
ಮುಂತೆ ರಾಮ ಧ್ಯಾನ ಮಂಗಳಾಷ್ಟಕದರ
ಸಂತತ ಗಾನವೊಪ್ಪಿದುವು ॥ ೧೪

ಮತ್ತಾಗ ದಿವ್ಯಾಶ್ವವ ಕುಣಿಸುತ ಪುರು
ಷೋತ್ತಮನೊಲು ಬಹ ನೃಪನ ।
ಇತ್ತರದಲಿ ಶೋಭನ ಡವಳವ ಪೇಳ್ವ
ಮತ್ತ ಗಮನೆಯರ್ಯೆದಿದರು ॥ ೧೫

ಸುರಪನೈರಾವತವನು ಧಿಕ್ಕರಿಸುತ
ಬಿರುದಿನ ಚಿತ್ರ ಪಟಗಳ ।
ಸು ರುಚಿರ ಶೃಂಗಾರದ ಮದ ಕರಿಗಳಂ
ದರಸನಿಕ್ಕೆಲದ ನಡೆದುವು ॥ ೧೬

ದ್ಯು ಮಣಿಯು ಚಾರು ವರೂಥದ ತುರಗದ
ಸಮ ರಂಗ * ಸೂಟಿಯ ಜರೆವ ।
ರಮಣೀಯ ಶೃಂಗಾರವಿಡಿದ ದಿವ್ಯಾಶ್ವ ಸಂ
ಭ್ರಮದ ನಡೆದುದನೇ ವೇಳ್ವ ॥ ೧೭

ದೊರೆ ರಾಯ ನರಸೇಂದ್ರ ರಚಿಸಿದ ತಿರು ನಾಳ
ಸಿರಿಯ ನೋಡುವೊಡೈತಂದ ।
ನೆರೆ ಸರ್ವ ಜನ ಭೂಪನೈತಹ ಠೀವಿಯ
ಪಿರಿದು ನಿಟ್ಟಿಸಿದರರ್ತಿಯಲಿ ॥ ೧೮

ಮೂಳಿಗೆ ಮನೆಯ ಮೇಲ್ಮಚ್ಚು ಚಪ್ಪರದಲಿ
ಸಾಲ ಸಜ್ಜೆಯ ಭಿತ್ತಿಗಳ ।
ಜಾಲಾಂದ್ರದಲಿ ಮುದ್ದುವೆಣ್ಣುಗಳ್ನರಸ ಭೂ
ಪಾಲನ ನೋಡುತೊಪ್ಪಿದರು ॥ ೧೯

ಸಿರಿಯುರಸನ ಲಾವಣ್ಯವಿಂದ್ರನ ಭೋಗ
ಪರಿಪೂರ್ಣ ಚಂದ್ರನ ಕಾಂತಿ ।
ದೊರೆ ರಾಯನೊಳಸದಿದೆ ಯೆಂದು ನೋಟಕ
ರಿರದೀಕ್ಷಿಸಿದರರ್ತಿಯಲಿ ॥ ೨೦

* ಸೂರಿಯ.

ರಾಮ ಚಂದ್ರನ ಸುಚಾರಿತ್ರ ಹರಿಶ್ಚಂದ್ರ
ಭೂಮಿ ಪಾಲನ ವರ ಸತ್ಯ ।
ಸ್ವಾಮಿ ಕಂಠೀರವೇಶ್ವರನೊಳೊಪ್ಪಿದೆ ಯೆಂದು
ಪ್ರೇಮದೆ ಜನರೀಕ್ಷಿಸಿದರು ॥ ೨೧

ಅತನು ಮನ್ಮಥ ನಳ ಕೂಬರ ಗುಹ್ಯಕ
ಶತ ಪತ್ರ ವೈರಿ ಕಳಂಕಿ ।
ಕ್ಷಿತಿಯೊಳೀ ನರಸೇಂದ್ರನ ಚಲುವಿಕೆಗಿನ್ನು
ಪ್ರತಿಯಿಲ್ಲವೆಂದು ನೋಡಿದರು ॥ ೨೨

ಬಳಿಕಲಾ ಭೂ ಪಾಲ ತಿರುನಾಳಿಗೆ * ಪೋಸ
ಸುಲಲಿತೋತ್ಸವವ ನೋಡುವೊಡೆ ।
ಅಲರಂಬ ಮೋಹಿನಿ ಯೆನಿಪ ವಾರಾಂಗನೆ
ನಲೆವಾಡದುದಿಗೈದಿದಳು ॥ ೨೩

ಲೀಲೆಯೊಳಗೆ ತಿರು ನಾಳಿಗೈದುವ ಭೂ
ಪಾಲನ ಸಿರಿಯ ಸಂಭ್ರಮವ ।
ಲೋಲ ಲೋಚನೆ ಚಿತ್ರ ರೇಖೆ ಯೆನಿಪ ತನ್ನ
ಮೇಳದ ಸಖಿಯು ಕೇಳಿದಳು ॥ ೨೪

ಮೆರೆವ ತಾರಾ ಗಣ ಮಧ್ಯದೆ ರಾಜಿಪ
ಪರಿಪೂರ್ಣ ಚಂದ್ರನಂದದಲಿ ।
ಪರಿವಾರದೊಡನೆ ದಿವ್ಯಾಶ್ವವ ಕುಣಿಸುತ
ಹರುಷದೆ ಬಹ ದೊರೆ ಯಾರೆ ॥ ೨೫

ಮೇರೆಯ ಮೀರಿ ಯೈದಿದ ತುರುಕರ ಬಲ
ವಾರಿಧಿಯನು ಬತ್ತಿಸಿದ ।
ವೀರ ರಾಘವ ಸನ್ನಿಭ ನರಸೇಂದ್ರ ಕೇಳ್
ಚಾರು ಪಯೋಧರ ಯುಗಳೆ ॥ ೨೬

* ಪೊಸ.

ಹೊಳೆವ ಮುತ್ತಿನ ಚತ್ರದ ನೆಳಲೊಳು ಬರು
ವಿಳೆಯಾಣ್ಮನಾರಬ್ಜನೇತ್ರೆ ।
ಲಲಿತಾಂಗಿ ಕೇಳೀತ ವೈರಿ ಭೂಪಾಲಕ
ಕಲಭ ಕಂಠೀರವ ರಾಜ ॥ ೧೭

ನವ ರತ್ನ ದಾಲವಟ್ಟಲ ಸಾಲ ನೆಳಲೊಳು
ಸುವಿಲಾಸದೆ ಬಹನಾರೆ ।
ಕುವಲಯ ನೇತ್ರೆ ಕೇಳರಿ ನೃಪ ಬಲ ಘನ
ಪವಮಾನ ನರಸ ರಾಜೇಂದ್ರ ॥ ೧೮

ಎಡ ಬಲದೊಳಗೆ ರಾಜಿಪ ಬಿರುದಿನ ಡಾಳ
ಗಡಣದೆ ಬಹ ದೊರೆ ಯಾರೆ ।
ಮಡದಿ ಕೇಳಿವ ಮಧುರೆಯ ಭೂಪ ಬಲ ವಾರ್ಧಿ
ವಡಬೋಪಮ ನರಸೇಂದ್ರ ॥ ೧೯

ತೊಳಪ ಕೆಂದಳಿರೆಸಕದ ಪಾದಾಂಗುಳಿ
ದಳದ ಮೋಹನ ರೂಪನಾರೆ ।
ಖಳರ ಸಂಹರಿಸಿ ಕರ್ಣಾಟಕ ರಾಜ್ಯವ
ಸಲಹಿದ ಕಂಠೀರವೇಂದ್ರ ॥ ೨೦

ಸ್ಮರನ ಬಾಣದ ಬತ್ತಳಿಕೆಯಂದದೆ ನೆರೆ
ಮೆರೆವ ಜಂಘೆಯ ಜಾಣನಾರೆ ।
ತರುಣಿ ಕೇಳ್ಖರ ರಾಕ್ಷಸರ ಕೊಂದು ವಗ ರಾಮ
ಗಿರಿಯ ಸೆಳದ ನರಸೇಂದ್ರ ॥ ೨೧

ವರ ಲಾವಣ್ಯ ನಂದನದ ರಂಭಾ ಸ್ತಂಭ
ದಿರವಿನಂತೂರು ದ್ವಯದ ।
ದೊರೆ ರಾಯನಾರಿವ ತುರುಗೆರೆ ಬಾಗೂರ
ಧುರದೆ ಸೆಳದ ನರಸೇಂದ್ರ ॥ ೨೨

ರತಿ ದೇವಿ ನಲಿದಾಡುವ ಪೂಡುವೆಟ್ಟದುಂ
ನತ ಜಘನದ ನೀರನಾರೆ ।
ಶತ ಪತ್ರ ನೇತ್ರೆ ಕೇಳ್ ಕಲಿಯೂರು ಕಡಬವ
ಕ್ಷಿತಿ ಮೆಚ್ಚೆ ಸೆಳೆದವನೀತ ॥ ೩೩

ಲಲನೆಯರಕ್ಷಿ ಮೀನ್ಗಳು ಪೊಳೆದಾಡುವ
ಲಲಿತ ಕಾಸಾರದಂದದಲಿ ।
ಸುಳಿ ನಾಭಿಯುವನಾರೆ ಮಾಯುಸಮುದ್ರವ
ಸೆಳೆದ ಚೆನ್ನಿಗ ನರಸೇಂದ್ರ ॥ ೩೪

ಒಡನೆ ಧೈರ್ಯಾಂಗನೆ ನಟಿಸುವ ಶೃಂಗಾರ
ವಿಡಿದ ರಂಗಸ್ಥಳದಂತೆ ।
ಬಿಡದೊಪ್ಪುವೆದೆಯುವನಾರೆ ಗ್ರಾಮವ ಕೊಂಡ
ಕಡುಗಲಿ ಕಂಠೀರವೇಂದ್ರ ॥ ೩೫

ವರ ಜಯಾಂಗನೆಯು ಬಂಧಿಪ ಪಾಶದಂದದೆ
ಮೆರೆವ ತೋಳ್ಗಳ ನೀರನಾರೆ ।
ಪಿರಿಯ ಪಟ್ಟಣವನು ಪಗಲ ಲಗ್ಗೆಯು ಬಿಟ್ಟು
ಧರೆ ಮೆಚ್ಚೆ ಸೆಳೆದವನೀತ ॥ ೩೬

ತುಂಬಿದ ನವ ರತ್ನ ಹಾರವ ಕೆಳಗೊಂಡ
ಕಂಬು ಕಂಠದ ಚೆಲ್ವನಾರೆ ।
ಬಿಂಬ ಫಲಾಧರೆ ಶರಣಾಗತ ಕರು
ಣಾಂಬುಧಿ ಕಂಠೀರವೇಂದ್ರ ॥ ೩೭

ನಿಟ್ಟಿಪ ಮೋಹಿ ಮಂಗಳ ದಿಟ್ಟೆ ಕದಪಿಗೆ
ತೊಟ್ಟನೆ ತಾಕದಂದದಲಿ ।
ಇಟ್ಟ ಕಸ್ತೂರಿ ರೇಖೆಯೊಲೆಪನ್ನ ಬವರಿಯು
ಸೃಷ್ಟೀಶನಾರೆನಗುಸಿರೆ ॥ ೩೮

ಕೊಡಗು ಕೊಂಕಣ ಮಲೆಯಾಳಾದಿ ರಾಜ್ಯವ
ಬಡಿದು ಭಂಗಿಸಿ ವೈರಿ ನೃಪರ |
ಅಡಿಗೆರಗಿಸಿಕೊಂಡು ಮೆರೆವವನಿವನೀಗ
ಕುಡುವಿಲ್ಲನು ಪಟ್ಟದರಸಿ || ೩೯

ಕುಂದ ಬಂದುಗೆ ಚಂಪಕ ಪೊಂದಾವರೆ
ಕೆಂದಳಿರುಗಳೊಂದಿ ಮೆರೆದು |
ಇಂದಿರೆ ನಲಿವ ಕೇಳೀವನದೊಲು ರಮ್ಯ
ದಿಂದಿಹ ಮುಖದವನಾರೆ || ೪೦

ಈತನೀಗೆಸೆವ ಸಾಂಬಳ್ಳಿಯು ನೃಪನಗ
ರ್ವಾತಿರೇಕವ ನೆರೆ ಮುರಿದು |
ಆತನಾಳುವ ರಾಜ್ಯ ಸೆಳೆದತುಳ ಪ್ರ
ಖ್ಯಾತ ಕಂಠೀರವ ರಾಜ || ೪೧

ಪಿರಿದು ಕಾರ್ಮುಗಿಲ ಪೊಗ್ಗರವ ಬಳಸಿಕೊಂಡು
ಪರಿಶೋಭಿಪುಡುಗಣದಂತೆ |
ಅರಳು ಮಲ್ಲಿಗೆ ಮುಡಿ ಸರವನಾಂತಿಹನಾರೆ
ದುರಗಲಿ ನರಸ ರಾಜೇಂದ್ರ || ೪೨

ಆತನೊತ್ತಿಲಿ ತೇಜಿಯನೇರಿ ಸುಭಟ
ವ್ರಾತ ಮಧ್ಯದೆ ಥಳಥಳಿಸಿ |
ಭೂ ತಳ ರವಿಯಂತೆ ಬರುವವನಿವನಾರೆ
ಶಾತಕುಂಭಾದ್ರಿ ಕುಚದಳೆ || ೪೩

ಸ್ವಾಮಿ ಕಾರ್ಯ ಧುರಂಧರ ಸತ್ಯ ಸಂಧ ಸು
ತ್ರಾಮ ಭೋಗನು ರಣ ಭೀಮ |
ಭೂಮಿ ಪಾಲನ ದಳ ಪತಿ ಲಿಂಗ ರಾಜೇಂದ್ರ
ಕಾಮನ ಕೈಯ್ಯ ಕನ್ನಡಿಯೆ || ೪೪

ಬಿರುದಿನ ಭಟರಾನೆ ಕುದುರೆಯು ಮೇಳದೆ
ಬರುತ್ತಿವೆನಾರಬ್ಜನೇತ್ರೆ ।
ದೊರೆ ರಾಯ ನರಸೇಂದ್ರನ ಮಾವನಿವನೀಗ
ಪಿರಿಯಪಟ್ಟಣದ ಚೆಂದಯ್ಯ ॥ ೪೫

ಒಡನೆ ತೇಜಿಯು ಕುಣಿಸುತ ಬಲ ಮಧ್ಯದೆ
ಸಡಗರದಲಿ ಬಹನಾರೆ ।
ಪೊಡವಿಪ ನರಸ ರಾಜೇಂದ್ರನ ಮೈದುನ
ಕಡು ಚೆಲ್ವ ದಾಸರಾಜಯ್ಯ ॥ ೪೬

ಬಿರುದಿನ ಚೆನ್ನ ಝಲ್ಲಿಯು ತುಳಲಾಳ್ಗಳ
ನೆರವಿ ಮಧ್ಯದೆ ಬಹನಾರೆ ।
ಹರದನ ಹಳ್ಳಿಯ ದೊಡ್ಡೇಂದ್ರನಿವನೀಗ
ಸರಸಿಜಾಯುತ ಪತ್ರನೇತ್ರೆ ॥ ೪೭

ಮುತ್ತಿನ ಸೂರೆಯು ಸುರಗಿಯು ಸಾಲ ಸು ಭಟರ
ಪೊತ್ತದೊಳಗೆ ಬಹನಾರೆ ।
ಸತ್ಯಾಗಾಲದ ಕೆಂಪೇಂದ್ರನಿವನೀಗ
ವೃತ್ತ ಪಯೋಧರ ಯುಗಳೆ ॥ ೪೮

ಮಿಾಟಿನ ಭಟರ ಮೇಳದೆ ತೇಜಿಯನಿರ
ದಾಟಿಸುತಲಿ ಬಹನಾರೆ ।
ಕೋಟೆಯ ತಿಮ್ಮೇಂದ್ರನಿವನೀಗ ವಿಜಯ ವ
ಧೂಟೀಶ್ವರ ರಣದೊಳಗೆ ॥ ೪೯

ಚೆನ್ನದ ಬಿರುಡೆಯ ನೇಜೆಯುದಧಟರ
ಸನ್ನಾಹದೆ ಬಹನಾರೆ ।
ಚೆನ್ನರಾಯನ ಪಟ್ಟಣದ ದೊಡ್ಡೇಂದ್ರನು
ಪನ್ನಗ ವೇಣಿ ಚಿತ್ತೈಸು ॥ ೫೦

ಸುರುಚಿರ ಮಿಸುನಿಯಾಭರಣವ ಧರಿಸಿದ
ಪರಿವಾರದೊಳು ಬಹನಾರೆ ।
ತುರುಗೆರೆಯನಾಳುವ ಹಂಪಯ್ಯನಿವನೀಗ
ಸರಸಿಜ ಗಂಧಿ ಚಿತ್ತೈಸು ॥ ೫೧

ಕನಕ ವರ್ಣದ ಸತ್ತಿಗೆಯ ನೆಳಲೊಳು ಬಹ
ಮೊನೆಗಾರ ಮನ್ನೆಯನಾರೆ ।
ಚನಪಟ್ಟಣವನಾಳುವ ಚಾಮಯ್ಯನು
ವನಿತಾ ಸೀಮಂತ ಮಣಿಯೆ ॥ ೫೨

ಮಿರುಗುವ ಮಿಸುನಿಯ ಸಾಲ ಕುಪ್ಪಿಗೆಗಳ
ಹರಿಗೆಯ ಭಟರ ಮೇಳದಲಿ ।
ಬರುವ ಮನ್ನೆಯನಾರೆ ಮದ್ದೂರನಾಳುವ
ದುರಗಲಿ ಹಂಪಯ್ಯನಬಲೆ ॥ ೫೩

ತೂಗುವ ಹರಿಬಿಯ ಗರಿಯಿಟ್ಟಯಧಟರ
ಸಾಗರದೊಳು ಬಹನಾರೆ ।
ಭೂಗಧೀಶ್ವರ ನರಸೇಂದ್ರನ ಹಡಪದ
ನಾಗಮಂಗಲದ ಮುದ್ದಯ್ಯ ॥ ೫೪

ಥಳಥಳಿಸುವ ದಿವ್ಯಾಯುಧಗಳ ಪಾಯ
ದಳ ಮಧ್ಯದಲಿ ಬಹನಾರೆ ।
ಇಳೆಯಾಣ್ಮ ಕಂಠೀರವೇಂದ್ರನ ಸಂಚಿಯ
ಮಳವಳ್ಳಿಯ ನಂಜಣ್ಣ ॥ ೫೫

ಕಟ್ಟುಗ್ರದಲಿ ರಿಪು ಭಟ ಗೋಧೂಮ ಘ
ರಟ್ಟನೆನಿಸಿಕೊಂಬನಾರೆ ।
ಪಟ್ಟಣದಧಿಕಾರಿ ಲಿಂಗೆಯ ಗೌಡನು
ಸೃಷ್ಟಿಗೆ ನೂತನ ರಂಭೆ ॥ ೫೬.

ಬಾಲ ಸೂರ್ಯನ ಕಿರಣದ ಧಾತನೇಳಸು
ವಾಲ ವೆಟ್ಟಲ ನಳಲಿನಲಿ ।
ಲೀಲೆಯೊಳ್ ಬಹನಾರೆ ತೆರಕಣಾಂಬಿಯನಾಳ್ವ
ಕಾಳಾಂಜಿಯ ರಾಜಯ್ಯ ॥ ೫೭

ತುಂಬಿದ ಬೆಳ್ಳಿಯ ಕಟ್ಟನಿಟ್ಟಿಯ ಭಟ
ರಿಂಬಲಿ ಬಹ ಧೀರನಾರೆ ।
ಕಂಬು ಕಂಧರೆ ಕನ್ನಂಬಾಡಿಯನಾಳುವ
ಚೆಂಬಿನ ಗುರುವಣ್ಣನಿವನು ॥ ೫೮

ಉಟ್ಟ ಪಟ್ಟೆಯ ದಟ್ಟಿಯಾಳ್ಗಳ ವೊತ್ತದೊ
ಳಟ್ಟಣಿಸುತ ಬಹನಾರೆ ।
ಸೃಷ್ಟಿಗಧಿಕ ಕಿಕ್ಕೇರಿಯ ಪಾವಡೆ
ಕೊಟ್ಟೂರಯ್ಯನಬ್ಬಾಕ್ಷಿ ॥ ೫೯

ಭೂಸುರ ಸುಭಟ ಸಂದೋಹದ ನಡುವೆ ವಿ
ಲಾಸದೆ ಬಹನಿನ್ನಾರೆ ।
ವೈಸೂರಧಿಕಾರಿಯಿವನೀಗ ಚಿತ್ತೈಸು
ಪೂಸರಳನ ಪಟ್ಟದಾನೆ ॥ ೬೦

ಕಾಳಗದೊಳು ಮುಂದುವರಿವಾಳು ಕುದುರೆಯ
ಮೇಳದೊಳಗೆ ಬಹನಾರೆ ।
ರೋಲಂಬ ಚಿಕುರೆ ಪರಾಕಿಲ್ಲದೆ ಕೇಳು
ಪಾಲುಪರೆಯ ಚಿಣ್ಣಗೌಡ ॥ ೬೧

ನಾನಾ ಬಗೆಯಾಯುಧದ ಭಟರುಗೂಡಿ
ಯಾನಂದದಲಿ ಬಹನಾರೆ ।
ಕಾನಕಾರನಹಳ್ಳಿಯ ಮುದ್ದಯ್ಯನು
ಮಾನಿನಿ ರನ್ನೆ ಚಿತ್ತೈಸು ॥ ೬೨

ಹೊಳೆಯ ತೇಜಿಯನೇರಿ ಕಾಲಾಳ ಮೊತ್ತದೆ
ಥಳಥಳಿಸುತ ಬಹನಾರೆ ।
ಎಳೆ ಮಂಗಳರಸಿ ಪರಾಕಿಲ್ಲದೆ ಕೇಳು
ಮಳಲವಾಡಿಯ ಹೊನ್ನಣ್ಣ ॥ ೬೩

ಚಿಮ್ಮುವ ಸುರಗಿ ಸಬಳದ ಭಟರ ಕೊಡೆ
ಸುಮ್ಮಾನದೆ ಬಹನಾರೆ ।
ಉನ್ಮತ್ತೋನ್ನಾಳುವ ಸಂಗಯ್ಯನು
ಕಮ್ಮವಿಲ್ಲನ ಪಟ್ಟದಾನೆ ॥ ೬೪

ಮಿಸುನಿಯ ಹಕ್ಕರಿಕೆಯ ತೇಜಿಯನೇರಿ
ನಸು ನಗುತೈತಹನಾರೆ ।
ಕುಸುಮ ಶರನ ಮುಂಗೈಯ ಗಿಣಿಯೆ ಕೇಳು
ಹೊಸ ಹೊಳಲಾಳ್ವ ಚೆನ್ನಯ್ಯ ॥ ೬೫

ಸಲ್ಲಲಿತದ ರಾಜಿಪ ಸಮಕಟ್ಟಿನ
ಝಲ್ಲಿಯ ತೇಜಿಯನೇರಿ ।
ಉಲ್ಲಾಸದೆ ಬಹನಿವನಾರೆ ಲಲಿತಾಂಗಿ
* ಬಲ್ಲೊಡೆಯರ ದಾಸಯ್ಯ ॥ ೬೬

ಹೊಳವ ಹೊನ್ನಂದಣವೇರಿ ಕಾಲಾಳ್ಗಳ
ದಳ ಮಧ್ಯದಲಿ ಬಹನಾರೆ ।
ಎಳವಂದೂರ ಮನ್ನೆಯ ಲಿಂಗ ರಾಜೇಂದ್ರ
ನಳಿನ ಪತ್ರಾಯತ ನೇತ್ರ ॥ ೬೭

ಝಲ್ಲಿಯ ಬಿಲ್ಲು ನೇಜೆಯುದಧಟರ ಮೊತ್ತ
ದಲ್ಲಿ ಬರುವನಿವನಾರೆ ।
ಹುಲ್ಲನಹಳ್ಳಿಯ ಮನ್ನೆಯನಿವನೀಗ
ಸಲ್ಲಲಿತಾಂಗಿ ಚಿತ್ತೈಸು ॥ ೬೮

* ಬಲ್ಲಪ್ಪೊಡೆಯರ.

ಅಲರಂಬನಂದದೆ ತೇಜಿಯ ಕುಣಿಸುತ
ಸಲೆ ಸುಭಟರ ಗಡಣದಲಿ ।
ನಲವಿಂದ ಬರುವವನಿವನಾರೆ ಲಲಿತಾಂಗಿ
ನಿಲುಸೋಗೆಯ ಮನ್ನೆಯನು ॥ ೧೯

ಕುಲಗಿರಿ ಕೋಟೆಯ ಕೆರೆ ಹೆಮ್ಮರಗಾಲು
ಬಿಳುಕೆರೆಯಾಳ್ವ ಮನ್ನೆಯರು ।
ಬಲು ಠೀವಿಯೊಳಗೈತರುವ ಬಗೆಯ ನಾ
ಲಲನೆ ಪೇಳಿದಳಾತ್ಮ ಸಖಿಗೆ ॥ ೨೦

ಇವನಾರಿವ ತಳಕಾಡ ಮನ್ನೆಯ ಮ
ತ್ತಿವನಾರು ಸೋಸಲೆಯವನು ।
ಇವನಾರು ರಂಗಸಮುದ್ರವಾಳುವನೆಂ
ದವರೊಳಾದುದು ಸುಳುವಾತು ॥ ೨೧

ದೊರೆ ರಾಯ ನರಸರಾಜೇಂದ್ರ ಪಾಲಿಪ ರಾಜ್ಯ
ದುರು ಮಂಡಲಿಕ ನಾಯಕರ ।
ಸರಸಿಜ ಮುಖಿ ಮನ್ಮಥ ಮೋಹಿನಿಗಾಗ
ವರ ಚಿತ್ರರೇಖೆ ಪೇಳಿದಳು ॥ ೨೨

ಪಿರಿದು ಮುತ್ತಿನ ಚೌಕುಳಿ ಕಂಬು ಕಂಠದೆ
ಪರಿಶೋಭಿಸುವ ಚಿನ್ನ ಸರದ ।
ಮೆರೆವ ಪೈರಣೆಯ ದುಗುಲದೆ ರಾಜಿಸುತಿಪ
ಸ್ಮರ ರೂಪನಿವನಾರಬಲೆ ॥ ೨೩

ಥಳಥಳಿಸುವ ವಜ್ರ ವೈಡೂರ್ಯ ಹರಿನೀಲ
ಹೊಳೆವ ಮೌಕ್ತಿಕ ಮಾಣಿಕಗಳ ।
ತೊಳಗುವಾಭರಣದ ಜೋಕೆ ಮಾಡುವ ಜಾಣ
ಸಲೆ ಚೊಕ್ಕಸದ ಬಸವಯ್ಯ ॥ ೨೪

ಸುರವಾಯಿ ಝಲ್ಲಿಯು ಬಿರುದಿನ ಕುದುರೆಯು
ನರಪಿಯೊಳಗೆ ಬಹನಾರೆ ।
ನರಸ ರಾಜೆಂದ್ರನ ಕತ್ತಿಯ ಪಿಡಿದಿಹ
ದುರ ಗಲಿ ಬಸವಯ್ಯನಿವನು ॥ ೭೫

ಕಿವಿಯೊಳೊಪ್ಪುವ ಚೌಕುಳಿ ತುಂಬಿಯ ತಾಲಿ
ತವೆ ಗಂಟೆ ಸರಪಣಿಯಿಂದ ।
ಸುವಿಲಾಸದೆ ಚಿತ್ರವಿಡಿದೈತಹನಾರೆ
ಯುವಸರದಧಿಕ ವೀರಣ್ಣ ॥ ೭೬

ಸು ರುಚಿರ ದಿವ್ಯ ಭೂಷಣವಾಂತು ಭೂಪನ
ಚರಣಾಬ್ಜ ಪಿಡಿದಿಹನಾರೆ ।
ಸ್ಮರ ರೂಪ ವೆಂಕಟಪತಿ ಜಟ್ಟಿಯಿವನೀಗ
ಸರಸ ಸನ್ಮೋಹನ ಮಂತ್ರ ॥ ೭೭

ಈತ ಕನ್ನಡಿಯವನೀತ ಪಾವುಡೆಯವ
ನೀತ ಕುಂಚವ ಡಾಳಿಸುವನು ।
ಈತ ಬೀಸಣಿಗೆಯೊಳಗದವನೆಂದಾಕೆ
ಗಾತಳೋದರಿ ಪೇಳಿದಳು ॥ ೭೮

ಪೆರೆ ನೊಸಲೊಳು ಪರಿಮಳ ಗಂಧದಕ್ಷತೆ
ಸಿರದ ಪೈರಣೆಯ ಮುಂಡಾಸ ।
ಮಿರುಪ ದಿವ್ಯಾಂಗಿ ದುಪ್ಪಟವಾಂತು ಹರುಷದೆ
ಬರುವವನಾರಬ್ಜ ನೇತ್ರೆ ॥ ೭೯

ಶರಧಿ ರಾಮಗೆ ನವ ರತ್ನ ಭೂಷಣಗಳ
ಪಿರಿದು ಕಾಣಿಕೆಗೊಡುವಂತೆ ।
ನರಸ ರಾಜೇಂದ್ರಗಾಭರಣವ ತಂದೀವ
ಗರುಪ ಧನ್ವೋಜಯ್ಯನಬಲೆ ॥ ೮೦

ಸ್ವಾಮಿ ಕಾರ್ಯವೆ ತನ್ನ ಸತ್ಯವೆ ದಿವ್ಯಾಂಗ
ಕಾ ಮಹಾ ಭೂಷಣವಾಗೆ ।
ಪ್ರೇಮದೊಳಗೆ ದಂಡಿಗೆಯೇರಿ ಬರುವ ಸ
ನಾಮ ಮಂತ್ರೀಶನಾರಬಲೆ ॥ ೮೧

ಒಪ್ಪುವ ಸಕಲ ರಾಜ್ಯಕೆ ಧರ್ಮದ ಮೇರೆ
ದಪ್ಪದೆ ಬಹಳ ಲೆಕ್ಕವನು ।
ಸುಪ್ಪಾಣಿ ಮುತ್ತಿನಂದದೆ ಬರೆದೋದುವ
ಲಪ್ಪವರಸರಬ್ಜನೇತ್ರೆ ॥ ೮೨

ಮೆರೆವ ಚೌಕುಳಿಯನು ಬಟ್ಟ ಮುಂಡಾಸವ
ಮಿರುಪ ದುಕೂಲವನಾಂತು ।
ಅರಸಿನೊಳೇಕಾಂತದ ಧರ್ಮ ನೀತಿಯ
ನೊರೆಯುತ್ತೈತಹ ಮಂತ್ರಿಯಾರೆ ॥ ೮೩

ವರ ಮಂತ್ರದೆ ಸುರಗುರು * ಲೇಖ್ಯಾಂಗದೆ
ಸರಸಿಜ ಭವ ಸುವಿದ್ಯದಲಿ ।
ನೆರೆ ಗಂಡು ಶಾರದೆ ಚೆಲುವಿಕೆಯುಲಿ ಸೋಮ
ಗರುವ ತಿಮ್ಮರಸ ಮಂತ್ರೀಶ ॥ ೮೪

ಪಿರಿದು ಕಟ್ಟಾಣಿ ಮುತ್ತುಗಳ ಸೇರಿಸುವಂತೆ
ಬರೆದೋದಿ ಲೆಕ್ಕಣಿಗಳನು ।
ಮೆರೆವವನಿವನಾರೆ ರಾಯಸದೊಳು ಜಾಣ
ನರಸಿಂಹುಪಾಧ್ಯರಬ್ಜಾಕ್ಷಿ ॥ ೮೫

ಪಾಣಿ ಪಲ್ಲವದೆ ಪಿಡಿದು ವಲ್ಲಕಿಯು ಕ
ಟ್ಟಾಣಿ ಮುತ್ತಿನ ಚೌಕುಳಿಯು ।
ಮಾಣದೆ ಧರಿಸಿಹ ಬಯಕಾರನಿವನಾರೆ
ವೀಣೆಯ ಕೃಷ್ಣಯ್ಯನಬಲೆ ॥ ೮೬

* ಲೆಕ್ಕಾಂಗದೆ.

ಶೃಂಗಾರ ಕವಿ ಬಾಲ ಕವಿ ಸಂಗೀತದು
ತ್ತುಂಗನೆನಿಪ ಭಾರತಿಯು ।
ಹಿಂಗದೆ ಭೂಪಾಲನೆಡ ಬಲದಲಿ ಬಹ
ಮಂಗಳೋತ್ಸವರ ನೋಡಬಲೆ ॥ ೮೭

ಪೊಡವೀಶನ ಕಾಣಿಕೆಗೆ ತೇಜಿ ಬಹು ಬಗೆ
ಯುಡುಗೊರೆ ಸಹ ಬಹನಾರೆ ।
ಮಡದಿ ರನ್ನಳ ರಾಯರ ಸಮ್ಮುಖದ ಮಂತ್ರಿ
ಕಡು ಜಾಣನಿವ ಧರೆಯೊಳಗೆ ॥ ೮೮

ದೊರೆಯ ಕಾಣಿಕೆಗೆ ಪೊನ್ನಿನ ಜಾಳಿಗೆಯ ಕಟ್ಟಿ
ಪೊರೆಯಾಳು ಸಹ ಬಹನಾರೆ ।
ತರುಣಿ ಕೇಳ್ತುಂಜಾವೂರ ಭೂ ಪಾಲನ
ಬಿರುದಿನ ಮಂತ್ರಿಗಳಿವರು ॥ ೮೯

ಆಣಿ ಮುತ್ತಿನ ಕಂಠ ಮಾಲೆ ಚೌಕುಳಿಗಳ
ಕಾಣಿಕೆಗೊಡಲೈತರುವ ।
ಜಾಣ ಶೇಖರರಾಗ ಮಧುರೆಯನಾಳುವ
ಕ್ಷೋಣಿ ಪಾಲನ ಮಂತ್ರಿಗಳು ॥ ೯೦

ಕಾಲ ಪೆಂಡೆಯ ದಿವ್ಯ ಭೂಷಣ ಮದ ಶುಂ
ಡಾಲವ ಕಾಣಿಕೆಗೊಡುವ ।
ಲೋಲ ಸಚಿವನಾರೆ ಚೆಂಜಿಯನಾಳ್ವ ಭೂ
ಪಾಲನ ರಾಯ ಪ್ರಧಾನಿ ॥ ೯೧

ಹಿಂಗದೆ ಸರ್ವ ಜನರ ಪರಿ ಹಾಸಕ
ದಂಗದೆ ನಗಿಸುವನಾರೆ ।
ಅಂಗಜ ರೂಪ ಸಸ್ನೋಹನ ಹಾಸ್ಯದ
ಸಂಗಯ್ಯನಬಲೆ ಚಿತ್ತೈಸು ॥ ೯೨

ಸುರಪತಿಯಂತೆ ಸುಮ್ಮಾನದೆ ಕಾಲಾಳ
ನೆರವಿಯೊಳ್ ಬಹ ದೊರೆ ಯಾರೆ ।
ನರಸಿಂಹ ಪುರದ ರಂಗಪ್ಪ ನಾಯಕನಿವ
ನೆರೆ ಮೋಹನಾಂಗಿ ಚಿತ್ತೈಸು ॥ ೯೩

ಪ್ರೊಟ್ಟಾಣಿ ದೇಶದ ಕುದುರೆಯ ಕುಣಿಸುತ
ದಿಟ್ಟತನದೆ ಬಹನಾರೆ ।
ಸೃಷ್ಟಿಗಚ್ಚರಿಯಾದ ಬೇಲೂರನಾಳುವ
ಕೃಷ್ಣಪ್ಪನಾಯಕನಬಲೆ ॥ ೯೪

ಬೆಡಗಿನ ತೇಜಿಯನೇರಿ ಚಾಮರಗಳ
ಬಿಡದೆ ಡಾಳಿಸಿಕೊಳ್ವನಾರೆ ।
ಮಡದಿ ರನ್ನಳ ಕೇಳು ಕುಣಿಗಿಲನಾಳುವ
ದೊಡ ಕೆಂಪೆ ಗೌಡನೆ ಈತ ॥ ೯೫

ಮುತ್ತಿನ ಕುಚ್ಚಿನಂದಣವೇರಿ ಸುಭಟರ
ಮೊತ್ತದೆ ಬಹ ದೊರೆಯಾರೆ ।
ಉತ್ತಮ ಮಾಗಡಿಯಧಿಪತಿ ಚಿಕ ಗೌಡ
ಚಿತ್ತಜ ರೂಪನಬ್ಜಾಕ್ಷಿ ॥ ೯೬

ರಂಜಿಸಿ ಹೊಳವ ಹೊನ್ನಂದಣದಲಿ ಬಹ
ಕಂಜಾಸ್ತ್ರರೂಪನಾರಬಲೆ ।
ನಂಜರಾಯನ ಪಟ್ಟಣದರಸನ ಸುತ
ಮಂಜುಳ ವಾಣಿ ಚಿತ್ತೈಸು ॥ ೯೭

ಮೇಲಾದ ಬತ್ತೀಸಾಯುಧದಧಟರ
ಸಾಲೊಳು ಬಹ ಧೀರನಾರೆ ।
ಆಲಂಬಾಡಿಯ ವಿರುಪಣ ನಾಯಕ
ಮೂಲೋಕ ಮೋಹನ ಮಂತ್ರಿ ॥ ೯೮

ಕುಸುಮಾಸ್ತ್ರನಂತೆ ತೇಜೆಯು ಕಾಣಿಸುತ ಬಹ
ಹೊಸ ಹರೆಯದನಿವನಾರೆ ।
ವಸುಧೇಶ ಪೂವಲ ಹನುಮಪ್ಪ ನಾಯುಕ
ಗೆಸೆವ ಪಟ್ಟದ ಸು ಕುಮಾರ ॥ ೯೯

ಉತ್ತಮವಹ ಭೂಷಣವ ಧರಿಸಿ ಮುದ
ವೆತ್ತು ದುಕೂಲವನಾಂತು ।
ಉತ್ತರ ದಿಕ್ಪತಿ ಪಲವು ರೂಪಾದಂ
ತರ್ತಿಯೊಳಗೆ ಬಹರಾರೆ ॥ ೧೦೦

ಕಟ್ಟಾಣಿ ಮುತ್ತು ಮಾಣಿಕ ವಜ್ರ ವೈಡೂರ್ಯ
ಪಟ್ಟೆ ಚೀನಾಂಬರಗಳನು ।
ಸೃಷ್ಟೀಶನ ವೈ ಭೋಗಕೆ ತಂದೀವ
ಸೆಟ್ಟಿಗಳಬಲೆ ಚಿತ್ತೈಸು ॥ ೧೦೧

ಮಿರುಪ ಕಕ್ಷದ ಪಟ್ಟೆಯು ಚೀಲ ನೊಸಲೊಳು
ಪರಿಮಳ ಗಂಧಾಕ್ಷತೆಯು ।
ಸಿರಿವಂತರಿವರಾರೆ ನೆರೆ ಜಾಣ ವೈದ್ಯರು
ಸರಸಿಜಾಯುತ ಪತ್ರ ನೇತ್ರೆ ॥ ೧೦೨

ಇವರಾರಿವರು ಮಲ್ಲರು ಗಾನದವರು ಮ
ತ್ತಿವರಾರಿಂದ್ರಜಾಲಿಗಳು ।
ಇವರು ನಾನಾ ದೇಶದ ವಿದ್ಯದವರೆಂ
ದವರೊಳಾದುದು ಸೊಳು ಮಾತು ॥ ೧೦೩

ವಿಟ ವಿದೂಷಕ ನಾಗರಿಕ ಪೀಠ ಮರ್ದನ
ಪಟುವಹ ನಾಲ್ಕು ಜಾತಕದ ।
ಸುಟಿಯುಳ್ಳ ಶೃಂಗಾರ ಪುರುಷರ ನಿಟ್ಟಿಸು
ಕುಟಿಲ ಕುಂತಲೆ ಕೋಮಲಾಂಗಿ ॥ ೧೦೪

ಹಸ್ತಿನಿ ಚಿತ್ತಿನಿ ಶಂಕಿನಿ ಪದ್ಮಿನಿ
ಮತ್ತಾಗ ನಾಲ್ಕು ಜಾತಕದ ।
ಉತ್ತಮ ನಾಯಕಿಯರು ಸಾಲುಗೊಂಡೈದು
ವರ್ತಿಯ ನೋಡಂಬುಜಾಕ್ಷಿ ॥ ೧೦೫

ಎನುತಲೀಪರಿ ದೊರೆ ಮನ್ನೆಯ ನಾಯಕ
ಘನ ಮಂಡಲಿಕ ಮಂತ್ರಿಗಳನು ।
ವನಿತೆಗೆ ಸಖಿ ವಿವರಿಸುತಿರೆ ದೇವನ
ವಿನುತ * ಸುರಥವು ನಡೆದುದು ॥ ೧೦೬

ಗಗ್ಗರಿ ಘಲಿರೆಂಬ ಗಾಲಿಯು ಬಲು ರವ
ಹೆಗ್ಗನ ಮೀಂಟೆ ಝುಂಕಿಸುವ ।
ಬಗ್ಗನ ವೀರ ಮಕ್ಕಳ ಮೊತ್ತದಲಿ ತೇರು
ಬೊಗ್ಗನೆ † ನಡೆದುದರ್ತಿಯಲಿ ॥ ೧೦೭

ಬಾಳೆಯ ಹಣ್ಣು ದವನಗಳ ನೆರೆ ಜನ
ಜಾಲ ದೇವನ ತೇರ ಮೇಲೆ ।
ಲೀಲೆಯೊಳಗೆ ಸೂಸಿ ಗೋವಿಂದಯೆಂದೆಂ
ಬಾಳಾಪಗಳೊಪ್ಪಿದುವು ॥ ೧೦೮

ತಂಡ ತಂಡದ ಸಂಪ್ರದಾಯ ಮೇಳಗಳಿಂದ
ಕೊಂಡಾಡಿ ಕುಣಿವ ಬಕುತರ ।
ಮಂಡಳಿಯಲಿ ರಂಗ ಧಾಮನ ರಥ ಮುಂ
ಕೊಂಡೈತಂದುದರ್ತಿಯಲಿ ॥ ೧೦೯

ಕಂಬಿ ಕಂಬಿಯಲಿ ಬೆಲ್ಲದ ಪಾನ ಪನಿ ನೀರ
ತುಂಬಿ ತಂದೆರೆವ ಧರ್ಮಿಗಳ ।
ಸಂಭ್ರಮದಲಿ ವಾದ್ಯ ರವದಿಂದಲಾ ತೇರು
ಮುಂಬರಿಗೊಡನೆ ‡ ನಡೆದುದು ॥ ೧೧೦

* ರಥಗಳು ನಡೆದುವು. † ನಡೆದುವರ್ತಿಯಲಿ. ‡ ನಡೆದುವು.

ಚಪ್ಪಳಿಗಳ ರವ ಕೊಂಬು ಕೊಳಲು ಹೊನ್ನ
ತಪ್ಪಟೆಗಳ ದನಿಯಿಂದ ।
ಸರ್ಪ ಶಯನ ರಂಗ ಧಾಮನ ತೇರು ಬಂ
ದೊಪ್ಪಿತು ಮುನ್ನಿನ ಸ್ಥಳದೆ ॥ ೧೧೧

ಹರುಷದೆ ರಥವ ಪ್ರದಕ್ಷಿಣೆ ಗೈದಾಗ
ಸರಸಿಜಾಕ್ಷಗೆ ಕೈಯ ಮುಗಿದು ।
ಪಿರಿದು ಸಂಭ್ರಮದಲಿ ಕಂಠೀರವೇಂದ್ರನಂ
ದರಮನೆಗೈತಂದನೊಲಿದು ॥ ೧೧೨

ನೆರೆದಿಹ ದೊರೆ ಮನ್ನೆಯ ಮಂಡಲಿಕರ
ಕರೆದುಡುಗೊರೆಯನಿತ್ತಾಗ ।
ಪಿರಿದು ಮನ್ನಿಸಿ ಬೀಳ್ಕೊಟ್ಟು ಕಂಠೀರವ
ದೊರೆ ರಾಯ ನಲಿದೊಪ್ಪಿದನು ॥ ೧೧೩

ಆ ಮರು ದಿವಸದೆ ಶುಭ ಲಗ್ನದೆ ರಂಗ
ಧಾಮಗೆ ಮೃಗ ಯಾತ್ರೆಯಾಗೆ ।
ಪ್ರೇಮದೊಳಶ್ವಾರೋಹಕನಾಗಿ ಸು
ತ್ರಾಮ ವಂದಿತನೈತಂದ ॥ ೧೧೪

ಸಿರಿ ದೇವಿಯರೊಳು ಪ್ರಣಯ ಕಲಹವಾಗೆ
ಭರದೆ ಸಂಧಾನ ಗೈದಾಗ ।
ಸರಸಿಜ ನೇತ್ರ ಶ್ರೀ ರಂಗೇಶ ಜಲ ಕೇಳಿ
ಗುರು ಹರುಷದೊಳ್ಗೈದಿದನು ॥ ೧೧೫

ಶಶಿ ಕಾಂತದ ಸೋಪಾನದೆ ರಂಜಿಪ
ಬಿಸರುಹಾಕರಕೈತಂದು ।
ಕುಸುಮ ಗಂಧಿಯರೊಳು ಕ್ರೀಡಾ ವಿನೋದವ
ನೆಸಗಿದನೇನ ಬಣ್ಣಿಸುವೆ ॥ ೧೧೬

ಮಿಗ ಮಿಗಿಸುವ ಕುಂಕುಮ ಕರ್ಪೂರದ ದಿವ್ಯ
ಮೃಗಮದಗಳ ತಂದಾಗ ।
ವಿಗೆ ಸರಸಿಯು ಪೂರ್ಣ ಜಲದೊಳಗೊಂದಿಸಿ
ಸೊಗಸಿಂದಲನುವಾದರಾಗ ॥ ೧೧೭

ಮೈದಿಲ ಸೆರಗಿನ ಮೊಲೆ ಕಟ್ಟು ದುಗುಲದೊ
ಳೈದಿದ ನಿರಿ ಗಾಸೆಯಿಂದ ।
* ಐದಂಬನ ಮದದಾನೆಗಳಂವದೊ
ಳೈದಿದರ್ಜಲ ಕೇಳಿಗಾಗ ॥ ೧೧೮

ನೇವುರಗಳ ಝುಣತ್ಕೃತಿ ಕಂಕಣ ರವ
ಭಾವಿಸೆ ರತ್ನ ಮೇಖಲೆಯು ।
ತೀವಿದ ಕಿರು ಗಂಟೆಯು ದನಿ ಸರಸಿಯು
ನಾವರಿಸಿದುದೇನೆಂಬೆ ॥ ೧೧೯

ಪೊಳೆವಕ್ಷಿ ಕಲಶ ಕುಚದ ಕಾಂತಿ ಗತಿಗಳ
ಚಲುವಿಕೆ ನೀರೊಳಗೆಸೆಯೆ ।
ಎಳೆ ಮೀನಣೆವಕ್ಕಿ ಕಳ ಹಂಸಗಳು ನಾಚಿ
ಮುಳುಗಿದುವಿರದೆ ಪಾರಿದುವು ॥ ೧೨೦

ಕೆಂದಾವರೆಯು ಪೊಟ್ಟಣದೊಳು ತಿಳಿ ನೀರ
ತಂದು ರಂಗೇಶನ ಮೇಲೆ ।
ಮುಂದುವರಿದು ಮುತ್ತಿ ಮೊಲೆದುದಿಗಳೊಳೊತ್ತಿ
ಬಂಧುರದಿಂದ ಸೂಸಿದರು ॥ ೧೨೧

ಪೊಚ್ಚೇರಗೈಯೊಳು ನೀರ ಮೊಗೆದು ಮೋಹ
ಮೆಚ್ಚಿ ರಂಗನ ಮೇಲಿಡಲು ।
ಬೆಚ್ಚಿ ಬಳಿಕ ದೆಸೆ ದೆಸೆಗೈದಿ ಹೆಂಗಳೆ
ಗಚ್ಚರಿಯುನು ಬೀರಿದನು ॥ ೧೨೨

---

* ಐದಂಬಿನ.

ಬಗಸೆಗೈಗಳಲಿ ಸೀರ್ವಿಡಿದು ಶ್ರೀ ರಂಗೇಶ
ಸೊಗಸುಗಾತಿಯರ ಮೇಲಿಡಲು ।
ಒಗುವ ನೀರ್ವೊನಲ್ಲ ಸೈರಿಸದೆ ಶ್ರೀ ಹರಿಯನು
ಬಿಗಿ ಬಿಗಿದಪ್ಪಿದರಾಗ ॥ ೧೦೩

ಸ್ಮರನ ಕುರುಳ್ಗಳಂದದೆ ನಾರಿಯರಾಗ
ಲೆರಡು ಪಾಜಾಗೆ ವಿಂಗಡಿಸಿ ।
ಸರಸದೆ ಜಲ ಕೇಳಿಯನಾಡುವ ಸಿಂ
ಗರವನದೇನ ಬಣ್ಣಿಸುವೆ ॥ ೧೦೪

ಸರಸಿಜ ಪಾಣಿಯೊಳೊರ್ವೆಯುದಕದೀವಿ
ಪರಿ ಪೂರ್ಣೇಂದು ವದನೆಯ ।
ಸರಸ ಕೇಳಿಗೆ ಬಂದು ಸೋತಾಗ ಹಿಂದಕೆ
ತೆರಳದಳೇನ ಬಣ್ಣಿಸುವೆ ॥ ೧೦೫

ಮದ ಗಜ ಗಮನೆಯೊರ್ವಳು ಹರಿ ಮಧ್ಯೆಯೊ
ಳೊದಗಿ ಸರಸಕ್ಕೆತಂದು ।
ಬೆದರಿ ಹಿನ್ನೆಲೆಗೈದೆ ಬೆನ್ನಟ್ಟಿಯಾ ನೀರ
ಚದುರೆಯ ಕಂಗೆಡಿಸಿದಳು ॥ ೧೦೬

ಬಿಂಬ ಫಲಾಧರೆಯೊರ್ವ ಕ್ಕೈಯಲಿ ನೀರ
ತುಂಬಿ ಸಂತಸದೊಳಂದಾಗ ।
ಮುಂಬರಿದೈತರೆ ಶುಕ ವಾಣಿ ಕಂಡಾಗ
ಬೆಂಬಿಡದವಳ ಪಿಡಿದಳು ॥ ೧೦೭

ಕಂಗೊಳಿಸುವ ವಾರಾಂಗನೆಯರ ಬಲು
ಜಂಗುಳಿ ವಿಟರ ಮೇಲೆಂದು ।
ಹಿಂಗದೆ ಪೊನ್ನ ಚಿಕ್ಕೊಳವೆಯೊಳ್ನೀರಿಡು
ವಂಗವನೇನ ಬಣ್ಣಿಸುವೆ ॥ ೧೦೮

ಮದ ಹಂಸ ಗಮನೆಯರುಗಳು ಚೀಕೋರ್ಕಳವೆಯೊ
ಳುದಕವ ತೀವಿ ತಂದಾಗ ।
ಮುದದೊಳೆಸೆಯೆ ಸ್ಮರಗಲಹದ ಶರವೆಂದು
ಬೆದರಿದರೇನ ಬಣ್ಣಿಸುವೆ ॥ ೧೨೯

ಬೊಗರಿ ಮೊಲೆಗಳಲ್ಪುಗಲು ಕಂಗಳ ಕಾಂತಿ
ಮೊಗೆಯಲು ವಿಟರ ಮೈ ಸೊಬಗ ।
ಮೃಗ ಮದ ಗಂಧಿಯರೊಲಿದು ಸಂತೋಷದೆ
ಮಿಗೆ ಜಲ ಕೇಳಿಯಾಡಿದರು ॥ ೧೩೦

ಒಡನಾಗ ಜಲ ಕೇಳಿಯೊಳಗೆ ಮೈ ತಣ್ಣಸ
ವಿಡಿಯಲು ಭಗದೊಳಗೈದಿ ।
ತಡಿ ಮೆಟ್ಟಿ ಶಶಿ ಕಾಂತ ಕೂಲದೊಳಗೆ * ಸಾಲು
ವಿಡಿದೊಪ್ಪಿದರು ಚಲುವೆಯರು ॥ ೧೩೧

ನೀರೊಳು ನನೆದಾಗ ಬಿಗುಹೇರಿ ವೃತ್ತಾ
ಕಾರದೊಳುನ್ಮುಖವಡೆದು ।
ಚಾರುತರದ ಮೊಲೆ ಮೆರೆದುವು ಮೇಲಕ್ಕೆ
ಪಾರುವ ಕೋಕಗಳಂತೆ ॥ ೧೩೨

ಒಡನೆ ಮನ್ಮಥ ದಿಗ್ವಿಜಯಕೆ ತನ್ನಯ
ಖಡುಗಗಳನು ತೊಳೆದಾಗ ।
ಬಿಡದೊರೆಗೊಳಿಪಂತೆ ನಿಡುಗೇಶವಾರಿಪ
ಮಡದಿ ರನ್ನೆಯರೊಪ್ಪಿದರು ॥ ೧೩೩

ಸಲೆ ಮಾಗಿಯು ತೊಲಗಿಸಿ ಸ್ಮರ ಚೈತ್ರಗೆ
ದಳ ಪತಿ ಪಟ್ಟವಿತ್ತಂತೆ ।
ಕಳೆದು ತಣ್ಣಸ ವಸ್ತ್ರಗಳ ಚೀನಾಂಬರ
ಗಳನುಟ್ಟು ಸತಿಯರೊಪ್ಪಿದರು ॥ ೧೩೪

---

* ಸೋಲು,

ನಲ್ಲರ ಶಿಖೆಗಾಗ ಪೂವಮಾಲೆಗಳ ಸುತ್ತಿ
ಮೆಲ್ಲ ದೆಗನುಲೇಪನವ ।
ಸೆಳ್ಳಂಗುರೊಳು ತೀಡಿ ಮಡಿ ವರ್ಗವ ನೀಡಿ
ಚಲ್ಲವಾಡುತಲೊಪ್ಪಿದರು ॥ ೧೩೫

ನಳಿನಾಕ್ಷ ರಂಗೇಶ ಸಂತೋಷದೊಳಗಾಗ
ಳೆಳವೆಣ್ಣುಗಳೊಡಗೂಡಿ ।
ಗಳಿಲನೆ ಬಿಜಮಾಡಿ ದಿವ್ಯ ಮಂಟಪದಲಿ
ತೊಳಗಿದನತಿ ಲೀಲೆಯಿಂದ ॥ ೧೩೬

ವರ ಪುಷ್ಪಯಾಗ ಮುಂತಾದ ದಿವ್ಯೋತ್ಸವ
ಪರಮ ಮಂಗಳ ಮೂರ್ತಿಗಾಗೆ ।
ಸಿರಿ ಧರ ರಂಗೇಶ ಭಕ್ತರ ಪಾಲಿಸಿ
ಹೊರೆಯುತಿರ್ದನು ತ್ರೈಜಗವ ॥ ೧೩೭

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದ ಸುಧರ್ಮಾನುಬಂಧಿ ॥ ೧೩೮

೨೫ನೆಯ ಸಂಧಿ ಸಮಾಪ್ತಂ.

---

# ಇಪ್ಪತ್ತಾರನೆಯ ಸಂಧಿ

ದೊರೆ ರಾಯು ನರಸೇಂದ್ರನ ವ್ರತ ಧರ್ಮ.

ಸೂಚನೆ॥ ದೊರೆ ರಾಯು ನರಸೇಂದ್ರನ ವ್ರತ ಧರ್ಮದ
ಸಿರಿಯು ಸಂಭ್ರಮವ ಬಣ್ಣಿಸುವೆ ॥

ಹರಿಣಾಂಕ ವಂಶ ವಾರಿಧಿ ಚಂದ್ರ ಸದ್ಗುಣ
ಪರಿಪೂರ್ಣ ಭೋಗಾಮರೇಂದ್ರ ।
ನರ ರೂಪ ನರ ಸಿಂಹ ಕಂಠೀರವ ರಾಜ
ಹೊರೆಯುತಿರ್ದನು ಕನ್ನಡವ ॥ ೧

ಉದಯಾಸ್ತಮಯಕೊಳಗಾದ ದಿವಾಕರ
ನುದಿತ ತೇಜಗಳೀ ನೃಪನ ।
ಪುದಿದ ಪ್ರತಾಪಕೆ ಸರಿಯಿಲ್ಲೆಂದಾಗ
ಮುದವಡೆದುದು ಸರ್ವ ಲೋಕ ॥ ೨

ಪಿತೃ ಶತ್ರು ಪ್ರಹ್ಲಾದನ ಹರಿ ಭಕ್ತಿ ಯೀ
ಕ್ಷಿತಿಪತಿ ನರಸ ಭೂ ವರನ ।
ಅತಿಶಯ ವಿಷ್ಣು ಭಕ್ತಿಗೆ ಸರಿಯಿಲ್ಲೆಂದು
ನುತಿಸುತಿಹರು ಸರ್ವ ಜನರು ॥ ೩

ಮಿಗೆ ಹರಿ ದಿನ ವ್ರತವಡೆದ ರುಕ್ಮಾಂಗದ
ಮಗನ ಕೊಲೆಗೆ ಮನದಂದ ।
ಜಗದೊಳೀ ಭೂ ವರ ನಡಿಸುವೇಕಾದಸಿ
ಸುಗುಣತ್ವಕವೆ ಸರಿಯಿಲ್ಲ ॥ ೪

ಚಂದದೆಯೀ ನೃಪ ಗೈವೇಕಾದಸಿ
ಯಂದಕ್ಕೆ ಮಿಗಿಲೆನುತಿರುವ ।
ಚಂದ್ರ ಹಾಸನು ಗೈವುದಕತಿಶಯವಾಗಿ
ಯಂದವಡೆದುದೇನ ಪೇಳ್ವ ॥ ೫

ಅಂಬರೀಷಗೆ ದ್ವಾದಶಿಯ ವ್ರತವೊಂದೆ ಕ್ಷೀ
ರಾಂಬುಧಿಯನು ಮಾಡಲಿಲ್ಲ ।
ಸಂಭ್ರಮದೊಳು ವೃಂದಾ ವನ ಸೇವೆ ಕ್ಷೀ
ರಾಂಬುಧಿಯನು ಮಾಳ್ಪನೀತ ॥ ೬

ದಶಮಿಯ ದಿನ ಗಂಗಾ ಸ್ನಾನ ಹರಿ ಪೂಜೆ
ಯೊಸೆದು ರಾಜಿಸುವೇಕ ಭುಕ್ತ ।
ಎಸೆವ ಜಿತೇಂದ್ರಿಯತ್ವದೆ ನರ ಸಿಂಹನ
ವಸುಧೇಶ ಭಜಿಸುತೊಪ್ಪಿದನು ॥ ೭

ಹರಿ ದಿನದೊಳು ಹರಿ ಪೂಜೆ ಹರಿ ಧ್ಯಾನ
ಹರಿ ನಾಮ ಕೀರ್ತನೆಯಿಂದ ।
ಪಿರಿದು ಜಾಗರವಿರ್ದು ವ್ರತವ ನಡಿಸುತಿಹ
ದೊರೆ ರಾಯ ಕಂಠೀರವೇಂದ್ರ ॥ ೮

ದ್ವಾದಶಿಯೊಳಗಗಣಿತ ಭೂ ಸುರರಿಗೆ
ಮೇದಿನಿ ನಲಿಯೆ ಸಂತಸದೆ ।
ಭೂ ಧವ ನರಸೇಂದ್ರ ಬಹು ದಾನಗಳ ಮಾಡಿ
ಮಾ ಧವಗರ್ಪಿಸುತಿಹನು ॥ ೯

ಧರಣೀ ಸುರರಿಗೆ ಸಕಲ ಮೃಷ್ಟಾನ್ನದೆ
ಹರುಷದಿಂದಲಿ ತೃಪ್ತಿ ಪಡಿಸಿ ।
ನೆರೆ ಬಂಧುಗಳುಕೂಡಿ ಪಾರಣೆ ಗೆಯ್ವನಾ
ಧರಣೀಶನೇನ ಬಣ್ಣಿಸುವೆ ॥ ೧೦

ಅಂತಃಪುರ ಮಹಿಷೀ ಜನ ಸ್ತ್ರೀ ಬಾಲ
ತಿಂತಿಣಿ ಭೋಗಾಂಗನೆಯರು ।
ಮುಂತೇಕಾದಶೀ ವ್ರತ ನಿಷ್ಠೆ ಯಲಿ ಶ್ರೀ
ಕಾಂತನ ಪೂಜಿಸುತಿಹರು ॥ ೧೧

ದಳ ಪತಿ ಮುಂತಾದ ಮನ್ನೆಯರೊಳಗ
ಕಳವಟ್ಟ ಜನ ಸಮ್ಮುಖದ ।
ಬಲು ಮಂತ್ರಿಗಳು ಭೂಪನಾಜ್ಞೆಯಿಂ ಹರಿ ದಿನ
ದೊಳು ನೆರೆ ನಿಷ್ಠೆಯಾಗಿಹರು ॥ ೧೨

ಪುರ ಜನ ಪರಿ ಜನ ಭೂ ಪರನಾಳುವ
ಧರಣಿಯ ಜನರುಗಳಾಗ ।
ನರಸ ರಾಜೇಂದ್ರನಾಜ್ಞೆಯೊಳೇಕಾದಶೀ
ಪರಮ ವ್ರತವ ನಡಿಸುವರು ॥ ೧೩

ಇಂತೊಪ್ಪುತಿಹ ಭೂಪನ ಮಂದಿರದೆ ಶ್ರೀ
ಕಾಂತ ಭವಾಬ್ಧಿ ಬಹಿತ್ರ ।
ಸಂತತ ನರ ಸಿಂಹ ಬೇಡಿದಿಷ್ಟವ ನೃಪ
ಚಿಂತಾ ಮಣಿಗೀಯುತಿಹನು ॥ ೧೪

ಮಿತ ವಾಣಿ ಸತ್ಯ ಪ್ರತಾಚಾರ ಸಂಪನ್ನ
ಕ್ಷಿತಿ ಪತಿ ನಾಯಕ ರತ್ನ ।
ಜಿತ ಶತ್ರು ಸಮುದಯನೆಂದು ಶ್ರೀ ಲಕ್ಷ್ಮೀ
ಪತಿ ಪ್ರಸನ್ನತೆಯೊಳೊಪ್ಪಿಹನು ॥ ೧೫

ಸಲೆ ಭಕ್ತಿಗೊಲಿವರಮನೆಯೊಳು ನೆಲಸಿಹ
ಜಲಜಾಕ್ಷ ಶ್ರೀ ನರ ಹರಿಯು ।
ಲಲನೆ ತೊಳಸಿಯಂಬಿಕೆಗೆ ಕ್ಷೀರಾಬ್ಧಿಯು
ಬಲು ಸಂತಸದಲಿ ಮಾಡಿಸುವ ॥ ೧೬

ಮುತ್ತು ರತ್ನದ ಕುಚ್ಚುಗಳ ಝಲ್ಲಿ ಪಟ್ಟೆಯ
ಮೊತ್ತದ ಮೇಲ್ಕಟ್ಟುಗಳ ।
ಚಿತ್ರಯೊಳ್ಪರಿಮಳ ಪೂಮಾಲೆ ಫಲಗಳ
ಚಿತ್ತರವೆಸೆದುದೇ ವೇಳ್ಪ ॥ ೧೭

ಪವಳದ ಕಂಭ ಪಚ್ಚೆಯ ಬೋದಿಗೆಗಳ
ತವೆ ಹೊನ್ನ ಮರನ ಕೈಗಳಲಿ ।
ಸುವಿಲಾಸದಿಂದಲಾ ದೇವತಾ ಗೃಹ ನೆರೆ
ಛವಿ ಛವಿಸಿದುದರ್ತಿಯಲಿ ॥ ೧೮

ಪುಣುಗು ಕಸ್ತೂರಿ ಪನ್ನೀರ ಚಳಯಕಾಗ
ಗಣನೆಯಿಲ್ಲದ ಭ್ರಮರಗಳು ।
ಮಣಿದೆರಗುತ ಪರಿಮಳ ವಾಸನೆಗೊಂಡು
ಕ್ಷಣದೆ ಝೇಂಕರಿಸುತೊಪ್ಪಿಹವು ॥ ೧೯

ಕುಂದದೆ ಹರಿ ಭಕ್ತರ ದಿವ್ಯ ನಾಟ್ಯದ
ಚೆಂದ ನಾನಾ ವಾದ್ಯ ರವದ ।
ಬಂಧುರದಿಂದಲಾ ದೇವತಾ ಗೃಹವಾ
ನಂದವ ಬೀರುತೊಪ್ಪಿಹುದು ॥ ೨೦

ಮಂಗಳಾರತಿ ಷೋಡಶದುಪಚಾರ ದಿ
ವ್ಯಾಂಗನೆಯರ ಮುದ್ದು ಪಾತ್ರ ।
ಶೃಂಗಾರ ನಾಯಕಿಯರ ಕೋಲಾಟದ
ಸಂಗೀತ ರವವೊಪ್ಪಿದುದು ॥ ೨೧

ದಳಪತಿ ಕೈಲಾಗುಗೊಡೆ ನರಸಿಂಹನ
ನಿಳಯವ ಬಲವಂದು ನಗುತ ।
ನಳಿನಾಕ್ಷನ ದಿವ್ಯ ತೀರ್ಥ ಪ್ರಸಾದವ
ಗಳಿಲನೆ ಕೊಂಡನರ್ತಿಯಲಿ ॥ ೨೨

ವೃಂದಾವನಕೆ ಪ್ರದಕ್ಷಿಣೆ ಗೈದಾಗ
ವಂದಿಸಿ ಬಹುಳ ಭಕ್ತಿಯಲಿ ।
ಕಂದರ್ಪ ರೂಪ ಹಂಸೆಯ ತೂಳ ತಲ್ಪದೊ
ಳಂದು ಮಂಡಿಸಿದನರ್ತಿಯಲಿ ॥ ೧೩

ವೀರ ವೈಷ್ಣವರು ಪುರೋಹಿತರುಗಳುರೆ
ಭಾರತಿಗಳು ಕವಿ ನಿಕರ ।
ಸೂರಿ ಜನರು ಪಣ್ಫಲಕಜ್ಜಾಯದಿ
ನೋರಂತೆ ದಣಿದರೇ ವೇಳ್ವ ॥ ೧೪

ಕರಣಿಕರಾಪ್ತ ಮಂತ್ರಿಗಳು ಜ್ಯೋತಿಷರುಗ
ಳುರುತರ ಭೂಸುರ ನಿಕರ ।
ಪರಿ ಪರಿ ಕಜ್ಜಾಯ ಪಣ್ಫಲ ಭಾರವ
ಹೊರಲಾರದೈದಿದರಾಗ ॥ ೧೫

ಮನ್ನೆಯ ಮಂಡಲಿಕರು ರಾಯ ರಾವುತ
ರುನ್ನತದೊಳಗದವರು ।
ಹೊನ್ನ ಚಿಬ್ಬಲಲಿ ನೀಡಿದ ಪರಿ ಕರದಿಂದ
ಮನ್ನಣೆವಡೆದರಾ ಕ್ಷಣದೆ ॥ ೧೬

ತಾಳ ಧಾರಿಗ ನಟುವಿಗ ಗಾಯಕರು ನೆರೆ
ಮೇಳವಡೆದ ವಾದ್ಯದವರು ।
ಸೂಳೆಯರುಗಳು ಸುಮ್ಮಾನಿಗಳ್ ಪಣ್ಫಲ
ಜಾಲದೆ ದಣಿದರಾ ಕ್ಷಣದೆ ॥ ೧೭

ಈ ಪರಿಯೊಳಗೊಪ್ಪುವ ಸಂಭ್ರಮದಲಿ
ಭೂ ಪಾಲ ಕುಲ ಕಮಲಾರ್ಕ ।
ಶ್ರೀ ಪತಿ ಚರಣಾಬ್ಜ ಮಧು ಕರ ನವ ಪುಷ್ಪ
ಚಾಪ ಸನ್ನಿಭನೊಪ್ಪುತಿರ್ದ ॥ ೧೮

ನಗುತೋಲಗವ ಬೀಳ್ಕೊಟ್ಟು ಸಂತೋಷದೊ
ಳೊಗುಮಿಗೆಯೊಳಗರಮನೆಯು ।
ಸುಗುಣ ಶೇಖರ ಕಂಠೀರವ ನರಸೇಂದ್ರ
ಜಗದೇಕ ವೀರನೈದಿದನು ॥. ೨೯

ನರಸ ರಾಜೇಂದ್ರನ ಸದ್ವರ್ತನೆಗಾಗ
ನೆರೆ ಮೆಚ್ಚಿ ಸಂತೋಷದಲಿ ।
ಸಿರಿ ಧರೆ ಜಯ ಲಕ್ಷ್ಮಿ ಕೀರ್ತ್ಯಂಗನೆಯರು
ಸ್ಥಿರವಾಗಿ ನೆಲಸಿಹರೊಲಿದು ॥ ೩೦

ಧರೆಯೊಳಧಿಕವಾದ ಕಾಶಿಯ ಕ್ಷೇತ್ರದೆ
ಪಿರಿದು ಭೂ ಸುರರು ಸಾಸಿರಕೆ ।
ನೆರೆ ದಿನ ಚರಿ ವೃಷ್ಟಾನ್ನ ದಾನವನಿತ್ತು
ಪರಸಿದ ಧರ್ಮ ಕೀರ್ತಿಯನು ॥ ೩೧

ಕಾಶಿಯ ವಾಸಿಗಳಗಣಿತರಿಗೆ ವರ
ಶಾಸನವಿತ್ತು ಭೂ ಪಾಲ ।
ದೇಶದೊಳಗೆ ಬಹು ಧರ್ಮವ ಸೂಸಿ ವಿ
ಲಾಸದೊಳಿರುವುದೇ ಪೇಳ್ವ ॥ ೩೨

ಬಿಂದು ಮಾಧವ ವಿಶ್ವ ನಾಥಗೆ ಬಹು ವಿಧ
ದಂದದ ಪೂಜೆಯ ಕೊಳಿಸಿ ।
ಇಂದು ವಂಶಜ ಕಂಠೀರವ ರಾಜನಾ
ಕುಂದದೊಪ್ಪುವನನವರತ ॥ ೩೩

ಪ್ರೇಮದೆ ಶ್ರೀ ರಂಗದಲಿ ವೈಷ್ಣವರಿಗೆ
ರಾಮಾಂಜಿಕೂಟವ ನಡಿಸಿ ।
ಭೂಮಿಗೆ ನೂತನ ಧರ್ಮಿಷ್ಠನೆನಿಸಿದ
ಸ್ವಾಮಿ ಕಂಠೀರವ ರಾಜ ॥ ೩೪

ಬಲಿದು ತಾನಾಳುವ ರಾಜ್ಯದ ಪುಣ್ಯ
ಸಳದೊಳಗನ್ನ ಸತ್ರವನು ।
ಸಲೆ ಲೆಕ್ಕವಿಲ್ಲದೆ ವಿರಚಿಸಿ ವಿಪ್ರಸಂ
ಕುಳವ ರಕ್ಷಿಸುವನಾ ಭೂಪ ॥ ೩೫

ಮುದದೆ ಶ್ರೀ ರಂಗ ಪಟ್ಟಣದೊಳಗಗಣಿತ
ಬುಧ ಕುಲಕನ್ನ ಸತ್ರಗಳ ।
ಚದುರ ಶೇಖರ ಕಂಠೀರವ ಮಾಡಿಸಿ
ಪದುಳವ ಬೀರಿದ ಜಗಕೆ ॥ ೩೬

ಆರಾಮವಗ್ರಾರ ಧರ್ಮ ತಟಾಕಗಳ್
ಚಾರುತರದ ದೇವಾಲ್ಯ ।
ಧಾರಿಣಿಯೊಳಗೆ ಕಂಠೀರವೇಶ್ವರನಿಂದ
ಪೂರೈಸಿ ಮೆರೆದುವರ್ತಿಯಲಿ ॥ ೩೭

ಪಿರಿದೆನಿಸುವ ನಾಲ್ಕು ವೇದ ಶಾಸ್ತ್ರಗಳಾರು
ಸುರುಚಿರ ನೀತಿ ಧರ್ಮಗಳು ।
ದೊರೆ ರಾಯನ ರಾಜ್ಯದೊಳಗೆ ಭೂ ಸುರರೊಳು
ಮೆರೆದುವು ಪರಿ ಪೂರ್ಣವಾಗಿ ॥ ೩೮

ಲೆಕ್ಕವಿಲ್ಲದೆ ಮುಂಜಿ ಮದುವೆಯು ದ್ವಿಜ ಕುಲ
ಕಕ್ಕರೊಳಗೆ ಮಿಗೆ ರಚಿಸಿ ।
ದಿಕ್ಕು ದಿಕ್ಕಲಿ ಕೀರ್ತಿ ಪಡೆದ ಕಂಠೀರವ
ಸಕ್ಕರೆ ವಿಲ್ಲನ ರೂಪ ॥ ೩೯

ಬಿಡದೆ ಸು ಧರ್ಮ ದೇವತೆ ನಾಲ್ಕು ಚರಣದೊ
ಳಡಿಯಿಟ್ಟು ಭೂ ವರನಾಳ್ವ ।
ಪೊಡವಿಯೊಳತಿ ಸಂತೋಷದೊಳಿರುತಿಹ
ಬೆಡಗನದೇನ ಬಣ್ಣಿಸುವೆ ॥ ೪೦

ಚಾಮುಂಡಿ ದೇವಿಯ ಕೃಪೆಯಿಂದ ಶೌರ್ಯೋ
ದ್ದಾಮನಾಗಿಯೆ ಕನ್ನಡಪ ।
ಪ್ರೇಮದೆ ಸಲಹಿ ಕಂಠೀರವ ರಾಜ ಸು
ತ್ರಾಮ ಭೋಗದೊಳೊಪ್ಪುತಿರ್ದ ॥ ೪೧

ಪರ ಶಿವ ತ್ರಿಣಯನ ಕೃಪೆಯಿಂ ಧರೆಯೊಳು
ಹಿರಿದು ಸಂತಾನವ ಪಡೆದು ।
ನರಸ ರಾಜೇಂದ್ರ ಸು ಸ್ಥಿರ ಸಾಮ್ರಾಜ್ಯದ
ಸಿರಿಯ ಸಂಭ್ರಮದೊಳೊಪ್ಪಿದನು ॥ ೪೨

ರಂಗ ಧಾಮನ ಕರುಣದೆ ದಿನಚರಿ ದಿವ್ಯ
ಮಂಗಳೋತ್ಸವ ಪೂರ್ಣನಾಗಿ ।
ತುಂಗ ವಿಕ್ರಮ ಕಂಠೀರವ ನರಸೇಂದ್ರ
ಕಂಗೊಳಿಸಿದನರ್ತಿಯಲಿ ॥ ೪೩

ನರ ಸಿಂಹನ ಕಾರುಣ್ಯದೆ ಸೌಭಾಗ್ಯ
ಕರನಾಗಿ ಸಕಲ ರಾಜ್ಯವನು ।
ಪರಿ ಪಾಲಿಸುತ ಕಂಠೀರವ ನರಸೇಂದ್ರ
ದೊರೆ ರಾಯ ಮೆರೆದ ಠೀವಿಯಲಿ ॥ ೪೪

ಧರೆ ರವಿ ಶಶಿ ಯುಳ್ಳನ್ನ ಸಕಲ ಭಾಗ್ಯ
ಹಿರಿದಾಗಿ ಸಂತಾನ ಸಹಿತ ।
ನೆರೆ ಧರ್ಮ ಶೌರ್ಯದೆ ಕಂಠೀರವ ರಾಜ
ಸ್ಥಿರ ಸಾಮ್ರಾಜ್ಯದೊಳಿರಲಿ ॥ ೪೫

* ದೇವನ ನರ ಸಿಂಹ ರಾಯನ ಕೃಪೆಯಲಿ
† ಭೂ ವಲಯಕೆ ದೊರೆಯಾಗಿ ।
ತೀವಿದ ಸತ್ಕೀರ್ತಿ ಸಹ ಕಂಠೀರವ
ಭೂ ವರ ಸುಖದೊಳೊಪ್ಪಿರಲಿ ॥ ೪೬

---

* ಧರೆಯಲಿ. † ಸಕಲಪೃಥ್ವೀವಲಯಕ್ಕೆ

ದೊರೆ ರಾಯ ಕಂಠೀರವ ನರಸೇಂದ್ರನ
ಪರಮ ಮಂಗಳ ಪುಣ್ಯ ಚರಿತೆ ।
ವರ ಸೋಮಾರ್ಕರುಳ್ಳನ್ನ ಸುಸ್ಥಿರವಾಗಿ
ಧರೆಯೊಳು ಪರಿಶೋಭಿಸಿರಲಿ ॥ ೪೭

ಈ ಮಹಿಮನ ಚರಿತೆಯ ಲಾಲಿಸಿ ಕೇಳ್ವ
ಭೂಮಿಯೊಳ್ ಸುಜನ ಸಂತತಿಗೆ ।
ಸ್ವಾಮಿ ಶ್ರೀ ಲಕ್ಷ್ಮೀ ನರ ಸಿಂಹ ವರವಿತ್ತು
ಪ್ರೇಮದೆ ಸಲಹುವನೊಲಿದು ॥ ೪೮

ಅರಿ ನೃಪ ಗಜ ಕಂಠೀರವ ಮೈಸೂರ
ನರಸ ರಾಜೇಂದ್ರ ಚಂದ್ರಮನ ।
ಚರಿತೆಯ ಲಾಲಿಸಿದವರಿಗಿಷ್ಟಾರ್ಥವ
ಕರುಣಿಸುತಿಹನಾ ತ್ರಿಣೇತ್ರ ॥ ೪೯

ಇದು ಸೋಮ ವಂಶ ವಾರಿಧಿ ಪೂರ್ಣ ಚಂದ್ರನ
ಚದುರ ಕಂಠೀರವೇಶ್ವರನ ।
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದ ಸು ಧರ್ಮಾನುಬಂಧಿ ॥ ೫೦

೨೬ನೆಯ ಸಂಧಿ ಸಮಾಪ್ತಂ.

---

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿ ವಾಹನ ಶಕ ೧೫೭೦ ಸಂದ ಸರ್ವಧಾರಿ ಸಂವತ್ಸರದ ಜ್ಯೇಷ್ಠ ಶುದ್ಧ ೧೧ ಚಂದ್ರ ವಾರದಲ್ಲು ಶ್ರೀ ಮನ್ಮಹಾ ದೇವ ದೇವೋತ್ತಮನಾದ ಶ್ರೀ ಲಕ್ಷ್ಮೀ ನರ ಸಿಂಹನು ಕಂಠೀರವ ನರಸ ರಾಜೇಂದ್ರನಿಗೆ ಆಯುರಾರೋಗ್ಯೈಶ್ವರ್ಯಾಭಿವೃದ್ಧ್ಯಷ್ಟ ಪುತ್ರ ಬಹುಧನವನು ಕೊಟ್ಟು ರಕ್ಷಿಸಲಿಯೆಂದು ರಂಗ ನಾಥ ಸ್ವಾಮಿಯ ಕೃಪೆಯಿಂದ ಶ್ರೀನಿವಾಸ ಪಂಡಿತರ ಮಗ ಗೋವಿಂದ ವೈದ್ಯನು ಕಂಠೀರವ ನರಸ ರಾಜ ವಿಜಯುವನ್ನು ವಿರಚಿಸಿ ಆ ಚಂದ್ರಾರ್ಕವಾಗಿ ಭೂಮಿ ಯೊಳಿರಲಿಯೆಂದು ಭಾರತಿ ನಂಜನ ಮುಖದಿಂದ ವಾಚಿಸಿ ರಾಜ ಸ್ಥಾನದಲ್ಲಿ ವಿಸ್ತಾರ ಪಡಿಸಿದುದು.

* ಅಬ್ಧಿ ಗಡಿ ಮಿತಿಯುಂಟು ಬುದ್ಧಿ ಗಡಿ ಮಿತಿಯಿಲ್ಲ
ಬುದ್ಧಿವಂತರು ನೋಡಿ ತಿದ್ದಿಕೊಳ್ವುದು ಕೂಡಿ ।
ವಿದ್ಯೆ ಕಲಿತಾ ಪ್ರೌಢ ವಿದ್ಯೆವಂತರ ರೂಢ
ಪಾದ ಪದ್ಮಗಳನ್ನು ಮೋದದೆರಗುವೆನಿನ್ನು ॥

ಕಂಠೀರವ ನರಸ ರಾಜ ವಿಜಯಂ ಸಮಾಪ್ತಂ.



* ಅಬ್ಧಿ ಗಡಿಮಿತಿಯಿಲ್ಲ ಬುದ್ಧಿ ಗಡಿಮಿತಿಯುಂಟು
ಬುದ್ಧಿವಂತರು ನೋಡಿ ತಿದ್ದಿಕೊಳ್ವುದುಕೂಡಿ ।
ವಿದ್ಯೆಕವಿತಾಪ್ರೌಢ ವಿದ್ವಾಂಸರುಗಳಪಾದ
ಪದ್ಮಗಳಿಗಭಿನಮಿಸುವೆ ॥